॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ—೧೯

# ಶ್ರೀ ಲಿಂಗಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ)

ಉತ್ತರಭಾಗ—ಸಂಪುಟ ೫

ಅಧ್ಯಾಯಗಳು ೧—೨೧


ಅನುವಾದಕ:

ಆಸ್ಥಾನ ಮಹಾವಿದ್ವಾನ್

**ಎಡತೊರೆ ಚಂದ್ರಶೇಖರ ಶಾಸ್ತ್ರೀ, ಎಂ.ಎ.**

**ಸಾಹಿತ್ಯ ವಿದ್ವಾನ್**





**ಮೈಸೂರು:**

**ಬೆಂಗಳೂರು ಪ್ರೆಸ್ ಬ್ರಾಂಚ್**

**೧೯೪೭**

# ಮುನ್ನುಡಿ

॥ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

ಪುರಾಣಗಳವ್ಯಾಸಂಗದಿಂದ ಮಾನವರಿಗೆ ಆಗುತ್ತಲೂ ಆಗಬೇಕಾಗಿಯೂ ಇರುವ ಪ್ರಯೋಜನಗಳಲ್ಲಿ ಮುಖ್ಯವಾದುದು ಆಸ್ತಿಕತೆಯಾಗಿದೆ. ಆಸ್ತಿಕತೆ ಎಂದರೆ ದೇವರು ಇದಾನೆಂದು ನಂಬುವುದುಮಾತ್ರವಲ್ಲವು. ಈ ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳನ್ನು ನೆರವೇರಿಸುತ್ತಿರುವ ದೇವರ ಇಚ್ಛೆಯೇ ಧರ್ಮವು. ಜನರು ತಮ್ಮ ದಿನಗಟ್ಟಲೆಯ ಜೀವನಕ್ರಮದಲ್ಲಿ ಈ ಧರ್ಮವನ್ನು ಆಚರಿಸುತ್ತಿರುವಂತೆಯೂ, ದೇವರಿಗೆ ಇಷ್ಟವಲ್ಲದ ಅಧರ್ಮವನ್ನು ಆಚರಿಸದೆ ಇರುವಹಾಗೂ ಆಗಿರುವುದಕ್ಕೆ ಆಸ್ತಿಕತೆ,ಎಂದು ಹೇಳಬೇಕು. ಮಾನವನು ಕರ್ಮಗಳನ್ನು ಮಾಡಿಯೂ, ಮಾಡುತ್ತಲೂ ಇರುತ್ತಾನೆ. ಇವುಗಳಿಂದ ಸುಖಪ್ರಾಪ್ತಿಯೂ, ದುಃಖಪ್ರಾಪ್ತಿ, ಅಥವಾ ದುಃಖದ ನಿವೃತ್ತಿಯೂ ಫಲಿಸುತ್ತಿರುತ್ತವೆ. ಅನುಭವದಿಂದ ಇದನ್ನು ಮನಗಂಡ ಮಾನವನು ದಾನವತೆಯನ್ನು ಬಿಟ್ಟು ದೇವತ್ವಕ್ಕೆ ಏರಲು ಉದ್ದೇಶಿಸುತ್ತಾನೆ ಇಂತಹ ವಿವೇಕಿಗಳೂ, ಮುಂದಾಲೋಚನೆಯುಳ್ಳವರೂ ಆಗಿರುವ ದೊಡ್ಡಜನರ ಉದಾಹರಣೆಗಳನ್ನು ಪುರಾಣಗಳಲ್ಲಿ ಹೇರಳವಾಗಿ ಬಗೆಬಗೆಯಾಗಿ ವರ್ಣಿಸಿರುತ್ತದೆ. ಈ ತಿಳಿವಳಿಕೆಯಿಂದ ಜನಜೀವನವು ಧರ್ಮದ ಅಥವಾ ನೀತಿಯ ಅವಲಂಬನೆಯಿಂದ ಮೇಲ್ಪಡುತ್ತಿರುತ್ತದೆ.

ಅಲ್ಲದೆ ಜನರು ಭಿನ್ನಭಿನ್ನವಾದ ರುಚಿಸಂಸ್ಕೃತಿಗಳಿಂದ ಕೂಡಿರುವುದು ಕಾಣಬರುತ್ತದೆ. ದೇವರೇ ಇಲ್ಲವೆಂದು ಹೇಳುವವರೂ ಇದಾರೆ. ಆದರೆ ಇವರ ಸಂಖ್ಯೆಯು, ತಿಳಿವಳಿಕೆಯು ಮುಂದುವರಿದಹಾಗೆಲ್ಲ,ಕಡಿಮೆಯಾಗುತ್ತಿದೆ. ದೇವರು ಇದಾನೆಂದು ಸ್ಥಾಪಿಸುವುದು ಎಷ್ಟುಕಷ್ಟವೋ, ಹಾಗೆಯೇ

ದೇವರು ಇಲ್ಲವೆಂದು ನಿರ್ಧರಿಸುವುದೂ ಕಷ್ಟತರವಾಗಿಯೇ ಇದೆ. ಎಂದು ಸಂಶಯವಾದಿಗಳು ಹೇಳುತ್ತಿದಾರೆ. ದೇವರು ಸಗುಣನೂ ಸಾಕಾರನೂ ಆಗಿದಾನೆಂದು ಶೈವರೂ, ವೈಷ್ಣವರೂ, ಶಾಕ್ತೇಯರೂ ನಂಬುತ್ತಾರೆ. ದೇವರು ಸಗುಣನಾಗಿ ನಿರಾಕಾರನಾಗಿದಾನೆಂದು ಮುಸಲ್ಮಾನರೂ ಕ್ರಿಶ್ಚಿಯನ್ನರೂ ನಂಬಿದಾರೆ. ದೇವರು ಇದಾನೆ. ಆದರೆ ಆ ದೇವರು ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುತ್ತಿರುವುದಿಲ್ಲವು. ಮುಂದುವರಿಯಬೇಕೆನ್ನುವ ಮಾನವರಿಗೆ ಮೇಲು ಪಂಙ್ಕ್ತಿಯಾಗಿಮಾತ್ರ ಇರುತ್ತಾನೆ. ಎಂದು ಜೈನರು ಹೇಳುತ್ತಾರೆ. ಬೌದ್ಧರು, ದೇವರಿದಾನೆಂದು ಬುದ್ಧನು ಹೇಳಿಲ್ಲವಾದರೂ, ಧಾರ್ಮಿಕಜೀವನದಿಂದಲೇ ಜನರಿಗೆ ಶ್ರೇಯಸ್ಸಾಗುವುದೆಂದು ಹೇಳಿರುವುದರಿಂದ, ಅದೇ ಸರಿ. ಅಷ್ಟು ಸಾಕು, ಎನ್ನುತ್ತಾರಾದರೂ, ಬುದ್ಧನನ್ನೇ ದೇವರೆಂದು ಆರಾಧಿಸುವುದು ಅವರಲ್ಲೂ ರೂಢಿಗೆ ಬಂದಿದೆ. ಸಾಂಖ್ಯರಲ್ಲಿ ಕೆಲವರೂ, ಮೀಮಾಂಸಕರಲ್ಲಿ ಕೆಲವರೂ, ದೇವರನ್ನು ಒಪ್ಪದಿದ್ದರೂ, ಧರ್ಮ ಅಥವಾ ಕರ್ಮವೇ ಜನರ ಕಲ್ಯಾಣಕ್ಕೆ ಸಾಕಾದ ಸಾಧನವಾಗಿದೆ. ಎನ್ನುತ್ತಾರೆ. ಅದ್ವೈತ ವೇದಾಂತಿಗಳು ದೇವರು ನಿರಾಕಾರನೂ ನಿರ್ಗುಣನೂ ಆಗಿದಾನೆ. ಇವನ ಈ ವಾಸ್ತವ ಸ್ವರೂಪವು ಸಚ್ಚಿದಾನಂದ ರೂಪವಾದುದು. ಆದರೆ ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ನಿರ್ವಾಹವೆಂಬ ವ್ಯಾವಹಾರಿಕ ರೂಪದಲ್ಲಿ ಇವನು ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆಗಿರಬೇಕಾದ ಪರಮೇಶ್ವರನೆನಿಸಿಕೊಳ್ಳುತ್ತಾನೆ ಈ ನಿರ್ವಾಹಶಕ್ತಿಗೆ ಮಾಯಾ, ಆದಿಶಕ್ತಿ ಅಥವಾ ಪರಾಶಕ್ತಿ ಎಂದು ಹೆಸರು. ಇದಕ್ಕೆ ಅವಿದ್ಯಾ, ಅಜ್ಞಾನ, ಎಂದರೆ ಪರತತ್ವದ ತಿಳಿವಳಿಕೆ ಇಲ್ಲದಿರುವಿಕೆ, ಎಂದು ವ್ಯವಹಾರವಿದೆ. ಕರ್ಮ ಅಥವಾ ಧರ್ಮದ ಆಚರಣೆಯಿಂದ, ಅದರಲ್ಲಿಯೂ ನಿಷ್ಕಾಮಕರ್ಮಾಚರಣೆಯಿಂದ, ಚಿತ್ತದಲ್ಲಿರುವ ರಾಗದ್ವೇಷ ಮುಂತಾದ ಮಲಗಳು ತೊಲಗಿ ಶುದ್ಧವಾಗಲು, ಪರತತ್ವದ ಸ್ವರೂಪವು ಜನರಿಗೆ ಗೊತ್ತಾಗಿ, ಜೀವರೂ, ಬ್ರಹ್ಮತತ್ವವೂ, ಸಚ್ಚಿದಾನಂದ ರೂಪದಲ್ಲಿ ಅಭಿನ್ನರು, ಎಂಬ ಬ್ರಹ್ಮಾತ್ಮೈಕ್ಯದ ಸಾಕ್ಷಾತ್ಕಾರ ಅಥವಾ ಅಪರೋಕ್ಷಾನುಭವವಾಗುತ್ತದೆ. ಇದೇ ಮೋಕ್ಷವೆಂಬ ಪರಮಪುರುಷಾರ್ಥವು. ಎಂದು ಹೇಳುತ್ತಾರೆ.

ಹೀಗೆ ನಾನಾ ಬಗೆಯಾಗಿರುವ ಜನರ ರುಚಿ ಸಂಸ್ಕೃತಿಗಳಿಗೆ ಅನುಕೂಲವಾಗಿ ಮುಂದುವರಿಯಲು ಸಹಾಯವಾಗಲೆಂದು ವ್ಯಾಸರು ಹದಿನೆಂಟು ಮಹಾಪುರಾಣಗಳನ್ನೂ ಮತ್ತು ಅನೇಕ ಉಪಪುರಾಣಗಳನ್ನೂ, ಇತಿಹಾಸಗಳನ್ನೂ ರಚಿಸಿ, ಶಿಷ್ಯರಿಗೆ ಬೋಧಿಸಿ ಪ್ರಚಾರಕ್ಕೆ ಬರುವಂತೆ

ಮಾಡಿರುತ್ತಾರೆ. ಇವುಗಳಲ್ಲಿ ಶೈವ ಪುರಾಣಗಳು, ವೈಷ್ಣವ ಪುರಾಣಗಳು, ಶಾಕ್ತೇಯಪುರಾಣಗಳು, ಎಂದು ಮೂರುಬಗೆಗಳನ್ನು ಕಾಣಬಹುದು. ಇವುಗಳಿಗೆ ಪರಸ್ಪರವಾಗಿ ವಿರೋಧವಿಲ್ಲವೆಂಬ ಅಂಶವನ್ನೂ, ಧರ್ಮಗಳಲ್ಲಿ ಸಾಮರಸ್ಯವನ್ನು ಹೇಗೆ ಮನಗಾಣಬಹುದೆಂಬ ಅಂಶವನ್ನೂ, ಅದರಿಂದ ವ್ಯಾಸರು ಜನರಿಗೆ ಉಪಕಾರವನ್ನೇ ಮಾಡಿರುವರೇ ಹೊರತು, ಅಪಕಾರವೇ ನನ್ನೂ ಮಾಡಿಲ್ಲವೆಂಬ ಅಂಶವನ್ನೂ, ಆದಿಪುರಾಣದ ಮುನ್ನುಡಿಯಲ್ಲಿ ವಿವರಿಸಿರುತ್ತೇನೆ.

ಈ ಲಿಂಗಮಹಾಪುರಾಣದಲ್ಲಿ ಶಿವನ ಸರ್ವೋತ್ಕರ್ಷವನ್ನು ಮುಖ್ಯ ವಾಗಿ ಪ್ರತಿಪಾದಿಸಿದ್ದರೂ, ಅನನ್ಯವಾದ, ನಿರತಿಶಯವಾದ ಶಿವಭಕ್ತಿ ಯಲ್ಲಿಯೇ ಮಾನವನ ಮನಸ್ಸು ನಿಲ್ಲದೆ, ಇತರ ದೇವರಲ್ಲಿ ಭಕ್ತಿಯೂ, ಇತರ ಧರ್ಮಗಳಲ್ಲಿ ಆದರವೂ ಮನೋವೈಶಾಲ್ಯದಿಂದ ಬೆಳೆಯುತ್ತಾ ಇರುವಂತಾಗಲೆಂಬ ಉತ್ತಮವಾದ ಧ್ಯೇಯವನ್ನೂ ಸಾಧಿಸಿರುವುದನ್ನು ಮನಗಾಣಬಹುದು. ಪರಮೇಶ್ವರನ ಆರಾಧನೆಗೆ ಎಂದರೆ, ಪೂಜಾ, ಧ್ಯಾನ, ಉಪಾಸನೆ, ಇವುಗಳಿಗಾಗಿ ಉತ್ತಮವಾದ ಪ್ರತೀಕವಂತಿರುವ ಲಿಂಗದ ಸ್ವರೂಪವನ್ನು ವಿವರಿಸಿರುವುದು ಹೀಗಿದೆ. ಲಿಂಗದ ಬಲಭಾಗದಲ್ಲಿ ವಿಷ್ಣು ವನ್ನೂ ಎಡಭಾಗದಲ್ಲಿ ಬ್ರಹ್ಮನನ್ನೂ, ಮಧ್ಯದಲ್ಲಿ ಶಿವನನ್ನೂ, ಲಿಂಗದ ಬುಡದಲ್ಲಿ ಬ್ರಹ್ಮನನ್ನೂ, ಮಧ್ಯದಲ್ಲಿ ವಿಷ್ಣುವನ್ನೂ, ಶಿರಸ್ಸಿನಲ್ಲಿ ಶಿವನನ್ನೂ ಧ್ಯಾನಿಸಬೇಕೆಂದು ಹೇಳಿದೆ. ಈ ಅಂಶವನ್ನು ಈ ಪುರಾಣದ ಪೂರ್ವಭಾಗ ದಲ್ಲಿ ಹೇಳಿರುವಂತೆ ಈ ಉತ್ತರಭಾಗದಲ್ಲೂ ನಿರೂಪಿಸಿದೆ. ದೇವರನ್ನು ಧ್ಯಾನಿಸಿದಹಾಗೆಲ್ಲಾ ನಮ್ಮ ಮನಸ್ಸು ದೇವರಂತೆಯೇ ದೊಡ್ಡದಾಗುತ್ತಾ ಬರಬೇಕಾದುದು ಎಲ್ಲರೂ ಬಯಸುವ ಫಲವಾಗಿದೆ. ಈ ಪ್ರಯೋಜನಕ್ಕೆ ಅನುನಾದವಾಗಿ ಈ ಪುರಾಣದಲ್ಲಿ ಶಿವ ವಿಷ್ಣುಗಳಿಗೆ ಭೇದವಿಲ್ಲವೆಂದೂ, ಹೆಚ್ಚು ಕಡಿಮೆಗಳನ್ನು ತಿಳಿಯಬಾರದೆಂದೂ, ಈ ಭೇದಜ್ಞಾನದಿಂದ ಕೆಡಕೇ ಆಗುವುದೆಂದೂ, ಶ್ರೇಯಸ್ಸು ಆಗುವುದಿಲ್ಲವೆಂದೂ ಹೇಳಿದೆ. ಈ ಸರಣಿ ಯನ್ನು ಅನುಸರಿಸಿ ಈ ಉತ್ತರಭಾಗದ ಮೊದಲಿನಿಂದಲೂ ವಿಷ್ಣು ಭಕ್ತಿಯ ಮಹಿಮೆ, ಫಲ ಇವುಗಳನ್ನು ತಿಳಿಯ ಹೇಳಿದೆ. ಭಕ್ತಿಗೂ ಗಾನಕ್ಕೂ ನಿಕಟಸಂಬಂಧವಿದೆ ಎಂಬ ಅಂಶವನ್ನು ಅನೇಕರು ಒಪ್ಪುತ್ತಾರೆ. ಈ ಅಂಶವನ್ನು ಮನಗಾಣಿಸುವುದಕ್ಕಾಗಿಯೇ ನಾರದನು ಸಂಗೀತ ಶಾಸ್ತ್ರದಲ್ಲಿ ಸರ್ವಾತಿಶಾಯಿಯಾದ ಪಾಂಡಿತ್ಯವನ್ನು ಪಡೆದಬಗೆಯನ್ನು ವಿಸ್ತಾರವಾಗಿ ವರ್ಣಿಸಿದೆ. ಗಾನದಮಹಿಮೆ, ಕ್ರಮ, ಫಲಗಳನ್ನು ಹೇಳಿ, ಗಾಯಕನು ಬಿಡಬೇಕಾದ ದೋಷಗಳನ್ನೂ, ರೂಢಿಸಬೇಕಾದ ಗುಣಗಳನ್ನೂ ವಿವರಿಸಿ

ಹೇಳಿರುವುದೂ ಒಂದು ವಿಶೇಷವಾಗಿದೆ. ಎಲ್ಲಕ್ಕಿಂತಲೂ ಮೇಲಾಗಿ ಪರಮೇಶ್ವರನ ಅಷ್ಟಮೂರ್ತಿ ಸ್ವರೂಪವನ್ನೂ, ವಿರಾಟ್ ಸ್ವರೂಪವನ್ನೂ, ಚರಾಚರ ಜಗದ್ರೂಪತ್ವವನ್ನೂ, ವಿವರಿಸುತ್ತಾ, ಶಿವಶಕ್ತ್ಯೈಕ್ಯವನ್ನೂ ತಿಳಿಯ ಹೇಳಿದೆ. ಬ್ರಹ್ಮಾ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಿಗೆ ಮತ್ತು ಅವರ ಸಹ ಧರ್ಮಿಣಿಯರಾದ, ವಾಣೀ, ಲಕ್ಷ್ಮೀ, ಉಮಾದೇವಿಯರಿಗೆ ಮೂಲಕಾರಣಳಾದ ಆದಿಶಕ್ತಿ ಅಥವಾ ಪರಾಶಕ್ತಿಯ ಸ್ವರೂಪವನ್ನು ವಿವರಿಸುತ್ತಾ, ಈ ಶಕ್ತಿಯೇ ವೇದಾಂತ ಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ಮಾಯಾತತ್ವವೆಂದೂ ಹೇಳಿದೆ. ಅಲ್ಲದೆ ಶಿವ ವಿಷ್ಣುಗಳಿಗೆ ಅಭೇದವನ್ನು ತಿಳಿಯಬೇಕೆಂಬಂತೆ, ಶಿವಶಕ್ತಿಗಳಿಗೂ ಅಭೇದವನ್ನು ಧ್ಯಾನಿಸಬೇಕೆಂದೂ, ಅದರಿಂದಲೇ ಶ್ರೇಯಸ್ಸಾಗುವುದೆಂದೂ, ಶಿವನ ಉಪಾಸನೆಯಿಂದ ಶಕ್ತಿಯ ಆರಾಧನೆಯೂ ಆಗುವ ಹಾಗೆ, ಶಕ್ತಿಯಧ್ಯಾನದಿಂದ ಶಿವನ ಆರಾಧನೆಯೂ ಆಗುತ್ತದೆಂದು ಹೇಳಿದೆ.

**ಪರಮಾತ್ಮಾ ಶಿವಃ ಪ್ರೋಕ್ತಃ ಶಿವಾ ಸಾ ಚ ಪ್ರಕೀರ್ತಿತಾ ।**
**ಶಿವಮೇವೇಶ್ವರಂ ಪ್ರಾಹುಃ ಮಾಯಾಂ ಗೌರೀಂ ವಿದುರ್ಬುಧಾಃ**

ಅ. ೧೧. ಶ್ಲೋ. ೩. ಎಂದು ಶಿವನ ವಿರಾಡ್ರೂಪವನ್ನು ಉಪದೇಶಿಸಿ, ಅದನ್ನೇ ಮುಂದುವರಿಯಿಸುತ್ತಾ

**ಸರ್ವೇ ಸ್ತ್ರೀಪುರುಷಾಃ ಪ್ರೋಕ್ತಾಃ ತಯೋರೇವ ವಿಭೂತಯಃ ॥**

ಅ. ೧೧. ಶ್ಲೋ. ೨೦.

**ಸರ್ವೇ ಲಿಂಗಮಯಾ ಲೋಕಾಃ ಸರ್ವೇ ಲಿಂಗೇ ಪ್ರತಿಷ್ಠಿತಾಃ !**

ಅ. ೧೧. ಶ್ಲೋ. ೪೦. ಎಂದೂ ಹೇಳಿದೆ. ಇಷ್ಟೇ ಅಲ್ಲದೆ ಜನರ ಜೀವನಕ್ರಮದಲ್ಲಿ ನೀತಿಧರ್ಮಗಳ ಆಚರಣೆಯಿಂದ, ಕರ್ಮಗಳ ಅನುಷ್ಠಾನದಿಂದ, ನಿಷ್ಕಾಮ ಕರ್ಮಯೋಗದಿಂದ, ಮಾತ್ರವೇ ಹೇಗೆ ಶ್ರೇಯಸ್ಸನ್ನು ಎಲ್ಲರೂ ಪಡೆಯಬಹುದೆಂಬುದನ್ನು ತುಂಬಾ ಹೃದಯಂಗಮವಾಗಿ ಹೀಗೆ ವಿವರಿಸಿದೆ.

**ಪ್ರಾಣಿನೋ ಯಸ್ಯ ಕಸ್ಯಾಪಿ ಕ್ರಿಯತೇ ಯದ್ಯನುಗ್ರಹಃ ।**
**ಅಷ್ಟಮೂರ್ತೇರ್ಮಹೇಶಸ್ಯ ಕೃತಮಾರಾಧನಂ ಭವೇತ್ ।**
**ನಿಗ್ರಹಶ್ಚೇತ್ಕೃತೋ ಲೋಕೇ ದೇಹಿನೋ ಯಸ್ಯ ಕಸ್ಯ ಚಿತ್ ।**
**ಅಷ್ಟಮೂರ್ತೇರ್ಮಹೇಶಸ್ಯ ಸ ಏವ ವಿಹಿತೋ ಭವೇತ್ ।**

ಅ. ೧೩. ಶ್ಲೋ. ೩೦. ೩೧. ೩೨.

♥

**ಸರ್ವೋಪಕಾರಕರಣಂ ಪ್ರದಾನಮುಭಯಸ್ಯ ಚ ।**
**ಆರಾಧನಂ ತು ದೇವಸ್ಯ ಅಷ್ಟಮೂರ್ತೇರ್ನ ಸಂಶಯಃ ॥**
ಅ. ೧೩. ಶ್ಲೋ. ೩೫.

ಇಂತಹ ಧರ್ಮಾಚರಣೆಯಿಂದ ಪ್ರಪಂಚದಲ್ಲಿರುವ ಎಲ್ಲಾ ಮತಗಳಲ್ಲೂ, ಧರ್ಮಪಂಥಗಳಲ್ಲೂ, ಸಹಾನುಭೂತಿ, ಗೌರವ, ಆದರಗಳು ಬೆಳೆಯುವಂತಾಗಿ ಜಗತ್ಕಲ್ಯಾಣ ಸಾಧನೆಗೆ ಅವಶ್ಯಕವಾಗಿ ಬೇಕಾಗಿರುವ, ಏಕಮಾತ್ರಸಾಧನವಾದ, ವಿಶ್ವಧರ್ಮದ ಅರಿವು ಆಚರಣೆಗಳು ರೂಢಿಗೆ ಬರುತ್ತವೆ. ಕಡೆಗೆ

**ಸರ್ವಲೋಕೈಕ ಸಂಹರ್ತಾ ಸರ್ವಲೋಕೈಕ ರಕ್ಷಿತಾ ।**
**ಸರ್ವಲೋಕೈಕ ನಿರ್ಮಾತಾ ಪಂಚಬ್ರಹ್ಮಾತ್ಮಕಶ್ಶಿವಃ ॥**
ಅ. ೧೪. ೩. ಎಂದೂ ಪರಶಿವನ ಪರಮೋತ್ಕರ್ಷವನ್ನು ನಿರೂಪಿಸಿದೆ.

ಶ್ರೀಮದ್ರಾಮಾಯಣದಲ್ಲಿ ಶ್ರೀರಾಮನು ರಾವಣನನ್ನು ಸಂಹರಿಸಿ, ವಿಭೀಷಣನಿಗೆ ರಾಜ್ಯಾಭಿಷೇಕವನ್ನು ಮಾಡಿಸಿ, ಸೀತಾದೇವಿಯೊಡನೆ ಹಿಂತಿರುಗಿ ಪುಷ್ಪಕವಿಮಾನದಲ್ಲಿ ಪ್ರಯಾಣಮಾಡಿ ಬರುತ್ತಾ, ದಾರಿಯಲ್ಲಿ ವಿಶೇಷ ಸ್ಥಳಗಳನ್ನು ಸೀತಾದೇವಿಗೆ ತೋರಿಸುತ್ತಾ, ಆ ವಿಷಯವನ್ನು ವಿವರಿಸುವ ಸಂದರ್ಭದಲ್ಲಿ

**ಅತ್ರ ಪೂರ್ವಂ ಮಹಾದೇವಃ ಪ್ರಸಾದಮಕರೋತ್ಪ್ರಭುಃ ।**
ಯುದ್ಧಕಾಂಡ. ಅ. ೧೨೬ ಶ್ಲೋ ॥ ೧೮ ಎಂದು ಶ್ರೀರಾಮನು ಹೇಳಿರುತ್ತಾನೆ. ಶ್ರೀರಾಮೇಶ್ವರ ಕ್ಷೇತ್ರದಲ್ಲಿ ಶ್ರೀರಾಮನು ಶಿವಲಿಂಗವನ್ನು ಪ್ರತಿಷ್ಠಿಸಿ ಶಿವಾರ್ಚನೆಯನ್ನು ಮಾಡಿದನೆಂದೂ, ಇತರ ಪುರಾಣಗಳಲ್ಲೂ, ಆ ಕ್ಷೇತ್ರಮಹಿಮೆಯಲ್ಲಿಯೂ, ಹೇಳಿದೆ. ಶ್ರೀವೈಷ್ಣವರು ಈ ಶ್ಲೋಕಕ್ಕೆ ಕಷ್ಟಪಟ್ಟು ಬೇರೆವಿಧವಾಗಿ ವ್ಯಾಖ್ಯಾನಮಾಡಲು ಪ್ರಯತ್ನಿಸುತ್ತಿರುತ್ತಾರೆ. ಇದನ್ನು ಹೃದಯ ಸಂಕೋಚದ ಗುರುತೆನ್ನಬಹುದು. ಈ ಲಿಂಗಮಹಾಪುರಾಣದಲ್ಲಿ ಶ್ರೀರಾಮನು ಶಿವಲಿಂಗವನ್ನು ಸ್ಥಾಪಿಸಿ ಪೂಜಿಸಿದನೆಂಬುದನ್ನು ಹೀಗೆ ಹೇಳಿದೆ.

**ವಿಷ್ಣುನಾ ರಾವಣಂ ಹತ್ವಾ ಸಸೈನ್ಯಂ ಬ್ರಹ್ಮಣಸ್ಸುತಂ ।**
**ಸ್ಥಾಪಿತಂ ವಿಧಿವದ್ಭಕ್ತ್ಯಾ ಲಿಂಗಂ ತೀರೇ ನದೀಪತೇಃ ॥**
ಅ. ೧೧ ಶ್ಲೋ ॥ ೩೮. ಆದುದರಿಂದ ಶಿವವಿಷ್ಣುಶಕ್ತಿಗಳಿಗೆ ಅಭೇದ

ವನ್ನು ತಿಳಿಸುವ ಮಹಾಪುರಾಣಗಳ, ಉಪಪುರಾಣಗಳ ಮತ್ತು ಇತಿಹಾಸಗಳ ಈ ಉದ್ದೇಶವನ್ನು ಸರಿಯಾಗಿ ಮನಗಾಣುವುದು ಎಲ್ಲರಿಗೂ ಶ್ರೇಯಸ್ಕರವಾದುದು.

ಈ ಸಂಪುಟದಲ್ಲಿ ೨೧ನೆಯ ಅಧ್ಯಾಯದಲ್ಲಿ ೧೦೫ ಶ್ಲೋಕಗಳು ಹೆಚ್ಚಾಗಿರುವುದು ಕಂಡುಬರುತ್ತದೆ. ಈ ಪುರಾಣವನ್ನು ಮುದ್ರಿಸುವಾಗ ಪಾಠಭೇದಗಳನ್ನು ತಿಳಿಯುವುದಕ್ಕೋಸ್ಕರ ದೇವನಾಗರೀಲಿಪಿಯಲ್ಲಿ ಮುದ್ರಿತವಾಗಿರುವ ಬೊಂಬಾಯಿನ ಎರಡು ಪುಸ್ತಕಗಳು, ಆಂಧ್ರಲಿಪಿಯಲ್ಲಿ (ಪ್ರಾಯಶಃ ಕಾಂಚೀ ಅಥವಾ ಮದ್ರಾಸಿನಲ್ಲಿ) ಮುದ್ರಿತವಾಗಿರುವ, ಪ್ರತಿ ಒಂದು, ಇವುಗಳನ್ನು ಅವಲಂಬಿಸಲಾಗಿದೆ. ಈ ಹೆಚ್ಚಿಗೆ ಶ್ಲೋಕಗಳು ತೆಲುಗು ಪ್ರತಿಯಲ್ಲಿ ಕಾಣಬರುತ್ತವೆಯೇ ಹೊರತು ದೇವನಾಗರೀ ಪ್ರತಿಗಳಲ್ಲಿ ಕಾಣಬರುವುದಿಲ್ಲ. ಅಲ್ಲದೆ ಈ ಲಿಂಗಮಹಾಪುರಾಣಕ್ಕೆ ಶಿವತೋಷಿಣೀ ಎಂಬ ಹೆಸರುಳ್ಳ ವ್ಯಾಖ್ಯಾನವೂ ಮುದ್ರಿತವಾಗಿದೆ. ಈ ಹೆಚ್ಚಿಗೆ ಶ್ಲೋಕಗಳಿಗೆ ಈ ವ್ಯಾಖ್ಯಾನವೂ ಇರುವುದಿಲ್ಲ. ಆದುದರಿಂದ ಈ ಭಾಗವು ದಾಕ್ಷಿಣಾತ್ಯರಿಂದ ಪ್ರಕ್ಷಿಪ್ತವಾಗಿರಬಹುದೆಂಬ ಊಹೆಗೆ ಅವಕಾಶವಿದೆ. ಈ ಭಾಗದಲ್ಲಿ ವೀರಶೈವರಲ್ಲಿ ರೂಢಿಯಲ್ಲಿರುವ ಶಿವದೀಕ್ಷಾ ಪ್ರದಾನಕ್ರಮ, ಶಿವಾರಾಧನೆಯ ರೀತಿ, ಲಿಂಗಧಾರಣೆ, ಮುಂತಾದುವನ್ನು ವಿವರಿಸಿದೆ. ಬಹು ಜನರ ಆದರಕ್ಕೆ ಪಾತ್ರವಾಗಿರುವ ಈ ಧರ್ಮವನ್ನು ತಿಳಿಸುವ ಗ್ರಂಥಭಾಗವನ್ನು ಬಿಡುವುದು ನ್ಯಾಯ್ಯವಾಗಲಾರದೆಂದು ಇದನ್ನೂ ಸೇರಿಸಿ ಮುದ್ರಿಸಲಾಗಿದೆ.

## ಏಕಂ ಸದ್ವಿಪ್ರಾ ಬಹುಧಾ ವದಂತಿ

ದೇವರು ಒಬ್ಬನೇ, ದೇವತತ್ತ್ವವು ಒಂದೇ ಆಗಿದೆ. ಅದನ್ನು ತಿಳಿವಳಿಕೆಯುಳ್ಳವರು ನಾನಾ ಬಗೆಯ ಹೆಸರುಗಳಿಂದ ಕರೆಯುತ್ತಾರೆಂದು ಋಕ್ ವೇದದ ಮಂತ್ರ ೨. ೩. ೨೨ ರಲ್ಲಿ ಹೇಳಿರುವಂತೆಯೇ, ಬ್ರಹ್ಮಾ, ವಿಷ್ಣು, ಶಿವ, ಶಕ್ತಿ, ಮುಂತಾದವರೂ ಆ ದೇವತತ್ತ್ವದ ರೂಪವಿಶೇಷಗಳೆಂದೂ ಎಲ್ಲ ಪುರಾಣಗಳಲ್ಲೂ ಹೇಳಿದೆ. ಹೀಗಿದ್ದರೂ ಒಂದೇ ಪುರಾಣದಲ್ಲೂ, ದೇವನ ಒಂದು ರೂಪವಿಶೇಷದಲ್ಲೂ, ಅನನ್ಯವೂ ಏಕಾಂತವೂ ಆದ ಭಕ್ತಿಯು ಆಳವನ್ನು ಪಡೆದಿರಬಹುದಾದರೂ, ಅಂಥವರು ಹೃದಯ ಸಂಕೋಚವನ್ನೂ ಪಡೆಯುತ್ತಾ, ಇತರ ಪುರಾಣಗಳಲ್ಲೂ, ದೇವನ ಇತರ ರೂಪವಿಶೇಷಗಳಲ್ಲೂ, ಆಯಾ ದೇವತಾಭಕ್ತರಲ್ಲೂ ಸಹಾನುಭೂತಿ, ಪ್ರೀತಿ, ಗೌರವ, ಆದರ, ಸಹಕಾರ, ಇವುಗಳನ್ನು ತೋರಿಸಲಾರದೆ

ಇರುತ್ತಾರೆ. ಅಲ್ಲದೆ ಅವರಲ್ಲಿ ವಿಶ್ವಧರ್ಮದ ಅರಿವು ಆಚರಣೆಗಳಿಗೆ ಅಡ್ಡಿಯುಂಟಾಗಿ, ಜಗತ್ತಿನ ಶಾಂತಿ ಸುಖಸಾಧನೆಯು ನೆರವೇರದೇ ಹೋಗುತ್ತದೆ. ಆದುದರಿಂದ ಎಲ್ಲ ಪುರಾಣಗಳನ್ನೂ ವ್ಯಾಸಂಗಮಾಡಿ, ಎಲ್ಲ ಧಾರ್ಮಿಕ ಪಂಥಗಳಲ್ಲೂ, ಎಲ್ಲ ಮತಧರ್ಮಗಳಲ್ಲೂ ಪ್ರೀತ್ಯಾದರಗಳನ್ನು ಪಡೆಯುವಷ್ಟು ಮನೋವೈಶಾಲ್ಯವನ್ನು ಎಲ್ಲರೂ ಪಡೆಯಬೇಕಾದುದು ಈಗ ಹೆಚ್ಚು ಆವಶ್ಯಕವಾಗಿದೆ.

ಇಂತಹ ಉತ್ತಮ ಫಲಸಾಧನೆಗೆ ಪ್ರಜೆಗಳಲ್ಲಿ ಧಾರ್ಮಿಕ ಗ್ರಂಥ ಪ್ರಚಾರಣವು ಅತ್ಯವಶ್ಯಕವಾದುದೆಂಬುದನ್ನು ಮನಗಂಡಿರುವ, ಧಾರ್ಮಿಕರೂ, ಪ್ರಜಾವತ್ಸಲರೂ ಆಗಿ ನಮ್ಮನ್ನಾಳುತ್ತಾ ದಯಮಾಡಿಸಿರುವ, ಶ್ರೀಮನ್ಮಹಾರಾಜ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ G. C B., G. C S. I.,** ಮಹಾಪ್ರಭುಗಳವರ ಆಜ್ಞಾನುಸಾರವಾಗಿ ಈ ಗ್ರಂಥವನ್ನೂ ಪ್ರಕಟಿಸಲಾಗಿದೆ. ಈ ಮಹಾನುಭಾವರ ಘನವಾದ ಈ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದೂ, ಈ ಮಹಾಶಯರಿಗೆ ಆಯುರಾರೋಗ್ಯ, ಐಶ್ವರ್ಯ, ಸತ್ಸಂತಾನ, ಮುಂತಾದ ಸಕಲ ಸೌಭಾಗ್ಯಗಳನ್ನೂ, ಇತೋಽಪ್ಯತಿಶಯವಾಗಿ ಕರುಣಿಸುವಂತೆಯೂ, ಜಗನ್ಮಾತೆಯಾದ ಶ್ರೀಚಾಮುಂಡೇಶ್ವರೀದೇವಿಯ ಚರಣ ಕಮಲಗಳಲ್ಲಿ ಸರ್ವದಾ ಪ್ರಾರ್ಥಿಸುತ್ತಿರುತ್ತೇನೆ.

ಮೈಸೂರು
ವ್ಯಯಸಂವತ್ಸರದ, ಪುಷ್ಯ ಶುಕ್ಲ
ದಶಮೀ ಗುರುವಾರ
ತಾ॥ 2-1-47.

ಎಡತೊರೆ ದೇವಯ್ಯ ದೀಕ್ಷಿತರ
ಮಗ
**ಚಂದ್ರಶೇಖರಶಾಸ್ತ್ರೀ**

# ವಿಷಯಗಳ ಸೂಚಿಕೆ

**ಒಂದನೆಯ ಅಧ್ಯಾಯ—**



**ಎರಡನೆಯ ಅಧ್ಯಾಯ—**



**ಮೂರನೆಯ ಅಧ್ಯಾಯ—**

ವಾಣಿಯುಂತೆ ಮಾನಸೋತ್ತರ ಪರ್ವತದಲ್ಲಿ ಗಾನ ಬಂಧುವೆಂಬ ಉಲೂಕ ಪಕ್ಷಿಯಲ್ಲಿ ಗಾನಾಭ್ಯಾಸ ಮಾಡಿದುದು ; ಅದರ ಆತ್ಮಕಥೆ ; ಭುವನೇಶನೆಂಬ ದೊರೆಯು ವೇದಾನಧಿಕಾರಿಗಳಿಗೆ ಮಾತ್ರ ಗಾನಾ ಭ್ಯಾಸದ ಅಪ್ಪಣೆಮಾಡಿದ್ದುದು ; ಹರಿಮಿತ್ರನೆಂಬ ಬ್ರಾಹ್ಮಣನ ವಿಷ್ಣುಭಜನೆ ; ಮತ್ತು ಸದ್ಗತಿ ಪ್ರಾಪ್ತಿ ; ಗಾನಕ್ರಮ, ಲಜ್ಜೆಯನ್ನು ಗಾಯಕನು ಬಿಡಬೇಕು ; ಗಾಯಕನಲ್ಲಿರಬೇಕಾದ ಗುಣಗಳು ಮತ್ತು ಬಿಡ ಬೇಕಾದ ದೋಷಗಳು ; ತುಂಬುರುವಿಗೆ ವೀಣೆಯಲ್ಲಿ ಸ್ವರದೇವತೆಗಳ ಸಾಕ್ಷಾತ್ಕಾರ ; ನಾರಾಯಣನು ನಾರದನನ್ನು ತುಂಬುರು ಸಮಾನನಲ್ಲವೆನ್ನಲು ಆ ಮೇಲೆ ನಾರದನಿಗೆ ಸತ್ಯಭಾಮಾ, ಜಾಂಬವತಿಯ ರಲ್ಲಿ ಗಾನ ಶಿಕ್ಷಾಭ್ಯಾಸ ; ಗಾಯನ ಶಾಸ್ತ್ರದ ಮಹಿಮೆ ವಿಷ್ಣು ಭಜನೆಯ ಮಹಿಮೆ ; ೨೪–೪೮

**ನಾಲ್ಕನೆಯ ಅಧ್ಯಾಯ—**

ವೈಷ್ಣವ ಭಕ್ತರ ಲಕ್ಷಣಗಳು ; ವೈಷ್ಣವರ ಮಹಿಮೆ ; ವಿಷ್ಣು ಭಕ್ತರಿಗಿಂತ ರುದ್ರ ಭಕ್ತರ ಹೆಚ್ಚುಗಾರಿಕೆ ಮತ್ತು ಫಲ ; ೪೯–೫೩

**ಐದನೆಯ ಅಧ್ಯಾಯ—**

ವಿಷ್ಣುಭಕ್ತನಾದ ಅಂಬರೀಷ ಮಹಾರಾಜನ ಕಥೆ ; ತ್ರಿಶಂಕುವೂ ಅವನ ಹೆಂಡಿತಿಯಾದ ಪದ್ಮಾವತಿಯೂ ವಿಷ್ಣುಪೂಜೆಯನ್ನು ಮಾಡುತ್ತಿದ್ದ ರೀತಿ ; ನಾರಾ ಯಣನು ಇಂದ್ರರೂಪದಲ್ಲಿ ಗೋಚರಿಸಲು, ಅನನ್ಯ ಭಕ್ತರಾದ ಅವರು ಅವನನ್ನು ಬೇಡಲೊಲ್ಲದಿರಲು, ಸ್ವಸ್ವರೂಪದಲ್ಲಿಯೇ ದರ್ಶನವಿತ್ತು, ಕೋರಿಕೆಗಳನ್ನು ಅನುಗ್ರಹಿಸಿ, ಸುದರ್ಶನ ಚಕ್ರವನ್ನೂ ಕೊಟ್ಟನು ; ಶ್ರೀಮತೀ ಎಂಬ ಮಗಳಾದಳು ; ನಾರದ, ಪರ್ವತರ

ಆಗಮನ; ಇವರಿಬ್ಬರೂ ಆ ಕನ್ಯೆಯನ್ನು ಅಪೇಕ್ಷಿಸಿ, ಪರಸ್ಪರರ ಮುಖವು ಕಪಿಯಂತೆ ಮತ್ತು ಗೋಲಾಂಗೂಲದಂತೆ ಆಗಲೆಂದು ವರವನ್ನು ವಿಷ್ಣುವಿನಲ್ಲಿ ಬೇಡಿದುದು; ಇವರಿಬ್ಬರನ್ನೂ ಶ್ರೀಮತಿಯು ವರಿಸದೆ ಅವರ ಸಮೀಪದಲ್ಲಿದ್ದ ವಿಷ್ಣುವನ್ನೇ ವರಿಸಿದುದು; ಆ ಋಷಿಗಳು ರಾಜನನ್ನು ಶಪಿಸಲು, ತಪಸ್ಸು ಚಕ್ರದಿಂದ ಹಿಂತಿರುಗಿ ಋಷಿಗಳನ್ನೇ ಪೀಡಿಸಿದುದು; ಆಗ ಭಕ್ತಪ್ರಿಯಕಾರಿಯಾದ ವಿಷ್ಣುವು ತಮಸ್ಸನ್ನು ಕುರಿತು ರಾಮಾವತಾರದಲ್ಲಿ ತನ್ನಲ್ಲಿಗೆ ಬರಬೇಕೆಂದು ಹೇಳಿದುದು; ನಾರದಪರ್ವತರು ವಿಷ್ಣುಮಾಯೆಯಿಂದ ವಂಚಿತರಾಗಲು, ರುದ್ರಭಕ್ತರಾದುದು; .. ೫೪–೮೭

## ಆರನೆಯ ಅಧ್ಯಾಯ—

ಜ್ಯೇಷ್ಠಾದೇವಿಯ ಕಥೆ; ಸಮುದ್ರಮಥನದಲ್ಲಿ ಲಕ್ಷ್ಮೀ ಹುಟ್ಟುವುದಕ್ಕಿಂತ ಮುಂಚೆ ಹುಟ್ಟಿದ್ದ ಅಲಕ್ಷ್ಮಿಯೇ ಜ್ಯೇಷ್ಠಾದೇವೀ; ದುಸ್ಸಹ ಋಷಿಯು ಅವಳನ್ನು ಮದುವೆಯಾಗಿ ಅಜ್ಞಾನಿಯಾದುದು; ಮಾರ್ಕಂಡೇಯನು ಆ ಅಲಕ್ಷ್ಮೀದುಸ್ಸಹರು ಇರಬೇಕಾದ ಮತ್ತು ಇರಬಾರದ ಸ್ಥಳಗಳನ್ನು ತಿಳಿಸಿದುದು; ದುಸ್ಸಹನು ವಾಸಸ್ಥಳವನ್ನು ನೋಡಿಬರಲು ಪಾತಾಳಕ್ಕೆ ಹೋದುದು; ಅಲಕ್ಷ್ಮಿಯು ಲಕ್ಷ್ಮೀನಾರಾಯಣರನ್ನು ಕಂಡು ಜೀವನಮಾರ್ಗವನ್ನು ಕೇಳಲು ಭಕ್ತರಲ್ಲದವರ ಧನಾದಿಗಳನ್ನು ತೋರಿಸಿದುದು; .. ೮೮–೧೦೭

## ಏಳನೆಯ ಅಧ್ಯಾಯ—

ಅಲಕ್ಷ್ಮೀ ನಿವೃತ್ತಿಗಾಗಿಯೂ, ಲಕ್ಷ್ಮೀಪ್ರಾಪ್ತಿಗೋಸ್ಕರವೂ ಲಕ್ಷ್ಮೀನಾರಾಯಣ ಮಂತ್ರಜಪವು ಆವಶ್ಯಕವು; ಮಹಾವಿಷ್ಣುವಿನ ಅಷ್ಟಾಕ್ಷರೀ, ದ್ವಾದಶಾಕ್ಷರೀ ಮಂತ್ರಜಪದ ಮಹಿಮೆ; ಐತರೇಯನೆಂಬ

## ಹತ್ತೊಂಬತ್ತನೆಯ ಅಧ್ಯಾಯ—



## ಇಪ್ಪತ್ತನೆಯ ಅಧ್ಯಾಯ—



## ಇಪ್ಪತ್ತೊಂದನೆಯ ಅಧ್ಯಾಯ—

**ಇಪ್ಪತ್ತೊಂದನೆಯ ಅಧ್ಯಾಯ—**



---

# ಶ್ರೀ ಲಿಂಗಮಹಾಪುರಾಣಂ

## ಸಂಪುಟ ೫

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಪ್ರಥಮೋಽಧ್ಯಾಯಃ

**॥ ಋಷಯ ಊಚುಃ ॥**

**ಕೃಷ್ಣಸ್ತುಷ್ಯತಿ ಕೇನೇಹ ಸರ್ವದೇವೇಶ್ವರೇಶ್ವರಃ ।**
**ವಕ್ತುಮರ್ಹಸಿ ಚಾಸ್ಮಾಕಂ ಸೂತ ಸರ್ವಾರ್ಥ ವಿದ್ಭವಾನ್ ॥ ೧ ॥**

**॥ ಸೂತ ಉವಾಚ ॥**

**ಪುರಾ ಪೃಷ್ಟೋ ಮಹಾತೇಜಾ ಮಾರ್ಕಂಡೇಯೋ ಮಹಾಮುನಿಃ।**
**ಅಂಬರೀಷೇಣ ವಿಪ್ರೇಂದ್ರಾಸ್ತದ್ವದಾಮಿ ಯಥಾತಥಂ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮೊದಲನೆಯ ಅಧ್ಯಾಯವು.

೧. ಋಷಿಗಳು ಹೇಳಿದರು. ಸಕಲವನ್ನೂ ತಿಳಿದಿರುವ ಓ ಸೂತ ಮುನಿಯೇ, ಎಲ್ಲ ದೇವತೆಗಳಿಗೂ ಒಡೆಯನಾದ ಶ್ರೀ ಕೃಷ್ಣನು ಯಾವ ಧರ್ಮವನ್ನು ಆಚರಿಸುವುದರಿಂದ ಸಂತೋಷಗೊಳ್ಳುತ್ತಾನೆ? ಎಂಬುದನ್ನು ನಮಗಾಗಿ ನೀನು ತಿಳಿಸುವವನಾಗು.

೨. ಸೂತನು ಹೇಳಿದನು. ಎಲೈ ಬ್ರಾಹ್ಮಣರೇ, ಪೂರ್ವದಲ್ಲಿ ಅಂಬರೀಷಮಹಾರಾಜನು ಈ ವಿಷಯವಾಗಿಯೇ ಋಷಿಗಳಲ್ಲಿ ಉತ್ತಮನೂ, ಮತ್ತು ತೇಜೋವಂತನೂ ಆದ ಮಾರ್ಕಂಡೇಯನನ್ನು ಕುರಿತು ಪ್ರಶ್ನಿಸಿದ್ದನು. ಅವರಿಬ್ಬರ ಸಂಭಾಷಣೆಯನ್ನೇ ನಾನು ಹೇಗೆ ಕೇಳಿದ್ದೆನೋ ಹಾಗೆ ಕ್ರಮವಾಗಿ ನಿಮಗೆ ಹೇಳುತ್ತೇನೆ.

॥ ಅಂಬರೀಷ ಉವಾಚ ॥

ಮುನೇ ಸಮಸ್ತಧರ್ಮಾಣಾಂ ಪಾರಗಸ್ತ್ವಂ ಮಹಾಮತೇ ।
ಮಾರ್ಕಂಡೇಯ ಪುರಾಣೋಽಸಿ ಪುರಾಣಾರ್ಥವಿಶಾರದಃ ॥ ೩ ॥

ನಾರಾಯಣಾನಾಂ ದಿವ್ಯಾನಾಂ ಧರ್ಮಾಣಾಂ ಶ್ರೇಷ್ಠಮುತ್ತಮಂ ।
ತತ್ಕಿಂ ಬ್ರೂಹಿ ಮಹಾಪ್ರಾಜ್ಞ ಭಕ್ತಾನಾಮಿಹ ಸುವ್ರತ ॥ ೪ ॥

॥ ಸೂತ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಸಮುತ್ಥಾಯ ಕೃತಾಂಜಲಿಃ ।
ಸ್ಮರನ್ನಾರಾಯಣಂ ದೇವಂ ಕೃಷ್ಣಮಚ್ಯುತಮವ್ಯಯಂ ॥ ೫ ॥

॥ ಮಾರ್ಕಂಡೇಯ ಉವಾಚ ॥

ಶೃಣು ಭೂಪ ಯಥಾನ್ಯಾಯಂ ಪುಣ್ಯಂ ನಾರಾಯಣಾತ್ಮಕಂ ।
ಸ್ಮರಣಂ ಪೂಜನಂ ಚೈವ ಪ್ರಣಾಮೋ ಭಕ್ತಿಪೂರ್ವಕಮ್ ॥ ೬ ॥

---

೩. ಅಂಬರೀಷನು ಹೇಳಿದನು. ಓ ಮಾರ್ಕಂಡೇಯ ಮುನಿಯೇ, ನೀನು ಸಕಲ ಧರ್ಮಗಳನ್ನೂ ಅರಿತ ಪಂಡಿತೋತ್ತಮನೂ ಮತ್ತು ಚಿರಂ ಜೀವಿಯೂ, ಆಗಿರುವೆ. ಆದಕಾರಣವೇ ನೀನು ಸಕಲ ಪುರಾಣಗಳ ಅರ್ಥವನ್ನೂ ಅರಿತವನಾಗಿರುತ್ತೀಯೆ.

೪. ಆದುದರಿಂದ ಸಕಲವನ್ನೂ ಅರಿತ ಸುವ್ರತನೇ, ನಾರಾಯಣ ನಿಂದ ವಿಹಿತವಾದ ಶ್ರೇಷ್ಠವಾದ ಧರ್ಮಗಳೊಳಗೆ ಈ ಪ್ರಪಂಚದಲ್ಲಿ ಭಕ್ತರಿಗೆ ಆಚರಿಸಲು ಉತ್ತಮವೂ, ಮತ್ತು ಶ್ರೇಷ್ಠವೂ ಆದ ಧರ್ಮವು ಯಾವುದು.? ಎಂಬುದನ್ನು ನನಗಾಗಿ ತಿಳಿಸುವವನಾಗು.

೫. ಸೂತಮುನಿಯು ಹೇಳಿದನು. ಈ ರೀತಿಯಾದ ಅಂಬರೀಷನ ಮಾತನ್ನು ಕೇಳಿ ಮಾರ್ಕಂಡೇಯನು ಎದ್ದುನಿಂತು ನಾಶರಹಿತನೂ, ನಾರಾಯಣನ ಅವತಾರಸ್ವರೂಪನೂ, ಮತ್ತು ತೇಜೋರೂಪಿಯೂ ಆದ ಶ್ರೀ ಕೃಷ್ಣನನ್ನು ಸ್ಮರಿಸಿ ಕೈ ಮುಗಿದವನಾಗಿ ಹೀಗೆಂದು ಹೇಳಿದನು.

೬. ಮಾರ್ಕಂಡೇಯನು ಹೇಳಿದ್ದನು. ಎಲೈ ದೊರೆಯೇ, ಪುಣ್ಯ ಕರವಾದ ನಾರಾಯಣ ಸ್ವರೂಪವಾದ ವಿಧಿವತ್ತಾದ ಧರ್ಮರೀತಿಯನ್ನು

ಪ್ರತ್ಯೇಕ ಮಶ್ವಮೇಧಸ್ಯ ಯಜ್ಞಸ್ಯ ಸಮಮುಚ್ಯತೇ ।
ಯ ಏಕಃ ಪುರುಷಃ ಶ್ರೇಷ್ಠಃ ಪರಮಾತ್ಮಾ ಜನಾರ್ದನಃ ॥ ೭ ॥
ಯಸ್ಮಾದ್ಬ್ರಹ್ಮಾ ತತಸ್ಸರ್ವಂ ಸಮಾಶ್ರಿತ್ಯೈವ ಮುಚ್ಯತೇ ।
ಧರ್ಮಮೇಕಂ ಪ್ರವಕ್ಷ್ಯಾಮಿ ಯದ್ದೃಷ್ಟಂ ವಿದಿತಂ ಮಯಾ ॥ ೮ ॥
ಪುರಾ ತ್ರೇತಾಯುಗೇ ಕಶ್ಚಿತ್ಕೌಶಿಕೋ ನಾಮ ವೈ ದ್ವಿಜಃ ।
ವಾಸುದೇವ ಪರೋ ನಿತ್ಯಂ ಸಾಮಗಾನರತಸ್ಸದಾ ॥ ೯ ॥

---

ಕೇಳುವವನಾಗು. ನಾರಾಯಣ ಸಂಬಂಧವಾದ ಸ್ಮರಣೆಯೂ, (ಜಪವೂ) ಪೂಜೆಯೂ, ಮತ್ತು ಭಕ್ತಿಪೂರ್ವಕವಾದ ನಮಸ್ಕಾರವೂ ಕೂಡ ಪ್ರತಿಯೊಂದೂ ಅಶ್ವಮೇಧಯಜ್ಞವನ್ನೇ ಮಾಡುವುದರಿಂದ ಯಾವ ಫಲವುಂಟಾಗುವುದೋ ಅಂಥಾಫಲದ ಲಾಭಕ್ಕೆ ಕಾರಣವಾದುದೆಂದು ಹೇಳಲ್ಪಟ್ಟಿದೆ.

೭–೮. ಯಾವ ಒಬ್ಬನೇ ಅದ್ವಿತೀಯನಾದ, ಎಂದರೆ ತನಗೆ ಸಮಾನನಾದ ಅಥವಾ ಅಧಿಕನಾದ ಇನ್ನೊಬ್ಬನಿಲ್ಲದ, ಪುರುಷ ಶ್ರೇಷ್ಠನೂ, ಪರಮಾತ್ಮನೂ, ದುಷ್ಟಶಿಕ್ಷಕನೂ ಆದ ಜನಾರ್ದನನು ಉಂಟೋ, ಯಾವನು ಮಾಡಿದ ಧರ್ಮಸ್ಥಾಪನೆಯ ವೃತ್ತಾಂತದ ಶ್ರವಣ, ಗಾನ, ಇವುಗಳನ್ನು ಆಶ್ರಯಿಸುವುದರಿಂದ, ಬ್ರಹ್ಮನೂ, ಅವನಂತೆಯೇ ಇತರರೆಲ್ಲರೂ ಕೂಡ ಪರಮಪುರುಷಾರ್ಥವಾದ ಮೋಕ್ಷವನ್ನೂ ಪಡೆಯಬಲ್ಲವರಾಗುತ್ತಾರೋ, ಅಂತಹ ವೈಷ್ಣವವಾದ, ನನ್ನಿಂದ ತಿಳಿಯಲ್ಪಟ್ಟಿರುವ, ಅನುಭವಿಸಿ ನೋಡಲ್ಪಟ್ಟಿರುವ ಮತ್ತು ಒಂದೇ ಮುಖ್ಯವಾದ ಧರ್ಮವನ್ನು ಹೇಳುವೆನು.

೯. ಹಿಂದೆ ತ್ರೇತಾಯುಗದಲ್ಲಿ ಕೌಶಿಕನೆಂಬ ಹೆಸರುಳ್ಳ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು. ಅವನು ಯಾವಾಗಲೂ ಸಾಮಗಾನದಲ್ಲಿ ಆಸಕ್ತಿಯುಳ್ಳವನಾಗಿ ವಸುದೇವನ ಪುತ್ರನಾದ ಶ್ರೀಕೃಷ್ಣನ ಧ್ಯಾನದಲ್ಲೇ ಮಗ್ನನಾಗಿದ್ದನು.

ಭೋಜನಾಸನ ಶಯ್ಯಾಸು ಸದಾ ತದ್ಗತಮಾನಸಃ ।
ಉದಾರಚರಿತಂ ವಿಷ್ಣೋರ್ಗಾಯಮಾನಃ ಪುನಃ ಪುನಃ ॥೧೦॥

ವಿಷ್ಣೋಃ ಸ್ಥಲಂ ಸಮಾಸಾದ್ಯ ಹರೇಃ ಕ್ಷೇತ್ರಮನುತ್ತಮಂ ।
ಅಗಾಯತ ಹರಿಂ ತತ್ರ ತಾಲವರ್ಣಲಯಾನ್ವಿತಂ ॥೧೧॥

ಮೂರ್ಛನಾಸ್ವರಯೋಗೇನ ಶ್ರುತಿ ಭೇದೇನ ಭೇದಿತಂ ।
ಭಕ್ತಿಯೋಗಂ ಸಮಾಪನ್ನೋ ಭಿಕ್ಷಾಮಾತ್ರಂ ಹಿ ತತ್ರ ವೈ ॥೧೨॥

ತತ್ರೈನಂ ಗಾಯಮಾನಂ ಚ ದೃಷ್ಟ್ವಾ ಕಶ್ಚಿದ್ದ್ವಿಜಸ್ತದಾ ।
ಪದ್ಮಾಖ್ಯ ಇತಿ ವಿಖ್ಯಾತಃ ತಸ್ಮೈ ಚಾನ್ನಂ ದದೌ ತದಾ ॥೧೩॥

---

೧೦. ಅವನು ಊಟಮಾಡುವಾಗಲೂ, ಕುಳಿತಿರುವಾಗಲೂ, ಮಲಗಿರುವಾಗಲೂ, ಮತ್ತು ಎಲ್ಲ ಕಾಲದಲ್ಲಿಯೂ, ವಿಷ್ಣುವಿನಲ್ಲೇ ಆಸಕ್ತವಾದ ಮನಸ್ಸಿನಿಂದ (ಪರಮಭಕ್ತಿಯಿಂದ) ಪರಮಾತ್ಮನ ಉದಾರವಾದ ಚರಿತ್ರೆಯನ್ನು ಮತ್ತೆ ಮತ್ತೆ ಗಾನಮಾಡುತ್ತಾ ಭಜಿಸುತ್ತಿದ್ದನು.

೧೧. ಶ್ರೇಷ್ಠವಾದ ಹರಿಕ್ಷೇತ್ರದಲ್ಲಿರುವ ವಿಷ್ಣುದೇವಾಲಯಕ್ಕೆ ಹೋಗಿ ಅಲ್ಲಿ ಅವನು ಪರಮಾತ್ಮನನ್ನು ನೃತ್ಯ ಮತ್ತು ಗೀತಗಳಿಂದ ಭಜಿಸುತ್ತಿದ್ದನು.

೧೨. ಆರೋಹಣ ಮತ್ತು ಅವರೋಹಣಗಳು, ಸ,ರಿ,ಗ,ಮ,ಪ,ದ,ನಿ ಎಂಬ ಏಳು ಸ್ವರಗಳೂ, ಮೂರು ಗ್ರಾಮಗಳು, ಇವುಗಳಿಂದ ಕೂಡಿದ ಸಂಗೀತದಿಂದಲೂ, ಬೃಹದ್ರಥಂತರಾದಿಸಾಮ ಶ್ರುತಿಗಳಿಂದಲೂ ಆ ದೇವನನ್ನು ಸ್ತೋತ್ರಮಾಡುತ್ತಾ ನಿರತಿಶಯವೂ ಅನನ್ಯವೂ ಆದ ಭಕ್ತಿಯೆಂಬ ಸಾಧನಯೋಗವನ್ನು ಹೊಂದಿ, ಭಿಕ್ಷಾನ್ನ ಮಾತ್ರದಿಂದ ಜೀವಿಸುತ್ತಾ ಆ ದೇವಾಲಯದಲ್ಲೇ ವಾಸಿಸುತ್ತಿದ್ದನು.

೧೩. ಆ ದೇವಾಲಯದಲ್ಲಿ ಈ ರೀತಿಯಾಗಿ ದೇವದೇವನನ್ನು ಸ್ತೋತ್ರಮಾಡುತ್ತಾ ಇರುವ ಕೌಶಿಕನನ್ನು ಒಬ್ಬಾನೊಬ್ಬ ಪದ್ಮನೆಂಬ ಪ್ರಸಿದ್ಧನಾದ ಬ್ರಾಹ್ಮಣನು ನೋಡಿ ಅವನಿಗೆ ಅನ್ನವನ್ನು ಪ್ರತಿದಿನದಲ್ಲೂ ಕೊಡಲುಪಕ್ರಮಿಸಿದನು.

ಸಕುಟುಂಬೋ ಮಹಾತೇಜಾ ಹ್ಯುಷ್ಣಮನ್ನಂ ಹಿ ತತ್ರ ವೈ ।
ಕೌಶಿಕೋ ಹಿ ತದಾ ಹೃಷ್ಟೋ ಗಾಯನ್ನಾಸ್ತೇ ಹರಿಂ ಪ್ರಭುಂ ॥

ಶೃಣ್ವನ್ನಾಸ್ತೇ ಸ ಪದ್ಮಾಖ್ಯಃ ಕಾಲೇ ಕಾಲೇ ವಿನಿರ್ಗತಃ ।
ಕಾಲಯೋಗೇನ ಸಂಪ್ರಾಪ್ತಾಃ ಶಿಷ್ಯಾ ವೈ ಕೌಶಿಕಸ್ಯ ಚ ॥೧೫॥

ಸಪ್ತ ರಾಜನ್ಯ ವೈಶ್ಯಾನಾಂ ವಿಪ್ರಾಣಾಂ ಕುಲಸಂಭವಾಃ ।
ಜ್ಞಾನವಿದ್ಯಾಽಧಿಕಾಃ ಶುದ್ಧಾ ವಾಸುದೇವಪರಾಯಣಾಃ ॥೧೬॥

ತೇಷಾಮಪಿ ತಥಾಽನ್ನಾದ್ಯಂ ಪದ್ಮಾಖ್ಯಃ ಪ್ರದದೌ ಸ್ವಯಮ್ ।
ಶಿಷ್ಯೈಶ್ಚ ಸಹಿತೋ ನಿತ್ಯಂ ಕೌಶಿಕೋ ಹೃಷ್ಟಮಾನಸಃ ॥೧೭॥

---

೧೪. ಕುಟುಂಬ ಸಹಿತನಾದ, ಹೆಚ್ಚಾಗಿ ತೇಜಸ್ವಿಯಾದ, ಆ ಕೌಶಿಕನು ಆ ದೇವಾಲಯದಲ್ಲಿಯೇ ಬಿಸಿಯಾದ ಅನ್ನವನ್ನು ತಿನ್ನುತ್ತಾ ಸಂತೋಷದಿಂದ ಹರಿಯನ್ನು ಕೀರ್ತನೆಗಳಿಂದ ಸ್ತೋತ್ರಮಾಡುತ್ತಾ ಹಾಡುತ್ತಾ ಇದ್ದನು.

೧೫. ಆ ಪದ್ಮನೆಂಬ ಬ್ರಾಹ್ಮಣನೂ ಕೌಶಿಕನ ಹರಿಗಾನವನ್ನು ಕೇಳುತ್ತಾ ಅಲ್ಲೇ ಇದ್ದನು. ಹೀಗೆ ಕೆಲವು ಕಾಲ ಕಳೆಯಲು ಕಾಲ ಕರ್ಮಸಂಯೋಗದ ಫಲವಾಗಿ ಕೌಶಿಕನಿಗೆ ಶಿಷ್ಯರು ಹಲವರು ಬಂದು ಸೇರಿದರು.

೧೬. ಹೆಚ್ಚಾಗಿ ಜ್ಞಾನಿಗಳೂ, ವಿದ್ಯಾವಂತರೂ, ಪರಿಶುದ್ಧರೂ, ಮತ್ತು ಶ್ರೀಮನ್ನಾರಾಯಣನಲ್ಲಿ ಭಕ್ತಿಯುಳ್ಳವರೂ ಆದ, ಬ್ರಾಹ್ಮಣ, ಕ್ಷತ್ರಿಯ, ಮತ್ತು ವೈಶ್ಯ, ಕುಲೋತ್ಪನ್ನರಾದ ಏಳುಜನ ಶಿಷ್ಯರು ಬಂದು ಸೇರಿದರು.

೧೭. ಪದ್ಮನೆಂಬ ಆ ಬ್ರಾಹ್ಮಣನು ತಾನಾಗಿಯೇ ಆ ಶಿಷ್ಯರಿಗೂ ಸಹ ಅನ್ನಾದಿ ಆಹಾರಗಳನ್ನು ಹಾಗೆಯೇ ಕೊಡಲು ಪ್ರಾರಂಭಿಸಿದನು. ಕೌಶಿಕನು ಬಹಳ ಸಂತೋಷಗೊಂಡ ಮನಸ್ಸುಳ್ಳವನಾಗಿ ಆ ವಿಷ್ಣು ಕ್ಷೇತ್ರದಲ್ಲಿಯೇ ಯಾವಾಗಲೂ ಶಿಷ್ಯರೊಡಗೂಡಿ ವಿಧಿವತ್ತಾಗಿ ವಿಷ್ಣುವಿನ ಭಜನೆಯನ್ನು ಮಾಡುತ್ತಾ ಅಲ್ಲೇ ವಾಸಮಾಡುತ್ತಿದ್ದನು.

ವಿಷ್ಣುಸ್ಥಲೇ ಹರಿಂ ತತ್ರ ಆಸ್ತೇ ಗಾಯನ್ಯಥಾವಿಧಿ ।
ತತ್ರೈವ ಮಾಲವೋ ನಾಮ ವೈಶ್ಯೋ ವಿಷ್ಣುಪರಾಯಣಃ ॥೧೮॥

ದೀಪಮಾಲಾಂ ಹರೇರ್ನಿತ್ಯಂ ಕರೋತಿ ಪ್ರೀತಿಮಾನಸಃ ।
ಮಾಲವೀ ನಾಮ ಭಾರ್ಯಾ ಚ ತಸ್ಯ ನಿತ್ಯಂ ಪತಿವ್ರತಾ ॥೧೯॥

ಗೋಮಯೇನ ಸಮಾಲಿಪ್ಯ ಹರೇಃ ಕ್ಷೇತ್ರಂ ಸಮಂತತಃ ।
ಭರ್ತ್ರಾ ಸಹಾಸ್ತೇ ಸುಪ್ರೀತಾ ಶೃಣ್ವತೀ ಗಾನಮುತ್ತಮಂ ॥೨೦॥

ಕುಶಸ್ಥಲಾತ್ಸಮಾಪನ್ನಾ ಬ್ರಾಹ್ಮಣಾಃ ಶಂಸಿತವ್ರತಾಃ ।
ಪಂಚಾಶದ್ವೈ ಸಮಾಪನ್ನಾ ಹರೇ ರ್ಗಾನಾರ್ಥಮುತ್ತಮಾಃ ॥೨೧॥

ಸಾಧಯಂತೋ ಹಿ ಕಾರ್ಯಾಣಿ ಕೌಶಿಕಸ್ಯ ಮಹಾತ್ಮನಃ ।
ಜ್ಞಾನವಿದ್ಯಾರ್ಥತತ್ವಜ್ಞಾಃ ಶೃಣ್ವಂತೋ ಹ್ಯವಸಂಸ್ತತೇ ॥೨೨॥

---

೧೮. ಅಲ್ಲೇ ಇದ್ದ ವಿಷ್ಣುವಿನಲ್ಲಿ ಭಕ್ತಿಯುಳ್ಳ ಮಾಲವನೆಂಬ ವೈಶ್ಯನು ಪ್ರತಿದಿನವೂ ಸಂತೋಷಗೊಂಡ ಮನಸ್ಸುಳ್ಳವನಾಗಿ ವಿಷ್ಣುವಿಗೆ ಪೂರ್ವೋತ್ತರ ನೀರಾಜನಗಳಿಂದ ದೀಪಸೇವೆಯನ್ನು ಮಾಡುತ್ತಿದ್ದನು.

೧೯–೨೦. ಪತಿವ್ರತೆಯಾದ ಮಾಲವಿಯೆಂಬ ಹೆಸರುಳ್ಳ ಅವನ ಹೆಂಡತಿಯು ನಿತ್ಯವೂ ಆ ದೇವಾಲಯದ ಸುತ್ತಲೂ ಶುದ್ಧಿಗಾಗಿ ಕಸವನ್ನು ಗುಡಿಸಿ ಸಗಣಿಯಿಂದ ಸಾರಿಸುತ್ತಿರುವವಳಾಗಿ ಶ್ರೇಷ್ಠವಾದ ಭಜನೆಯನ್ನು ಕೇಳುತ್ತಾ ಪತಿಯೊಡನೆ ಸಂತೋಷದಿಂದ ಹರಿಯನ್ನು ಸೇವಿಸುತ್ತಿದ್ದಳು.

೨೧–೨೨. ಹೀಗಿರುವಲ್ಲಿ ಕುಶಸ್ಥಳದಿಂದ ಬಂದವರಾದ ಶ್ಲಾಘ್ಯವಾದ ನಿಯಮಪಾಲನೆಯುಳ್ಳವರಾದ ಐವತ್ತು ಜನ ಶ್ರೇಷ್ಠರಾದ ಬ್ರಾಹ್ಮಣರು ಅಲ್ಲಿಗೆ ವಿಷ್ಣುವಿನ ಭಜನೆಗಾಗಿ ಬಂದು ಸೇರಿ, ಮಹಾತ್ಮನಾದ ಕೌಶಿಕನ ಕೆಲಸಕಾರ್ಯಗಳನ್ನು ಮಾಡಿಕೊಡುವುದರಲ್ಲಿ ನೆರವಾಗುತ್ತಾ ಜ್ಞಾನ ಮತ್ತು ವಿದ್ಯೆಗಳ ತತ್ವಗಳನ್ನು ತಿಳಿಯುವವರಾಗಿ ಹರಿಸ್ತೋತ್ರವನ್ನು ಕೇಳುತ್ತಾ ಅಲ್ಲಿಯೇ ವಾಸಮಾಡ ತೊಡಗಿದರು.

ಖ್ಯಾತಮಾಸೀತ್ತದಾ ತಸ್ಯ ಗಾನಂ ವೈ ಕೌಶಿಕಸ್ಯ ತತ್ ।
ಶ್ರುತ್ವಾ ರಾಜಾ ಸಮಭ್ಯೇತ್ಯ ಕಲಿಂಗೋ ವಾಕ್ಯಮಬ್ರವೀತ್ ॥೨೩॥
ಕೌಶಿಕಾದ್ಯಗಣೈಃ ಸಾರ್ಧಂ ಗಾಯಧ್ವೇಹ ಚ ಮಾಂ ಪುನಃ ।
ಶೃಣುಧ್ವಂ ಚ ತಥಾ ಯೂಯಂ ಕುಶಸ್ಥಲಜನಾ ಅಪಿ ॥೨೪॥
ತಚ್ಛ್ರುತ್ವಾ ಕೌಶಿಕಃ ಪ್ರಾಹ ರಾಜಾನಂ ಸಾಂತ್ವಯಾ ಗಿರಾ ।
ನ ಜಿಹ್ವಾ ಮೇ ಮಹಾರಾಜ ವಾಣೀ ಚ ಮಮ ಸರ್ವದಾ ॥೨೫॥
ಹರೇರನ್ಯ ಮಹೇಂದ್ರಂ ವಾ ಸ್ತೌತಿ ನೈವ ಚ ವಕ್ಷ್ಯತಿ ।
ಏವ ಮುಕ್ತೇ ತು ತಚ್ಛಿಷ್ಯೋ ವಾಸಿಷ್ಠೋ ಗೌತಮೋ ಹರಿಃ॥೨೬॥
ಸಾರಸ್ವತಸ್ತಥಾ ಚಿತ್ರಶ್ಚಿತ್ರ ಮಾಲ್ಯಸ್ತಥಾ ಶಿಶುಃ ।
ಊಚುಸ್ತೇ ಪಾರ್ಥಿವಂ ತದ್ವದ್ಯಥಾ ಪ್ರಾಹ ಚ ಕೌಶಿಕಃ ॥೨೭॥

---

೨೩. ಆಗ ಅದೇ ರೀತಿಯಾಗಿ ಕೌಶಿಕನ ಆ ಭಜನೆಯು ಎಲ್ಲೆಲ್ಲೂ ಪ್ರಸಿದ್ಧವಾಯಿತು.

೨೪. ಕೌಶಿಕನ ಈ ಪ್ರಸಿದ್ಧಿಯನ್ನು ಕೇಳಿ ಕಳಿಂಗನೆಂಬ ದೇಶದ ರಾಜನು ಅಲ್ಲಿಗೆ ಬಂದು ಅವರನ್ನು ಕುರಿತು ನೀವು ನಿಮ್ಮ ಪರಿವಾರದ ಗಣಗಳೊಡನೆ ನನ್ನನ್ನೂಸ್ತುತಿಸಿರಿ. ಎಲೈ ಕುಶಸ್ಥಲದ ನಿವಾಸಿಗಳೇ, ನೀವೂ ಕೂಡ ಈ ಸ್ತೋತ್ರದ ಮಾತನ್ನು ಕೇಳುವವರಾಗಿರಿ ಎಂದು ಹೇಳಿದನು.

೨೫. ರಾಜನ ಆ ಮಾತನ್ನು ಕೇಳಿ ಕೌಶಿಕನು ರಾಜನನ್ನು ಕುರಿತು ಮೃದುವಾದ ಮಾತುಗಳಿಂದ ಎಲೈ ಮಹಾರಾಜನೇ, ನನ್ನ ನಾಲಿಗೆಯೂ ಮತ್ತು ವಾಣಿಯೂ ಯಾವಾಗಲೂ ವಿಷ್ಣುವನ್ನು ಬಿಟ್ಟು ಬೇರೆ ಇನ್ನು ಯಾರನ್ನೂ, ಎಂದರೆ ಇಂದ್ರ ಮುಂತಾದವರನ್ನೂ ಕೂಡ, ಸ್ತುತಿಸುವುದೂ ಇಲ್ಲ. ಹೇಳುವುದೂ ಇಲ್ಲ. ಎಂದು ಹೇಳಿದನು.

೨೬–೨೭. ಕೌಶಿಕನು ಹೀಗೆ ಹೇಳಲು ಅವನ ಶಿಷ್ಯರಾದ ವಾಸಿಷ್ಠ, ಗೌತಮ, ಹರಿ, ಸಾರಸ್ವತ, ಚಿತ್ರ, ಚಿತ್ರಮಾಲ್ಯ, ಮತ್ತು ಶಿಶುಗಳೆಂಬುವವರೂ, ಕೂಡ ರಾಜನನ್ನುಕುರಿತು ಕೌಶಿಕನು ಹೇಳಿದಂತೆಯೇ ಹೇಳಿದರು.

ಶ್ರಾವಕಾಸ್ತೇ ತಥಾ ಪ್ರೋಚುಃ ಪಾರ್ಥಿವಂ ವಿಷ್ಣುತತ್ಪರಾಃ ॥೨೮॥
ಶ್ರೋತ್ರಾಣೀಮಾನಿ ಶೃಣ್ವಂತಿ ಹರೇರನ್ಯಂ ನ ಪಾರ್ಥಿವ ।
ಗಾನ ಕೀರ್ತಿಂ ವಯಂ ತಸ್ಯ ಶೃಣುಮೋಽನ್ಯಾಂ ನ ಚ ಸ್ತುತಿಂ ॥
ತಚ್ಛ್ರುತ್ವಾ ಪಾರ್ಥಿವೋ ರುಷ್ಟೋ ಗಾಯತಾ ಮಿತಿ ಚಾಬ್ರವೀತ್ ।
ಸ್ವಭೃತ್ಯಾನ್ ಬ್ರಾಹ್ಮಣಾ ಹ್ಯೇತೇ ಕೀರ್ತಿಂ ಶೃಣ್ವಂತಿ ನೋ ಯಥಾ ॥
ನ ಶೃಣ್ವಂತಿ ಕಥಂ ತಸ್ಮಾತ್ ಗಾಯಮಾನೇ ಸಮಂತತಃ ॥೩೦॥
ಏವಮುಕ್ತಾಸ್ತದಾ ಭೃತ್ಯಾ ಜಗುಃ ಪಾರ್ಥಿವಮುತ್ತಮಂ ।
ನಿರುದ್ಧಮಾರ್ಗಾ ವಿಪ್ರಾಸ್ತೇ ಗಾನೇ ವೃತ್ತೇ ತು ದುಃಖಿತಾಃ ॥೩೧॥
ಕಾಷ್ಠಶಂಕುಭಿರನ್ಯೋನ್ಯಂ ಶ್ರೋತ್ರಾಣಿ ವಿ(ಪಿ) ದಧುರ್ದ್ವಿಜಾಃ ।
ಕೌಶಿಕಾದ್ಯಾ ಶ್ಚ ತಾಂ ಜ್ಞಾತ್ವಾ ಮನೋವೃತ್ತಿಂ ನೃಪಸ್ಯವೈ ॥೩೨॥

---

೨೮-೨೯. ವಿಷ್ಣುವಿನಲ್ಲೇ ನೆಲಸಿರುವ ಭಕ್ತಿಯುಳ್ಳ ಆ ಶ್ರೋತೃಗಳೂ (ಕೇಳುತ್ತಿದ್ದವರು) ಕೂಡ ರಾಜನನ್ನು ಕುರಿತು ಎಲೈ ರಾಜನೇ, ನಮ್ಮ ಕಿವಿಗಳು ವಿಷ್ಣುವಿನ ನಾಮವನ್ನು ಹೊರತು ಬೇರೆ ಯಾರ ಹೆಸರನ್ನೂ ಕೇಳಲು ಇಚ್ಛಿಸುವುದಿಲ್ಲ. ನಾವು ಅವನ (ವಿಷ್ಣುವಿನ) ಭಜನೆಯನ್ನೂ ಸ್ತೋತ್ರವನ್ನೂ ಕೇಳುತ್ತೇವಲ್ಲದೇ ಇನ್ನೊಂದು ದೇವರ ಸ್ತುತಿಯನ್ನು ಕೇಳಲಾರೆವು.

೩೦. ಅವರುಗಳ ಮಾತನ್ನು ಕೇಳಿ ರಾಜನು ಕೋಪಗೊಂಡವನಾಗಿ ತನ್ನ ಸೇವಕರನ್ನು ಕರೆದು ನೀವುಗಳು ಈ ಬ್ರಾಹ್ಮಣರ ಸುತ್ತಲೂ ಇವರು ನನ್ನ ಕೀರ್ತಿಯನ್ನು ಕೇಳುವಂತೆ ಹಾಡಿ. ಆಗ ಸುತ್ತಲೂ ನೀವು ಹಾಡುತ್ತಿರಲು ಇವರು ಹೇಗೆತಾನೆ ಅದನ್ನು ಕೇಳುವುದಿಲ್ಲ ? ಎಂದನು.

೩೧. ಹೀಗೆ ಆಜ್ಞಾಪಿಸಲ್ಪಟ್ಟ ಆ ಸೇವಕರು ರಾಜನನ್ನು ಬಹಳ ಚೆನ್ನಾಗಿ ಸ್ತೋತ್ರಮಾಡಿದರು.

೩೨. ಸಂಚರಿಸುವ ಮಾರ್ಗವನ್ನು ಎಂದರೆ ತಾವು ಮಾಡುತ್ತಿರುವ ಭಜನೆಯ ರೀತಿಯನ್ನು ತಡೆದು ಹಾಡಲು ಮೊದಲು ಮಾಡಿದ ಅವರನ್ನು ನೋಡಿದ ಬ್ರಾಹ್ಮಣರು ರಾಜನಮನೋಭಾವವನ್ನು ತಿಳಿದು ಬಹಳ ವ್ಯಸನಗೊಂಡವರಾಗಿ ಒಬ್ಬರಿಗೊಬ್ಬರು ಕಿವಿಗಳನ್ನು ಮರದ ಬಿರಟೆಗಳಿಂದ ಮುಚ್ಚಿಕೊಂಡವರಾದರು.

ಪ್ರಸಹ್ಯಾಸ್ಮಾಂಸ್ತು ಗಾಯೇತ ಸ್ವಗಾನೇಽಸೌ ನೃಪಃ ಸ್ಥಿತಃ ।
ಇತಿ ವಿಪ್ರಾಃ ಸುನಿಯುತಾ ಜಿಹ್ವಾಗ್ರಂ ಚಿಚ್ಛಿದುಃ ಕರೈಃ ॥೩೩॥
ತತೋ ರಾಜಾ ಸುಸಂಕ್ರುದ್ಧಃ ಸ್ವದೇಶಾತ್ತಾನ್ನ್ಯವಾಸಯತ್ ।
ಆದಾಯ ಸರ್ವಂ ವಿತ್ತಂ ಚ ತತಸ್ತೇ ಜಗ್ಮುರುತ್ತರಾಂ ॥೩೪॥
ದಿಶಾಮಾಸಾದ್ಯ ಕಾಲೇನ ಕಾಲಧರ್ಮೇಣ ಯೋಜಿತಾಃ ।
ತಾನಾಗತಾನ್ ಯಮೋ ದೃಷ್ಟ್ವಾ ಕಿಂ ಕರ್ತವ್ಯಮಿತಿ ಸ್ಮ ಹ ॥೩೫॥
ಚೇಷ್ಟಿತಂ ತತ್ಕ್ಷಣೇ ರಾಜನ್ ಬ್ರಹ್ಮಾ ಪ್ರಾಹ ಸುರಾಧಿಪಾನ್ ।
ಕೌಶಿಕಾದೀನ್ ದ್ವಿಜಾನದ್ಯ ವಾಸಯಧ್ವಂ ಯಥಾ ಸುಖಂ ॥೩೬॥

---

೩೩. ಕೌಶಿಕನೇ ಮೊದಲಾದವರು ಆರೀತಿಯಾಗಿ ವಿಜಾತೀಯವಾಗಿರುವ ಬಲಾತ್ಕಾರದಿಂದ (ಬಲವಂತವಾಗಿ) ತಮ್ಮನ್ನು ತನ್ನ ಭಜನೆಯಲ್ಲಿ ಸೇರಿಸುತ್ತಿರುವ ರಾಜಸ ಮನೋಭಾವವನ್ನು ತಿಳಿದವರಾಗಿ ನಿಶ್ಚಯಿಸಿದವರಾಗಿ ತಮ್ಮತಮ್ಮ ನಾಲಿಗೆಯ ತುದಿಗಳನ್ನು ಕೈಗಳಿಂದ ಕತ್ತರಿಸಿಕೊಂಡರು. (ಛೇದಿಸಿಕೊಂಡರು )

೩೪. ಅನಂತರದಲ್ಲಿ ರಾಜನು ಬಹಳ ಕೋಪಗೊಂಡವನಾಗಿ ಅವರುಗಳನ್ನು ತನ್ನ ದೇಶದಿಂದ ಹೊರಹೊರಡಿಸಿದನು.

೩೫. ಆಗ ಅವರೆಲ್ಲರೂ ತಮ್ಮ ಹಣವೆಲ್ಲವನ್ನೂ ತೆಗೆದುಕೊಂಡವರಾಗಿ ಉತ್ತರದಿಕ್ಕನ್ನು ಕುರಿತು ಹೊರಟು ಹೋದರು. ಆ ದಿಕ್ಕಿಗೆ ಬಂದು ನೆಲಸಿದವರಾಗಿ ಕೆಲವು ಕಾಲವಿದ್ದು ನಂತರ ಕಾಲಧರ್ಮವನ್ನು (ಮರಣವನ್ನು) ಹೊಂದಿದವರಾದರು.

೩೬. ಹೀಗೆ ಕಾಲಧರ್ಮವನ್ನು ಹೊಂದಿ ತನ್ನ ಲೋಕಕ್ಕೆ ಬಂದ ಕೌಶಿಕಾದಿಗಳನ್ನು ನೋಡಿ ಯಮನು ಏನನ್ನುಮಾಡಬೇಕೆಂದು ತಿಳಿಯದವನಾಗಿ ಸಂಭ್ರಾತನಾದನು.

ಗಾನಯೋಗೇನ ಯೇ ನಿತ್ಯಂ ಪೂಜಯಂತಿ ಜನಾರ್ದನಂ ।
ತಾನಾನಯತ ಭದ್ರಂ ವೋ ಯದಿ ದೇವತ್ವಮಿಚ್ಛಥ ॥೩೭॥
ಇತ್ಯುಕ್ತ್ವಾ ಲೋಕಪಾಲಾಸ್ತೇ ಕೌಶಿಕೇತಿ ಪುನಃ ಪುನಃ ।
ಮಾಲವೇತಿ ತಥಾ ಕೇಚಿತ್ ಪದ್ಮಾಕ್ಷೇತಿ ತಥಾ ಪರೇ ॥೩೮॥
ಕ್ರೋಶಮಾನಾಃ ಸಮಭ್ಯೇತ್ಯ ತಾನಾದಾಯ ವಿಹಾಯಸಾ ।
ಬ್ರಹ್ಮಲೋಕಂ ಗತಾಃ ಶೀಘ್ರಂ ಮುಹೂರ್ತೇನೈವ ತೇ ಸುರಾಃ ॥
ಕೌಶಿಕಾದೀನ್ ತತೋ ದೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ ।
ಪ್ರತ್ಯುದ್ಗಮ್ಯ ಯಥಾನ್ಯಾಯಂ ಸ್ವಾಗತೇನಾಭ್ಯಪೂಜಯತ್ ॥೪೦॥

---

೩೭. ಎಲೈ ಅಂಬರೀಷ ಮಹಾರಾಜನೇ. ಹೀಗೆ ಯಮನು ಚಿಂತಿಸುತ್ತಿರಲು ಬ್ರಹ್ಮನು ಕೌಶಿಕಾದಿಗಳ ಚರಿತ್ರೆಯನ್ನು ತಿಳಿದವನಾಗಿ ಸುರಾಧಿಪತಿಗಳಾದ ಇಂದ್ರಾದಿಗಳನ್ನು ಕುರಿತು, ಎಲೈ ದೇವತೆಗಳಿರಾ, ನೀವು ಮಂಗಳವನ್ನೂ ದೇವತ್ವವನ್ನೂ ಅಪೇಕ್ಷಿಸುವುದೇ ಆದರೆ ಭಜನೆಯಿಂದ ಶ್ರೀಮನ್ನಾರಾಯಣನನ್ನು ಯಾವಾಗಲೂ ಪೂಜಿಸುವ ಆ ಕೌಶಿಕನನ್ನು ಕರೆದುಕೊಂಡು ಬಂದು ಸುಖವಾಗಿ ಇರಿಸಿರಿ ಎಂದು ಹೇಳಿದನು.

೩೮–೩೯. ಲೋಕಪಾಲಕರುಗಳು ಬ್ರಹ್ಮನಿಂದ ಹೀಗೆ ಹೇಳಲ್ಪಟ್ಟವರಾಗಿ ಮತ್ತೆ ಮತ್ತೆ ಕೌಶಿಕನೆಂದು ಕೆಲವರೂ, ಮಾಲವನೆಂದು ಇನ್ನು ಕೆಲವರೂ, ಪದ್ಮಾಕ್ಷನೆಂಬುದಾಗಿ ಮತ್ತೆ ಕೆಲವರೂ, ಕೂಗುತ್ತಾ ಬಂದವರಾಗಿ, ಅವರುಗಳನ್ನು ಸ್ವರ್ಗ ಲೋಕದಿಂದ ಕ್ಷಣಮಾತ್ರದಲ್ಲಿ ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋದರು.

೪೦. ಸಕಲ ಲೋಕಗಳಿಗೂ ಪಿತಾಮಹನಾದ ಬ್ರಹ್ಮನು ಬರುತ್ತಿರುವ ಕೌಶಿಕಾದಿಗಳನ್ನು ಕಂಡನು. ತತ್ಕ್ಷಣವೇ ಬೇಗನೆದ್ದು ಅವರನ್ನು ಎದಿರ್ಗೊಂಡು ಕರೆತಂದನು. ಅನಂತರದಲ್ಲಿ ವಿಧಿವತ್ತಾಗಿ ಅವರಿಗೆ ಸ್ವಾಗತಾದಿ ಸತ್ಕಾರ ಪೂಜೆಯನ್ನು ಮಾಡಿದನು.

ತತಃ ಕೋಲಾಹಲಮಭೂತ್ ಅತಿಗೌರವಮುಲ್ಬಣಂ ।
ಬ್ರಹ್ಮಣಾಽಽಚರಿತಂ ದೃಷ್ಟ್ವಾ ದೇವಾನಾಂ ನೃಪಸತ್ತಮ ॥೪೧॥

ಹಿರಣ್ಯಗರ್ಭೋ ಭಗವಾನ್ ತಾನ್ನಿವಾರ್ಯ ಸುರೋತ್ತಮಾನ್ ।
ಕೌಶಿಕಾದೀನ್ ಸಮಾದಾಯ ಮುನೀನ್ ದೇವೈಃ ಸಮಾವೃತಃ ॥೪೨॥

ವಿಷ್ಣುಲೋಕಂ ಯಯೌ ಶೀಘ್ರಂ ವಾಸುದೇವಪರಾಯಣಃ ।
ತತ್ರ ನಾರಾಯಣೋ ದೇವಃ ಶ್ವೇತದ್ವೀಪನಿವಾಸಿಭಿಃ ॥೪೩॥

ಜ್ಞಾನಯೋಗೇಶ್ವರೈಃ ಸಿದ್ಧೈಃ ವಿಷ್ಣುಭಕ್ತೈಃ ಸಮಾಹಿತೈಃ ।
ನಾರಾಯಣಸಮೈಃ ದಿವ್ಯೈಃ ಚತುರ್ಬಾಹುಧರೈಃ ಶುಭೈಃ ॥೪೪॥

ವಿಷ್ಣು ಚಿಹ್ನ ಸಮಾಪನ್ನೈಃ ದೀಪ್ಯಮಾನೈರಕಲ್ಮಷೈಃ ।
ಅಷ್ಟಾಶೀತಿ ಸಹಸ್ರೈಶ್ಚ ಸೇವ್ಯಮಾನೋ ಮಹಾಜನೈಃ ॥೪೫॥

---

೪೧. ಎಲೈ ರಾಜಶ್ರೇಷ್ಠನಾದ ಅಂಬರೀಷನೇ, ಬ್ರಹ್ಮನು ಮಾಡಿದ ಈ ಪೂಜೆಯು ಬಹಳ ಹೆಚ್ಚಾದುದು! ಎಂದರೆ ಕೌಶಿಕನೇ ಮೊದಲಾದವರು ಸಾಮಾನ್ಯಮಾನವರು. ಅವರ ವಿಷಯದಲ್ಲಿ ಬ್ರಹ್ಮನ ಈ ಆಚರಣೆಯು ಅನುಚಿತವೆಂದು ದೇವತೆಗಳಲ್ಲಿ ಬಹಳ ಹೆಚ್ಚಾದ ಕೋಲಾಹಲವುಂಟಾಯಿತು.

೪೨. ಭಗವಂತನಾದ ವಾಸುದೇವನಲ್ಲಿ ಭಕ್ತಿಯುಳ್ಳ ಆ ಹಿರಣ್ಯಗರ್ಭನು ಆ ದೇವತಾಶ್ರೇಷ್ಠರುಗಳ ಕೋಲಾಹಲವನ್ನು ಅನುಚಿತವೆಂದು ತಡೆದನು. ಅನಂತರದಲ್ಲಿ ಕೌಶಿಕಾದಿ ಆ ಋಷಿಗಳನ್ನು ಕರೆದುಕೊಂಡು ದೇವತೆಗಳೊಡಗೂಡಿ ಬಹಳ ಜಾಗ್ರತೆಯಾಗಿ ವಿಷ್ಣುಲೋಕವನ್ನು ಕುರಿತು ಹೊರಟನು.

೪೩–೪೬. ವಿಷ್ಣು ಲೋಕದಲ್ಲಿ ಶ್ರೀಮನ್ನಾರಾಯಣನು ಶ್ವೇತದ್ವೀಪ ನಿವಾಸಿಗಳಿಂದ ಸೇವಿಸಲ್ಪಡುತ್ತಿದ್ದನು. ಆ ಶ್ರೇಷ್ಠರಾದ ವಿಷ್ಣು ಭಕ್ತರು ಜ್ಞಾನ ಯೋಗವೇ ಧರ್ಮವುಳ್ಳವರಾದ ಸಿದ್ಧರಾಗಿದ್ದರು. ಅಂಥಾ ಜಯಿಸಲ್ಪಟ್ಟ ಮನಸ್ಸುಳ್ಳ ಅವರು ನಾರಾಯಣನಿಗೆ ಸಮವಾಗಿರುವಂತೆ ಶ್ರೇಷ್ಠ

ಅಸ್ಮಾಭಿರ್ನಾರದಾದ್ಯೈಶ್ಚ ಸನಕಾದ್ಯೈರಕಲ್ಮಷೈಃ ।
ಭೂತೈರ್ನಾನಾವಿಧೈಶ್ಚೈವ ದಿವ್ಯಸ್ತ್ರೀಭಿಃ ಸಮಂತತಃ ॥೪೬॥
ಸೇವ್ಯಮಾನೋಽಥ ಮಧ್ಯೇ ವೈ ಸಹಸ್ರದ್ವಾರಸಂವೃತೇ ।
ಸಹಸ್ರಯೋಜನಾಯಾಮೇ ದಿವ್ಯೇ ಮಣಿಮಯೇ ಶುಭೇ ॥೪೭॥
ವಿಮಾನೇ ವಿಮಲೇ ಚಿತ್ರೇ ಭದ್ರಪೀಠಾಸನೇ ಹರಿಃ ।
ಲೋಕಕಾರ್ಯೇ ಪ್ರಸಕ್ತಾನಾಂ ದತ್ತದೃಷ್ಟಿಶ್ಚ ಮಾಧವಃ ॥೪೮॥
ತಸ್ಮಿನ್ ಕಾಲೇಽಥ ಭಗವಾನ್ ಕೌಶಿಕಾದ್ಯೈಶ್ಚ ಸಂವೃತಃ ।
ಆಗಮ್ಯ ಪ್ರಣಿಪತ್ಯಾಗ್ರೇ ತುಷ್ಟಾವ ಗರುಡಧ್ವಜಂ ॥೪೯॥

---

ವಾದ ನಾಲ್ಕು ಬಾಹುಗಳುಳ್ಳ, ಮಂಗಳಕರವಾದ ವಿಷ್ಣುವಿನ ಶಂಖ, ಚಕ್ರ, ಮತ್ತು ಕೌಸ್ತುಭವೇ ಮೊದಲಾದ ಚಿಹ್ನೆಗಳುಳ್ಳವರಾಗಿದ್ದರು. ಪಾಪರಹಿತರಾದ ತೇಜಸ್ವಿಗಳಾದ ಎಂಬತ್ತೆಂಟು ಸಾವಿರ ಸಂಖ್ಯೆಯುಳ್ಳವರಾದ ಆ ಮಹಾಭಕ್ತರಿಂದ ಶ್ರೀಮನ್ನಾರಾಯಣನು ಸೇವಿಸಲ್ಪಡುತ್ತಿದ್ದನು. ಅಲ್ಲಿ ಸುತ್ತಲೂ ಸಮೀಪದವರಾದ ನಾರದಾದಿಗಳೂ, ಸನಕಾದಿ ಮುನಿಗಳೂ, ಪಾಪರಹಿತರಾದ ನಾನಾವಿಧವಾದ ಪ್ರಾಣಿಗಳೂ ಮತ್ತು ದೇವತಾ ಸ್ತ್ರೀಯರೂ, ಶ್ರೀಮನ್ನಾರಾಯಣನನ್ನು ಸುತ್ತುವರಿದಿದ್ದರು.

೪೭–೪೮. ಅನೇಕ ದೇವತೆಗಳಿಂದ ಸೇವಿಸಲ್ಪಡುತ್ತಿರುವ ಆ ಪರಮಾತ್ಮನು ಸಾವಿರ ಯೋಜನ ವಿಸ್ತಾರವಾದ ಮತ್ತು ಸಹಸ್ರ ಬಾಗಿಲುಗಳುಳ್ಳ ಶುಭ್ರವೂ ಶ್ರೇಷ್ಠವೂ ಆದ ವಿಮಾನದಲ್ಲಿ ಸ್ಥಾಪಿಸಲ್ಪಟ್ಟ ಶುಭ್ರವಾದ ಚಿತ್ರ ವಿಚಿತ್ರವಾದ ಭದ್ರಪೀಠದಲ್ಲಿ ಮಂಡಿಸಿದ್ದನು. ಅಂಥಾ ಪರಮಾತ್ಮನಾದ ಮಾಧವನನ್ನು ಲೋಕ ಕಾರ್ಯದಲ್ಲಿಯೇ ಯಾವಾಗಲೂ ಆಸಕ್ತರಾದ ಬ್ರಹ್ಮಾದಿ ದೇವತೆಗಳು ಕಂಡರು.

೪೯. ಹೀಗೆ ಕುಳಿತಿರುವ ಕಾಲದಲ್ಲಿ ಬ್ರಹ್ಮನು ಕೌಶಿಕಾದಿಗಳೊಡಗೂಡಿ ಅಲ್ಲಿಗೆ ಬಂದು ಗರುಡಧ್ವಜನಾದ ಆ ಪರಮಾತ್ಮನನ್ನು ನಮಸ್ಕರಿಸಿ ಹೊಗಳಿದನು.

ತತೋ ವಿಲೋಕ್ಯ ಭಗವಾನ್ ಹರಿರ್ನಾರಾಯಣಃ ಪ್ರಭುಃ ।
ಕೌಶಿಕೇತ್ಯಾಹ ಸಂಪ್ರೀತ್ಯಾ ತಾನ್ ಸರ್ವಾಂಶ್ಚ ಯಥಾಕ್ರಮಂ ॥
ಜಯಘೋಷೋ ಮಹಾನಾಸೀತ್ ಮಹಾಶ್ಚರ್ಯೇ ಸಮಾಗತೇ ।
ಬ್ರಹ್ಮಾಣಮಾಹ ವಿಶ್ವಾತ್ಮಾ ಶೃಣು ಬ್ರಹ್ಮನ್ ಮಯೋದಿತಂ ॥೫೧॥
ಕೌಶಿಕಸ್ಯ ಇಮೇ ವಿಪ್ರಾಃ ಸಾಧ್ಯಸಾಧನ ತತ್ಪರಾಃ ।
ಹಿತಾಯ ಸಂಪ್ರವೃತ್ತಾ ವೈ ಕುಶಸ್ಥಲ ನಿವಾಸಿನಃ ॥೫೨॥
ಮತ್ಕೀರ್ತಿಶ್ರವಣೇ ಯುಕ್ತಾ ಜ್ಞಾನ ತತ್ವಾರ್ಥಕೋವಿದಾಃ ।
ಅನನ್ಯದೇವತಾಭಕ್ತಾಃ ಸಾಧ್ಯಾ ದೇವಾ ಭವಂತ್ವಿಮೇ ॥೫೩॥

---

೫೦. ಅನಂತರದಲ್ಲಿ ಭಗವಂತನಾದ ಆ ನಾರಾಯಣಪ್ರಭುವು ಅವರನ್ನು ನೋಡಿ, ಕೌಶಿಕನೇ, ಎಂದು ಸಂಬೋಧಿಸಿ, ಬಹಳ ಪ್ರೀತಿಯಿಂದ ಕ್ರಮವಾಗಿ ಎಲ್ಲರ ಯೋಗಕ್ಷೇಮಗಳನ್ನೂ ವಿಚಾರಮಾಡಿದನು.

೫೧. ಶ್ರೀಮನ್ನಾರಾಯಣನಿಂದ ಆಚರಿಸಲ್ಪಟ್ಟ ಈ ರೀತಿಯಾದ ನಡವಳಿಕೆಯಲ್ಲಿನ ಆದರವನ್ನು ನೋಡಿ ದೇವತೆಗಳು ಬಹಳ ಆಶ್ಚರ್ಯವುಳ್ಳವರಾಗಿ ದೊಡ್ಡದಾಗಿ ಜಯಘೋಷಮಾಡಿದರು.

೫೨–೫೩. ಇದಾದಮೇಲೆ ವಿಶ್ವರೂಪನಾದ ಪರಮಾತ್ಮನು ಬ್ರಹ್ಮನನ್ನು ಕುರಿತು ಹೀಗೆಂದು ಹೇಳಿದನು. ಎಲೈ ಬ್ರಹ್ಮನೇ, ನಾನು ಹೇಳುವುದನ್ನು ಕೇಳು. ಕೌಶಿಕನ ಜೊತೆಯಲ್ಲಿರತಕ್ಕ ಈ ಬ್ರಾಹ್ಮಣರು ನನ್ನಲ್ಲಿ ಅನನ್ಯ ಭಕ್ತಿಯಿಂದಕೂಡಿ ಭಕ್ತಿಮಾರ್ಗದಲ್ಲಿ ಎಲ್ಲಾ ಲೋಕಗಳನ್ನೂ ಸಾಧಿಸಿದವರಾಗಿದ್ದಾರೆ. ಎಂದರೆ ಅವರಿಗೆ ಎಲ್ಲವೂ ಸಾಧ್ಯವಾಗಿವೆ. ಮತ್ತು ಈ ಕುಶಸ್ಥಲದವರಾದ ಬ್ರಾಹ್ಮಣರು ನನ್ನ ಭಕ್ತರ ಹಿತಕ್ಕಾಗಿ ಪ್ರಯತ್ನಪಟ್ಟವರು. ಇವರು ಜ್ಞಾನಮಾರ್ಗದಲ್ಲಿ ಮುಂದುವರಿಯುತ್ತಾ ತತ್ವಜ್ಞಾನದ ಪ್ರಯೋಜನವನ್ನು ತಿಳಿದವರಾಗಿ, ನನ್ನ ಯಶಸ್ಸನ್ನು ಕೇಳುವುದರಲ್ಲೇ ಆಸಕ್ತರಾಗಿದ್ದರು. ಅಲ್ಲದೇ ಇವರು ಇನ್ನೊಂದು ದೇವತೆಯನ್ನು ಆಶ್ರಯಿಸಿದವರಲ್ಲ. ಆದುದರಿಂದಲೇ ಇವರು ಸಿದ್ಧರು, ಸಾಧ್ಯರು ಎಂಬ ದೇವತೆಗಳಾಗಲಿ.

ಮತ್ಸಮೀಪೇ ತಥಾಽನ್ಯತ್ರ ಪ್ರವೇಶಂ ದೇಹಿ ಸರ್ವದಾ ।
ಏವಮುಕ್ತ್ವಾ ಪುನರ್ದೇವಃ ಕೌಶಿಕಂ ಪ್ರಾಹ ಮಾಧವಃ ॥೩೪॥
ಸ್ವಶಿಷ್ಯೈಃ ತ್ವಂ ಮಹಾಪ್ರಾಜ್ಞ ದಿಗ್ಬಂಧೋ ಭವ ಮೇ ಸದಾ ।
ಗಣಾಧಿಪತ್ಯಮಾಪನ್ನೋ ಯತ್ರಾಹಂ ತ್ವಂ ಸಮಾಸ್ವ ವೈ ॥೩೫॥
ಮಾಲವಂ ಮಾಲವೀಂ ಚೈವಂ ಪ್ರಾಹ ದಾಮೋದರೋ ಹರಿಃ ।
ಮಮ ಲೋಕೇ ಯಥಾಕಾಮಂ ಭಾರ್ಯಯಾ ಸಹ ಮಾಲವ ॥೩೬॥
ದಿವ್ಯರೂಪಧರಃ ಶ್ರೀಮಾನ್ ಶೃಣ್ವನ್ ಗಾನಮಿಹಾಧಿಪಃ ।
ಆಸ್ವ ನಿತ್ಯಂ ಯಥಾ ಕಾಮಂ ಯಾವಲ್ಲೋಕಾ ಭವಂತಿ ವೈ ॥೩೭॥
ಪದ್ಮಾಕ್ಷ ಮಾಹ ಭಗವಾನ್ ಧನದೋ ಭವ ಮಾಧವಃ ।
ಧನಾನಾ ಮೀಶ್ವರೋ ಭೂತ್ವಾ ಯಥಾ ಕಾಲಂ ಹಿ ಮಾಂ ಪುನಃ ॥

---

೩೪. ನನ್ನ ಹತ್ತಿರದಲ್ಲೂ ಮತ್ತು ಇತರ ಲೋಕಗಳಲ್ಲಿಯೂ ಇವರಿಗೆ ಯಾವಾಗಲೂ ಪ್ರವೇಶವಿರುವಂತೆ ಮಾಡು. ಎಂದು ಹೇಳಿದನು.

೩೫. ಬ್ರಹ್ಮನೊಡನೆ ಹೀಗೆಂದು ಹೇಳಿ ಮತ್ತೆ ಶ್ರೀಮನ್ನಾರಾಯಣನು ಕೌಶಿಕನನ್ನು ಕುರಿತು ಹೀಗೆ ಹೇಳಿದನು. ಎಲೈ ಪಂಡಿತಶ್ರೇಷ್ಠನೇ, ನೀನು ನಿನ್ನ ಶಿಷ್ಯರುಗಳೊಡನೆ ನನ್ನ ಸಮೀಪವರ್ತಿಯಾಗಿರುವವನಾಗು. ನೀನು ಗಣಗಳಿಗೊಡೆಯನಾಗಿ ನಾನಿರುವಲ್ಲಿಯೇ ಇರುವವನಾಗು.

೩೬. ಅನಂತರದಲ್ಲಿ ದಾಮೋದರನಾದ ಶ್ರೀಮನ್ನಾರಾಯಣನು ಮಾಲವನನ್ನೂ ಕುರಿತು, ಎಲೈ ಮಾಲವನೇ, ನೀನು ಪತ್ನಿಯಿಂದ ಕೂಡಿದವನಾಗಿ ನನ್ನ ಲೋಕದಲ್ಲಿ ಇಷ್ಟಬಂದಂತೆ—

೩೭. ದಿವ್ಯರೂಪವನ್ನು ಧರಿಸಿದವನಾಗಿ ಸಂಪದ್ಯುಕ್ತನಾಗಿ ಗಂಧರ್ವ ಕಿನ್ನರರ ಗಾನವನ್ನು ಕೇಳುತ್ತಾ ಲೋಕಗಳಿರುವವರೆಗೂ ಇರುವವನಾಗು ಎಂದು ಹೇಳಿದನು.

೩೮. ಭಗವಂತನಾದ ಮಾಧವನು ಪದ್ಮಾಕ್ಷನನ್ನು ಕುರಿತು ನೀನು ಕುಬೇರನಾಗುವವನಾಗು. ಧನಗಳಿಗೆಲ್ಲಕ್ಕೂ ಒಡೆಯನಾಗಿ ಯೋಗ್ಯವಾದ ಕಾಲದಲ್ಲಿ ಪುನಃ ನನ್ನನ್ನು ಪ್ರತಿದಿನವೂ ಬಂದು ನೋಡುತ್ತಾ ಸುಖವಾಗಿ ರಾಜ್ಯವಾಳುತ್ತಿರು.

ಆಗಚ್ಛ ದ್ವಿಷ್ಟ್ವಾ ಮಾಂ ನಿತ್ಯಂ ಕುರು ರಾಜ್ಯಂ ಯಥಾ ಸುಖಂ ।
ಏವಮುಕ್ತ್ವಾ ಹರಿರ್ವಿಷ್ಣುಃ ಬ್ರಹ್ಮಾಣಮಿದ ಮಬ್ರವೀತ್ ॥೫೯॥

ಕೌಶಿಕಸ್ಯಾಸ್ಯ ಗಾನೇನ ಯೋಗನಿದ್ರಾ ಚ ಮೇ ಗತಾ ।
ವಿಷ್ಣುಸ್ಥಲೇ ಚ ಮಾಂ ಸ್ತೌತಿ ಶಿಷ್ಯೈರೇಷ ಸಮಂತತಃ ॥೬೦॥

ರಾಜ್ಞಾ ನಿರಸ್ತಃ ಕ್ರೂರೇಣ ಕಲಿಂಗೇನ ಮಹೀಯಸಾ ।
ಸ ಜಿಹ್ವಾಚ್ಛೇದನಂ ಕೃತ್ವಾ ಹರೇರನ್ಯಂ ಕಥಂಚನ ॥೬೧॥

ನ ಸ್ತೋಷ್ಯಾಮೀತಿ ನಿಯತಃ ಪ್ರಾಪ್ತೋಽಸೌ ಮಮ ಲೋಕತಾಂ ।
ಏತೇ ಚ ವಿಪ್ರಾ ನಿಯತಾ ಮಮ ಭಕ್ತಾ ಯಶಸ್ವಿನಃ ॥೬೨॥

ಶ್ರೋತ್ರ ಚ್ಛಿದ್ರ ಮಥಾಹತ್ಯ ಶಂಕುಭಿರ್ವೃಕ್ಷ ಪರಸ್ಪರಂ ।
ಶ್ರೋಷ್ಯಾಮೋ ನೈವ ಚಾನ್ಯದ್ವೈ ಹರೇಃ ಕೀರ್ತಿಮಿತಿ ಸ್ಮ ಹ ॥೬೩॥

---

೫೯–೬೦. ಹೀಗೆಂದು ಹೇಳಿ ವಿಷ್ಣುವು ಬ್ರಹ್ಮನನ್ನು ಕುರಿತು ಇದನ್ನು ಹೇಳಿದನು. ಈ ಕೌಶಿಕನ ಗಾನದಿಂದ ನನ್ನ ಯೋಗನಿದ್ರೆಯೂ ಹೊರಟು ಹೋಯಿತು. ಇವನು ವಿಷ್ಣು ದೇವಾಲಯದಲ್ಲಿ ತನ್ನ ಶಿಷ್ಯ ರೊಡಗೂಡಿ ನನ್ನ ಸ್ತೋತ್ರವನ್ನು ಮಾಡುತ್ತಿದ್ದನು.

೬೧ ಇವನನ್ನು ಕ್ರೂರನಾದ ಕಳಿಂಗನೆಂಬ ರಾಜನು ತನ್ನ ದೇಶ ದಿಂದ ಹೊರಡಿಸಿದನು. ಅಂಥಾ ಕೌಶಿಕನು ವಿಷ್ಣುವನ್ನು ಬಿಟ್ಟು ಬೇರೆ ಯವರನ್ನು ಸೇವಿಸುವುದಿಲ್ಲವೆಂದು ತನ್ನ ನಾಲಿಗೆಯನ್ನೇ ಕತ್ತರಿಸಿ ಕೊಂಡನು. ಹೀಗೆ ಕಷ್ಟದಿಂದ ತನ್ನ ನಿಯಮವನ್ನು ಪಾಲಿಸಿದವನಾಗಿ ಈಗ ನನ್ನ ಲೋಕವನ್ನು ಹೊಂದಿದ್ದಾನೆ.

೬೨–೬೩. ಈ ಬ್ರಾಹ್ಮಣರುಗಳೂ ಕೂಡ ನಿಯಮವುಳ್ಳ ನನ್ನ ಪ್ರಸಿದ್ಧರಾದ ಭಕ್ತರಾಗಿದ್ದಾರೆ. ತಮ್ಮ ತಮ್ಮ ಕಿವಿಗಳನ್ನು ಮರದ ಗೂಟ ದಿಂದ ಮರೆಮಾಡಿಕೊಂಡು ವಿಷ್ಣುವಿನ ಭಜನೆಯನ್ನು ಬಿಟ್ಟು ಇನ್ನೊ ಬ್ಬರ ಕೀರ್ತಿಯನ್ನು ಕೇಳುವುದಿಲ್ಲವೆಂದು ಹೇಳಿದರು. ಈ ನಿಯಮ ಪಾಲನೆಯಿಂದಲೇ ಇವರುಗಳು ದೇವತ್ವವನ್ನೂ ನನ್ನ ಸಾಮೀಪ್ಯವನ್ನೂ ಹೊಂದಿದ್ದಾರೆ.

ಏತೇ ವಿಪ್ರಾಶ್ಚ ದೇವತ್ವಂ ಮಮ ಸಾನ್ನಿಧ್ಯ ಮೇವಚ ।
ಮಾಲವೋ ಭಾರ್ಯಯಾ ಸಾರ್ಧಂ ಮತ್ ಕ್ಷೇತ್ರಂ ಪರಿಮೃಜ್ಯ ವೈ ॥
ದೀಪಮಾಲಾದಿಭಿರ್ನಿತ್ಯ ಮಭ್ಯರ್ಚ್ಯ ಸತತಂ ಹಿ ಮಾಂ ।
ಗಾನಂ ಶೃಣೋತಿ ನಿಯತೋ ಮತ್ಕೀರ್ತಿಚರಿತಾನ್ವಿತಂ ॥೬೫॥
ತೇನಾಸೌ ಪ್ರಾಪ್ತವಾಲ್ಲೋಕಾನ್ ಮಮ ಬ್ರಹ್ಮ ಸನಾತನಂ ।
ಪದ್ಮಾಕ್ಷೋಽಸೌ ದದೌ ಭೋಜ್ಯಂ ಕೌಶಿಕಸ್ಯ ಮಹಾತ್ಮನಃ ॥೬೬॥
ಧನೇಶತ್ವ ಮವಾಪ್ತೋಽಸೌ ಮಮ ಸಾನ್ನಿಧ್ಯಮೇವಚ ।
ಏವ ಮುಕ್ತ್ವಾ ಹರಿಸ್ತತ್ರ ಸಮಾಜೇ ಲೋಕಪೂಜಿತಃ ॥೬೭॥
ತಸ್ಮಿನ್ ಕ್ಷಣೇ ಸಮಾಸನ್ನಾ ಮಧುರಾಕ್ಷರ ಪೇಶಲೈಃ ।
ವಿಪಂಚೀ ಗುಣತತ್ವಜ್ಞೈಃ ವಾದ್ಯವಿದ್ಯಾವಿಶಾರದೈಃ ॥೬೮॥

---

೬೪–೬೫ ಮಾಲವನು ಭಾರ್ಯೆಯೊಡನೆ ನನ್ನ ದೇವಾಲಯವನ್ನು ಸಾರಿಸಿ ಯಾವಾಗಲೂ ದೀಪಮಾಲೆಗಳಿಂದ ನನ್ನನ್ನು ಸೇವಿಸಿ ಪೂಜಿಸುತ್ತಿದ್ದನು. ಇವನು ನಿಶ್ಚಲವಾದ ಮನಸ್ಸಿನಿಂದ ನನ್ನ ಭಜನೆಯನ್ನು ಕೇಳುತ್ತಾ ಇದ್ದನು. ಆದಕಾರಣದಿಂದಲೇ ಇವನು ಈ ಸನಾತನವಾದ ನನ್ನ ಲೋಕವನ್ನು ಹೊಂದಿದವನಾದನು.

೬೬. ಈ ಪದ್ಮಾಕ್ಷನು ಮಹಾತ್ಮನಾದ ಕೌಶಿಕನಿಗೆ ಅನ್ನವನ್ನು ನೀಡಿದನು. ಅದಕ್ಕಾಗಿಯೇ ಅವನು ಕುಬೇರನ ಸ್ಥಾನವನ್ನು ಮತ್ತು ನನ್ನ ಸಾಮೀಪ್ಯವನ್ನೂ ಹೊಂದಿದನು.

೬೭. ಈ ರೀತಿಯಾಗಿ ಲೋಕೇಶ್ವರನಾದ ಶ್ರೀಮನ್ನಾರಾಯಣನು ಆ ದೇವತೆಗಳ ಸಭೆಯಲ್ಲಿ ಹೇಳಿ ಎಲ್ಲರಿಂದಲೂ ಪೂಜಿಸಲ್ಪಟ್ಟನು.

೬೮–೬೯. ಹೀಗೆ ಹೇಳುತ್ತಿರುವ ಕಾಲದಲ್ಲೇ ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯು ಬಂದಳು. ಅವಳ ಸುತ್ತಲೂ ಸಂಗೀತವಿಶಾರದರೂ, ವೀಣೆಯ ಧ್ವನಿಯ ತತ್ವವನ್ನು ತಿಳಿದವರೂ, ಮತ್ತು ಕರ್ಣಮಧುರವಾಗಿ ಗಾನಮಾಡುವರೂ ಆದ ಭಕ್ತರು ಸ್ತೋತ್ರಮಾಡುತ್ತಿದ್ದರು. ಇಂಥಾ

ಮಂದಂ ಮಂದಸ್ಮಿತಾ ದೇವೀ ವಿಚಿತ್ರಾಭರಣಾನ್ವಿತಾ ।
ಗಾಯಮಾನಾ ಸಮಾಯಾತಾ ಲಕ್ಷ್ಮೀರ್ವಿಷ್ಣು ಪರಿಗ್ರಹಾ ॥೬೯॥

ವೃತಾ ಸಹಸ್ರಕೋಟೀಭಿ ರಂಗನಾಭಿಃ ಸಮಂತತಃ ।
ತತೋ ಗಣಾಧಿಪಾ ದೃಷ್ಟ್ವಾ ಭುಶುಂಡೀಪರಿಘಾಯುಧಾಃ ॥೭೦॥

ಬ್ರಹ್ಮಾದೀನ್ ತರ್ಜಯಂತಸ್ತೇ ಮುನೀನ್ ದೇವಾನ್ ಸಮಂತತಃ ।
ಉತ್ಸಾರಯಂತಃ ಸಂದೃಷ್ಟ್ವಾಧಿಷ್ಠಿತಾಃ ಪರ್ವತೋಪಮಾಃ ॥೭೧॥

ಸರ್ವೇ ವಯಂ ಹಿ ನಿರ್ಯಾತಾಃ ಸಾರ್ಧಂ ವೈ ಬ್ರಹ್ಮಣಾ ಸುರೈಃ ।
ತಸ್ಮಿನ್ ಕ್ಷಣೇ ಸಮಾಹೂತಃ ತುಂಬುರುರ್ಮುನಿಸತ್ತಮಃ ॥೭೨॥

---

ಲಕ್ಷ್ಮಿಯು ಮೆಲ್ಲನಡಿಯನ್ನಿಡುತ್ತಾ ಅನೇಕಾಭರಣಗಳನ್ನು ಧರಿಸಿಕೊಂಡವಳಾಗಿ ಮಂದಸ್ಮಿತದಿಂದ ಕೂಡಿದವಳಾಗಿ ಅಲ್ಲಿಗೆ ಬಂದಳು.

೭೦. ಆ ಲಕ್ಷ್ಮಿಯ ಸುತ್ತಲೂ ಸಹಸ್ರ ಕೋಟಿ ದೇವತಾಸ್ತ್ರೀಯರ ಗುಂಪುಗಳು ಸುತ್ತುವರಿದಿದ್ದರು.

೭೧. ಇದಾದನಂತರ ಲಕ್ಷ್ಮಿಯ ಆಗಮನವನ್ನು ಕಂಡು ಗಣಾಧಿಪತಿಗಳು ಭುಶುಂಡೀ ಮತ್ತು ಪರಿಘವೇ ಮೊದಲಾದ ಆಯುಧಗಳನ್ನು ಹಿಡಿದವರಾಗಿ ಬ್ರಹ್ಮಾದಿಗಳನ್ನೂ, ಮತ್ತು ದೇವತೆಗಳನ್ನು ಗದರಿ ದಾರಿ ಬಿಡಿಸುತ್ತಿರುವವರಾಗಿ,ನಾವೆಲ್ಲರೂ ಬ್ರಹ್ಮ, ಇಂದ್ರ ಮತ್ತು ದೇವತೆಗಳೊಡನೆ ಹೊರಟವರೆಂದು ಹೇಳುತ್ತಿರಲು, ಪರ್ವತಗಳಂತೆ ಅಲ್ಲಿ ಕುಳಿತುಕೊಂಡರು.

೭೨. ಅದೇ ಕಾಲದಲ್ಲಿಯೇ ಮುನಿಶ್ರೇಷ್ಠನಾದ ತುಂಬುರುವು ಕರೆಯಲ್ಪಟ್ಟನು. ಅವನು ಬಂದ ಕೂಡಲೆ ಶ್ರೀಮನ್ನಾರಾಯಣ ಮತ್ತು ಲಕ್ಷ್ಮಿಯ ಹತ್ತಿರಕ್ಕೆ ಹೋಗಿ ಕುಳಿತನು.

ಪ್ರವಿವೇಶ ಸಮೀಪಂ ವೈ ದೇವ್ಯಾ ದೇವಸ್ಯ ಚೈವಹಿ ।
ತತ್ರಾಸೀನೋ ಯಥಾಯೋಗಂ ನಾನಾ ಮೂರ್ಛಾಸಮನ್ವಿತಂ ॥
ಜಗೌ ಕಲಪದಂ ದೃಷ್ಟ್ವಾ ವಿಪಂಚೀಂ ಚಾಭ್ಯವಾದಯತ್ ।
ನಾನಾರತ್ನ ಸಮಾಯುಕ್ತೈಃ ದಿವ್ಯೈರಾಭರಣೋತ್ತಮೈಃ ॥೭೪॥
ದಿವ್ಯಮಾಲ್ಯೈಃ ತಥಾ ಶುಭ್ರೈಃ ಪೂಜಿತೋ ಮುನಿಸತ್ತಮಃ ।
ನಿರ್ಗತಸ್ತುಂಬುರು ಹೃಷ್ಟೋ ಅನ್ಯೇ ಚ ಋಷಯಃ ಸುರಾಃ ॥
ದೃಷ್ಟ್ವಾ ಸಂಪೂಜಿತಂ ಯಾಂತಂ ಯಥಾ ಯೋಗಮರಿಂದಮ ।
ನಾರದೋಽಥ ಮುನಿ ರ್ದೃಷ್ಟ್ವಾ ತುಂಬರೋಃ ಸತ್ಕ್ರಿಯಾಂ ಹರೇಃ ॥

---

೭೩. ಅಲ್ಲಿ ಕುಳಿತವನಾಗಿ ಸಮಯಕ್ಕನುಗುಣವಾದ, ಅನೇಕವಿಧವಾದ ಆರೋಹಣಾವರೋಹಣಗಳಿಂದ ಕೂಡಿದ, ಮಧುರವಾಗಿಯೂ ಸ್ಫುಟವಾಗಿಯೂ ಇರುವ ಪದವನ್ನು ಬಹಳ ಸಂತೋಷದಿಂದ ಹಾಡಿದನು. ಅನಂತರಲ್ಲಿ ತನ್ನ ಏಳು ತಂತಿಗಳುಳ್ಳ ವಿಪಂಚಿ ಎಂಬ ವೀಣೆಯನ್ನೂ ನುಡಿಯಿಸಿದನು.

೭೪. ಹೀಗೆ ಹಾಡಿದ ತುಂಬುರುವನ್ನು ನಾರಾಯಣನು ಅನೇಕ ವಿಧವಾದ ರತ್ನಗಳಿಂದ ಕೂಡಿದ ದೇವತಾಯೋಗ್ಯವಾದ ಆಭರಣಗಳಿಂದಲೂ, ಮತ್ತು ಶುಭ್ರವಾದ ದಿವ್ಯ ಮಾಲ್ಯ (ವಸ್ತ್ರ) ಗಳಿಂದಲೂ ಪೂಜಿಸಿದನು.

೭೫. ಸತ್ಕಾರದಿಂದ ಸಂತೋಷಗೊಂಡ ತುಂಬುರುವು ಅಲ್ಲಿಂದ ತೆರಳಿದನು.

೭೬. ಎಲೈ ಅಂಬರೀಷಮಹಾರಾಜನೇ, ಈ ಸತ್ಕಾರವನ್ನು ನೋಡಿ ಅಲ್ಲಿದ್ದ ಎಲ್ಲಾ ಋಷಿಗಳೂ ದೇವತೆಗಳೂ, ಶ್ಲಾಘ್ಯನಾಗಿರುವ ಆ ತುಂಬುರುವನ್ನು ಚೆನ್ನಾಗಿ ಹೊಗಳಿದರು. ವಿಷ್ಣುವಿನಿಂದ ಹೀಗೆ ತುಂಬುರುವಿಗಾದ ಪೂಜೆಯನ್ನು ನೋಡಿ ನಾರದ ಮಹರ್ಷಿಯು

**ಶೋಕಾವಿಷ್ಟೇನ ಮನಸಾ ಸಂತಪ್ತಹೃದಯೇಕ್ಷಣಃ ।**
**ಚಿಂತಾಂ ಅಪೇದಿವಾನ್ ತತ್ರ ಶೋಕಮೂರ್ಛಾಽಕುಲಾತ್ಮಕಃ ॥**

**ತೇನಾಹಂ ಹಿ ಹರೇರ್ಯಾಸ್ಯೇ ಯೋಗಂ ದೇವೀಸಮೀಪತಃ ।**
**ಅಹೋ ತುಂಬುರುಣಾ ಪ್ರಾಪ್ತಂ ಧಿಙ್ಮಾಂ ಮೂಢಂ ವಿಚೇತಸಂ ॥**

**ಯೋಽಹಂ ಹರೇಃ ಸನ್ನಿಕಾಶಂ ಭೂತ್ಯೈರ್ನಿರ್ಯಾತಿತಃ ಕಥಂ ।**
**ಜೀವನ್ ಯಾಸ್ಯಾಮಿ ಕುತ್ರಾಹ ಮಹೋ ತುಂಬುರುಣಾ ಕೃತಂ ॥**

**ಇತಿ ಸಂಚಿಂತಯನ್ ವಿಪ್ರಸ್ತಪ ಆಸ್ಥಿತವಾನ್ ಮುನಿಃ ।**
**ದಿವ್ಯಂ ವರ್ಷಸಹಸ್ರಂ ತು ನಿರುಚ್ಛ್ವಾಸ ಸಮನ್ವಿತಃ ॥೬೦॥**

**ಧ್ಯಾಯನ್ ವಿಷ್ಣು ಮಥಾಧ್ಯಾಸ್ತೇ ತುಂಬುರೋಃ ಸತ್ಕ್ರಿಯಾಂ ಸ್ಮರನ್ ।**
**ರೋದಮಾನೋ ಮುಹುಃ ವಿದ್ವಾನ್ ಧಿಙ್ಮಾಮಿತಿ ಚ ಚಿಂತಯನ್ ॥**

---

೭೭. ತನಗೆ ಸರಿಸಮಾನನಾದ ವಿದ್ಯೆಯುಳ್ಳ ಆ ತುಂಬುರುವಿಗೆ ಮಾತ್ರವೇ ಆದ ಪೂಜೆಯಿಂದ ಬಹಳದುಃಖ ಹೊಂದಿದವನಾಗಿ ಮನಸ್ಸೆಲ್ಲವೂ ಕದಡಿದವನಾಗಿ, ಶೋಕದಿಂದಲೂ ಬೆಂದು, ಬಹಳವಾದ ಚಿಂತೆಯನ್ನು ಹೊಂದಿದನು.

೭೮–೭೯. ನಾನು ಯಾವರೀತಿಯಾಗಿ ನಾರಾಯಣ ಮತ್ತು ಲಕ್ಷ್ಮಿಯರ ಹತ್ತಿರಕ್ಕೆ ಹೋಗಲಿ? ಅಯ್ಯೋ, ತುಂಬುರುವಿನಿಂದಲೇ ಇಂಥಾ ಸತ್ಕಾರವು ಹೊಂದಲ್ಪಟ್ಟಿತು.! ನನ್ನಂಥ ಮೂರ್ಖ ಮತ್ತು ಬೆಪ್ಪನು ಇನ್ನೊಬ್ಬನುಂಟೇ? ನನಗೆಧಿಕ್ಕಾರ ವಿರಲಿ? ನಾನು ಇಂತಹ ಒಳ್ಳೆಯ ಸಮಯದಲ್ಲಿ ಶ್ರೀಮನ್ನಾರಾಯಣನ ಹತ್ತಿರದಿಂದ ಭೂತಗಳಿಂದ ಹೇಗೆ ತಾನೇ ಕಳೆಯಲ್ಪಟ್ಟವನಾಗಿ ಹೋಗುವಂತಾಯಿತಲ್ಲಾ (ಎಲ್ಲಿ ಹೋದರೂ ಅವಮಾನ ತಪ್ಪದೆಂದು ತಾತ್ಪರ್ಯವು)

೬೦. ಹೀಗೆ ದುಃಖಿಸುತ್ತಾ ಆ ಋಷಿಯಾದ ಬ್ರಾಹ್ಮಣ ಶ್ರೇಷ್ಠನು ಒಂದು ಸಾವಿರ ದಿವ್ಯ ವರ್ಷಗಳವರೆಗೂ ಪ್ರಾಣಾಯಾಮ ಪೂರ್ವಕವಾಗಿ ತಪಸ್ಸುಮಾಡಲು ಮೊದಲಿಟ್ಟನು.

೬೧. ಆ ನಾರದನು ವಿಷ್ಣುವಿನ ಧ್ಯಾನವನ್ನು ಮಾಡುತ್ತಾ ಬಾರಿ ಬಾರಿಗೂ ತುಂಬುರುವಿಗಾದ ಸತ್ಕಾರವನ್ನು ನೆನೆಸಿಕೊಂಡು ಅಳುತ್ತಾ, ಇಂಥ ನನಗೆ ಧಿಕ್ಕಾರವೆಂದು ದುಃಖಿಸುತ್ತಾ, ತಪಸ್ಸು ಮಾಡುತ್ತಿದ್ದನು.

ತತ್ರ ಯತ್ಕೃತವಾನ್ ವಿಷ್ಣುಃ ತತ್ ಶೃಣುಷ್ವ ನರಾಧಿಪ ॥೮೨॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಕೌಶಿಕ ವೃತ್ತ ಕಥನಂ ನಾಮ ಪ್ರಥಮೋಽಧ್ಯಾಯಃ

---

೮೨. ಮಾರ್ಕಂಡೇಯ ಮುನಿಯು ಅಂಬರೀಷನನ್ನು ಕುರಿತು,ಎಲೈ ರಾಜನೇ, ಹೀಗೆ ತಪಸ್ಸು ಮಾಡುತ್ತಿರುವ ನಾರದನ ವಿಷಯವಾಗಿ ವಿಷ್ಣುವು ಹೇಗೆ ನಡೆದು ಕೊಂಡನೆಂಬುದನ್ನು ಕೇಳು. ಎಂದು ಹೇಳಿದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಕೌಶಿಕನೆಂಬ ಭಕ್ತನ ಚರಿತ್ರೆಯಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ದ್ವಿತೀಯೋऽಧ್ಯಾಯಃ

**॥ ಮಾರ್ಕಂಡೇಯ ಉವಾಚ ॥**

**ತತೋ ನಾರಾಯಣೋ ದೇವಸ್ತಸ್ಮೈ ಸರ್ವಂ ಪ್ರದಾಯ ವೈ ।**
**ಕಾಲಯೋಗೇನ ವಿಶ್ವಾತ್ಮಾ ಸಮಂ ಚಕ್ರೇऽಥ ತುಂಬುರೋಃ ॥ ೧ ॥**

**ನಾರದಂ ಮುನಿಶಾರ್ದೂಲಮೇವಂ ವೃತ್ತಮಭೂತ್ಪುರಾ ।**
**ನಾರಾಯಣಸ್ಯ ಗೀತಾನಾಂ ಗಾನಂ ಶ್ರೇಷ್ಠಂ ಪುನಃ ಪುನಃ ॥ ೨ ॥**

**ಗಾನೇನಾರಾಧಿತೋ ವಿಷ್ಣುಃ ಸತ್ಕೀರ್ತಿಂ ಜ್ಞಾನವರ್ಚಸೀ ।**
**ದದಾತಿ ತುಷ್ಟಿಂ ಸ್ಥಾನಂ ಚ ಯಥಾऽಸೌ ಕೌಶಿಕಸ್ಯ ವೈ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಎರಡನೆಯ ಅಧ್ಯಾಯವು.

೧. ಮಾರ್ಕಂಡೇಯ ಋಷಿಯು ಅಂಬರೀಷಮಹಾರಾಜನನ್ನು ಕುರಿತು ನಾರದ ತುಂಬುರು ಇವರಸಮಾನತೆಯನ್ನು ಹೇಳುವವನಾಗಿ ಹೀಗೆ ಪ್ರಾರಂಭಿಸಿದನು :— ಎಲೈ ಅಂಬರೀಷನೇ, ತಪಸ್ಸುಮಾಡುತ್ತಿರುವ ನಾರದತುಂಬುರು ಇವರಿಗೆ ಪ್ರಾಪ್ತವಾದದ್ದನ್ನೆಲ್ಲವನ್ನೂ ಕೌಶಿಕನಿಗೂ ಕೊಟ್ಟು ಕೌಶಿಕನನ್ನು ತುಂಬುರನಿಗೆ ಸಮಾನನನ್ನಾಗಿ ಮಾಡಿದನು.

೨. ಹೀಗೆಯೇ ಮುನಿಶ್ರೇಷ್ಠನಾದ ನಾರದನನ್ನೂ ತನ್ನ ಭಕ್ತನನ್ನಾಗಿ ಮಾಡಿದನು. ಇಂತಹ ಮೇಲಾದ ಫಲವನ್ನುಂಟುಮಾಡುವುದರಿಂದ ಈ ನಾರಾಯಣನ ಗೀತ (ಭಜನೆ) ಗಳ ಗಾನಕ್ಕೆ ಈ ರೀತಿಯಾಗಿ ಮತ್ತೆ ಮತ್ತೆ ಶ್ರೇಷ್ಠತೆಯುಂಟಾಯಿತೆನ್ನುವುದಕ್ಕೆ ನಿದರ್ಶನವಾಗಿ ಹೀಗೆ ಹಿಂದಿನ ಕಥೆಯೂ ಇರುತ್ತದೆ.

೩. ಭಜನೆ ಸ್ತೋತ್ರಗಳಿಂದ ಪೂಜಿಸಿದ್ದೇ ಆದರೆ ವಿಷ್ಣುವು ಸಂತೋಷಗೊಂಡು ಒಳ್ಳೆಯ ಕೀರ್ತಿಯನ್ನೂ ಜ್ಞಾನ ಮತ್ತು ತೇಜಸ್ಸನ್ನೂ ಸಂತೋಷವನ್ನೂ ಮತ್ತು ಸ್ಥಾನವನ್ನೂ, ಕೌಶಿಕನಿಗೆ ಕೊಟ್ಟಂತೆ, ಭಕ್ತರೆಲ್ಲರಿಗೂ ಪ್ರದಾನಮಾಡುವವನಾಗಿದ್ದಾನೆ.

ಪದ್ಮಾಕ್ಷ ಪ್ರಭೃತೀನಾಂ ಚ ಸಂಸಿದ್ಧಿಂ ಪ್ರದದೌ ಹರಿಃ ।
ತಸ್ಮಾತ್ತ್ವಯಾ ಮಹಾರಾಜ ವಿಷ್ಣುಕ್ಷೇತ್ರೇ ವಿಶೇಷತಃ ॥ ೪ ॥
ಅರ್ಚನಂ ಗಾನನೃತ್ಯಾದ್ಯಂ ವಾದ್ಯೋತ್ಸವಸಮನ್ವಿತಂ ।
ಕರ್ತವ್ಯಂ ವಿಷ್ಣು ಭಕ್ತೈರ್ಹಿ ಪುರುಷೈರನಿಶಂ ನೃಪ ॥ ೫ ॥
ಶ್ರೋತವ್ಯಂ ಚ ಸದಾ ನಿತ್ಯಂ ಶ್ರೋತವ್ಯೋಽಸೌ ಹರಿಸ್ತಥಾ ।
ವಿಷ್ಣುಕ್ಷೇತ್ರೇ ತು ಯೋ ವಿದ್ವಾನ್ ಕಾರಯೇದ್ಭಕ್ತಿಸಂಯುತಃ॥ ೬ ॥
ಗಾನನೃತ್ಯಾದಿಕಂ ಚೈವ ವಿಷ್ಣ್ವಾಖ್ಯಾನಂ ಕಥಾಂ ತಥಾ ।
ಜಾತಿಸ್ಮೃತಿಂ ಚ ಮೇಧಾಂ ಚ ತಥೈವೋಪರಮೇ ಸ್ಮೃತಿಂ ॥ ೭ ॥

---

೪. ಪದ್ಮಾಕ್ಷನೇ ಮೊದಲಾದವರು ಕೇವಲ ವಿಷ್ಣುಭಕ್ತರ ಸೇವೆಯಲ್ಲಿ ತತ್ಪರರಾಗಿದ್ದರು. ಅಂಥವರಿಗೂ ಕೂಡ ನಾರಾಯಣನು ಸಿದ್ಧಿಯನ್ನು ಕೊಟ್ಟಿದ್ದಾನೆ.

೫. ಆದುದರಿಂದ ಎಲೈ ಅಂಬರೀಷ ಮಹಾರಾಜನೇ, ನಿನ್ನಿಂದಲೂ ಕೂಡ ವಿಶೇಷವಾಗಿ ವಿಷ್ಣುಕ್ಷೇತ್ರಗಳಲ್ಲಿ ಪೂಜೆಯು ಮಾಡಲ್ಪಡಬೇಕು. ವಿಷ್ಣುಭಕ್ತರುಗಳಾದ ಮನುಷ್ಯರೆಲ್ಲರೂ ಯಾವಾಗಲೂ ವಿಷ್ಣುವಿನ ಸನ್ನಿಧಿಯಲ್ಲಿ ವಾದ್ಯಾದಿಗಳಿಂದಲೂ ಭಜನೆ ಮತ್ತು ನಾಟ್ಯಾದಿಗಳಿಂದಲೂ ಕೂಡಿದ ಪೂಜೆಯನ್ನು ಮಾಡಬೇಕು.

೬. ವಿಷ್ಣುವಿನ ಕಥೆಯನ್ನು ಯಾವಾಗಲೂ ಕೇಳಬೇಕು. ವಿಷ್ಣುವಿನ ಚರಿತ್ರೆಯು ಯಾವಾಗಲೂ ಕೇಳಲು ಯೋಗ್ಯವಾದದ್ದು. ಯಾವ ವಿದ್ವಾಂಸನು ವಿಷ್ಣುಭಕ್ತಿಯಿಂದ ಪ್ರೇರಿತನಾಗಿ ಕ್ಷೇತ್ರಗಳಲ್ಲಿ ಗಾನ ನೃತ್ಯಾದಿಗಳನ್ನೂ ಮತ್ತು ವಿಷ್ಣುವಿನ ಕಥೆಯ ಪಾರಾಯಣವನ್ನೂ ಆ ಪುರಾಣಶ್ರವಣವನ್ನೂ ಮಾಡಿಸುತ್ತಾನೋ,

೭. ಅವನು ಪೂರ್ವಜನ್ಮದಸ್ಮೃತಿಯನ್ನೂ ಒಳ್ಳೆ ಬುದ್ಧಿಯನ್ನೂ ಹೊಂದುತ್ತಾನೆ. ಮತ್ತು ಮರಣ ಹೊಂದಿದ ಮೇಲೆ ವಿಷ್ಣುಲೋಕವನ್ನೂ ಹೊಂದುತ್ತಾನೆ. ಇದು ಸತ್ಯವು.

ಪ್ರಾಪ್ನೋತಿ ವಿಷ್ಣುಸಾಯುಜ್ಯಂ ಸತ್ಯಮೇತನ್ನೃಪಾಧಿಪ ।
ಏತತ್ತೇ ಕಥಿತಂ ರಾಜನ್ ಯನ್ಮಾಂ ತ್ವಂ ಪರಿಪೃಚ್ಛಸಿ ॥ ೮ ॥
ಕಿಂ ವದಾಮಿ ಚ ತೇ ಭೂಯಃ ವದ ಧರ್ಮಭೃತಾಂ ವರ ॥ ೯ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ವಿಷ್ಣು ಮಾಹಾತ್ಮ್ಯಂ ನಾಮ ದ್ವಿತೀಯೋಽಧ್ಯಾಯಃ

---

೮. ಎಲೈ ರಾಜನೇ, ನೀನು ಯಾವುದನ್ನು ನನ್ನನ್ನು ಕುರಿತು ಕೇಳಿರುತ್ತೀಯೋ ಅದೆಲ್ಲವನ್ನೂ ನಿನಗೆ ಹೇಳಿದ್ದೇನೆ.

೯. ಮಾರ್ಕಂಡೇಯನು ರಾಜನನ್ನು ಕುರಿತು, ಎಲೈ ರಾಜನೇ, ನೀನು ಧಾರ್ಮಿಕರಲ್ಲಿ ಶ್ರೇಷ್ಠನು. ನಾನು ನಿನಗಾಗಿ ಮತ್ತೆ ಯಾವ ಕಥೆಯನ್ನು ಹೇಳಲಿ? ಎಂದು ಹೇಳಿದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ವಿಷ್ಣುವಿನ ಮಹಿಮೆಯನ್ನು ತಿಳಿಸುವ ಎರಡನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ತೃತೀಯೋಽಧ್ಯಾಯಃ

॥ ಅಂಬರೀಷ ಉವಾಚ ॥

**ಮಾರ್ಕಂಡೇಯ ಮಹಾಪ್ರಾಜ್ಞ ಕೇನ ಯೋಗೇನ ಲಬ್ಧವಾನ್ ।**
**ಗಾನವಿದ್ಯಾಂ ಮಹಾಭಾಗ ನಾರದೋ ಭಗವಾನ್ ಮುನಿಃ ॥ ೧ ॥**
**ತುಂಬುರೋಶ್ಚ ಸಮಾನತ್ವಂ ಕಸ್ಮಿನ್ ಕಾಲ ಉಪೇಯಿವಾನ್ ।**
**ಏತದಾಚಕ್ಷ್ವ ಮೇ ಸರ್ವಂ ಸರ್ವಜ್ಞೋಽಸಿ ಮಹಾಮತೇ ॥ ೨ ॥**

॥ ಮಾರ್ಕಂಡೇಯ ಉವಾಚ ॥

**ಶ್ರುತೋ ಮಯಾಯ ಮರ್ಥೋಽವೈ ನಾರದಾದ್ದೇವ ದರ್ಶನಾತ್ ।**
**ಸ್ವಯಮಾಹ ಮಹಾತೇಜಾ ನಾರದೋಽಸೌ ಮಹಾಮತಿಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮೂರನೆಯ ಅಧ್ಯಾಯವು.

೧. ಅಂಬರೀಷ ಮಹಾರಾಜನು ಮಾರ್ಕಂಡೇಯನನ್ನು ಕುರಿತು ಬುದ್ಧಿವಂತನಾದ ಮಾರ್ಕಂಡಯನೇ, ಮಹರ್ಷಿಯಾದ ನಾರದನು ಯಾವ ಯೋಗಸಾಧನೆಯಿಂದ ಗಾನವಿದ್ಯೆಯನ್ನು ಕಲಿತನು.?

೨. ತುಂಬುರುವಿನ ಸಮಾನತೆಯನ್ನು ಯಾವಸಮಯದಲ್ಲಿ ಹೊಂದಿದನು.? ಈ ಎಲ್ಲಾ ಸಮಾಚಾರಗಳನ್ನೂ ಮಹಾಬುದ್ಧಿವಂತನೂ, ತಿಳಿದವನೂ ಆದ ನೀನು ನನಗೆ ತಿಳಿಸುವವನಾಗು. ಎಂದು ಹೇಳಿದನು.

೩. ರಾಜನಮಾತನ್ನು ಕೇಳಿ ಮಾರ್ಕಂಡೇಯನು ಈ ರೀತಿಯಾಗಿ ಹೇಳಿದನು. ಈ ವಿಚಾರವನ್ನು ದೇವರಂತೆದರ್ಶನ ಯೋಗ್ಯನಾದ ನಾರದನಿಂದ ಕೇಳಿದೆನು. ತೇಜಸ್ವಿಯೂ,ಬುದ್ಧಿವಂತನೂ,ಆದ ನಾರದನು,ತಾನೇ ನನಗೆ ಇದನ್ನು ಹೇಳಿದನು.

ಸಂತಪ್ಯಮಾನೋ ಭಗವಾನ್ ದಿವ್ಯಂ ವರ್ಷಸಹಸ್ರಕಂ ।
ನಿರುಚ್ಛ್ವಾಸೇನ ಸಂಯುಕ್ತಃ ತುಂಬುರೋರ್ಗೌರವಂ ಸ್ಮರನ್ ॥ ೪ ॥
ತತಾಪ ಚ ಮಹಾಘೋರಂ ತಪೋರಾಶಿಃ ತಪಃ ಪರಮ್ ।
ಅಥಾಂತರಿಕ್ಷೇ ಶುಶ್ರಾವ ನಾರದೋಽಸೌ ಮಹಾಮುನಿಃ ॥ ೫ ॥
ವಾಣೀಂ ದಿವ್ಯಾಂ ಮಹಾಘೋಷಾಂ ಅದ್ಭುತಾ ಮಶರೀರಿಣೀಂ ।
ಕಿಮರ್ಥಂ ಮುನಿಶಾರ್ದೂಲ ತಪಸ್ತಪಸಿ ದುಶ್ಚರಂ ॥ ೬ ॥
ಉಲೂಕಂ ಪಶ್ಯ ಗತ್ವಾ ತ್ವಂ ಯದಿ ಗಾನೇ ರತಾ ಮತಿಃ ।
ಮಾನಸೋತ್ತರ ಶೈಲೇ ತು ಗಾನಬಂಧುರಿತಿ ಸ್ಮೃತಃ ॥ ೭ ॥

---

೪. ತೇಜಸ್ವಿಯಾದ ನಾರದನು ಒಂದು ಸಾವಿರ ದೇವವರ್ಷಗಳವರೆಗೂ ಪ್ರಾಣಾಯಾಮದಿಂದ ವಾಯುವನ್ನು ತಡೆದು ತುಂಬುರನ ಗೌರವವನ್ನು ಸ್ಮರಿಸುತ್ತಾ ತಪಸ್ಸು ಮಾಡಿದನು.

೫. ತಪೋರಾಶಿಯಾದ ನಾರದನು ಅತ್ಯುಗ್ರವಾಗಿಯೂ, ಬಹಳ ಶ್ರೇಷ್ಠವಾಗಿಯೂ ಇರುವ ತಪಸ್ಸನ್ನು ಮಾಡಿದನು. ಒಂದು ಸಾವಿರ ವರ್ಷಗಳು ಕಳೆದಮೇಲೆ ಆ ನಾರದ ಮುನಿಯು ಒಂದು ದಿನ ಆಕಾಶದಲ್ಲಿ ಆಶ್ಚರ್ಯಕರವಾದ ದೊಡ್ಡ ಶಬ್ದದಿಂದ ಕೂಡಿದ ದಿವ್ಯವಾದ ಅಶರೀರ ವಾಣಿಯನ್ನು ಕೇಳಿದನು.

೬-೭. ಎಲೈ ಋಷಿಶ್ರೇಷ್ಠನೇ. ಏತಕ್ಕಾಗಿ ಕಷ್ಟತರವಾದ ತಪಸ್ಸನ್ನು ಮಾಡುತ್ತಿರುವೆ? ಮಾನಸದ ಉತ್ತರದಲ್ಲಿರುವ ಪರ್ವತದಲ್ಲಿ ಗಾನಬಂಧುವೆಂಬ ಹೆಸರುಳ್ಳ ಉಲೂಖನೆಂಬುವನಿದ್ದಾನೆ. ನೀನು ಸಂಗೀತವನ್ನು ಕಲಿಯಬೇಕೆಂದಿದ್ದರೆ ಜಾಗ್ರತೆ ಅವನ ಹತ್ತಿರಕ್ಕೆ ಹೋಗು. ಸಂಗೀತವನ್ನು ತಿಳಿದವನಾಗುತ್ತೀಯೆ.

ಗಚ್ಛ ಶೀಘ್ರಂ ಚ ಪಶ್ಯೈನಂ ಗಾನವಿತ್ತ್ವಂ ಭವಿಷ್ಯಸಿ ।
ಇತ್ಯುಕ್ತೋ ವಿಸ್ಮಯಾವಿಷ್ಟೋ ನಾರದೋ ವಾಗ್ವಿದಾಂ ವರಃ ॥ ೮ ॥

ಮಾನಸೋತ್ತರ ಶೈಲೇ ತು ಗಾನಬಂಧುಂ ಜಗಾಮ ವೈ ।
ಗಂಧರ್ವಾಃ ಕಿನ್ನರಾ ಯಕ್ಷಾಸ್ತಥಾ ಚಾಪ್ಸರಸಾಂ ಗಣಾಃ ॥ ೯ ॥

ಸಮಾಸೀನಾಸ್ತು ಪರಿತೋ ಗಾನಬಂಧುಂ ಸಮಂತತಃ ।
ಗಾನವಿದ್ಯಾಂ ಸಮಾಪನ್ನಾಃ ಶಿಕ್ಷಿತಾಸ್ತೇನ ಪಕ್ಷಿಣಾ ॥೧೦॥

ಸ್ನಿಗ್ಧಕಂಠಸ್ವರಾಸ್ತತ್ರ ಸಮಾಸೀನಾ ಮುದಾಽನ್ವಿತಾಃ ।
ತತೋ ನಾರದಮಾಲೋಕ್ಯ ಗಾನಬಂಧುರುವಾಚ ಹ ॥೧೧॥

ಪ್ರಣಿಪತ್ಯ ಯಥಾನ್ಯಾಯಂ ಸ್ವಾಗತೇನಾಭ್ಯಪೂಜಯತ್ ।
ಕಿಮರ್ಥಂ ಭಗವಾನತ್ರ ಚಾಗತೋಽಸಿ ಮಹಾಮತೇ ॥೧೨॥

---

೮. ಈರೀತಿಯಾದ ವಾಣಿಯನ್ನು ಕೇಳಿ ಬಹಳ ಆಶ್ಚರ್ಯಗೊಂಡ ನಾರದಮಹರ್ಷಿಯು ಮಾನಸದ ಉತ್ತರದಲ್ಲಿರುವ ಪರ್ವತದಲ್ಲಿರುವ ಗಾನಬಂಧುವಿನ ಹತ್ತಿರಕ್ಕೆ ಹೋದನು.

೯–೧೦. ಅಲ್ಲಿ ಗಂಧರ್ವರೂ, ಕಿನ್ನರರೂ, ಯಕ್ಷರೂ, ಮತ್ತು ಅಪ್ಸರೆಯರುಗಳೂ, ಕೂಡ ಗುಂಪುಗುಂಪಾಗಿ ಆ ಗಾನಬಂಧುವಿನ ಸುತ್ತಲೂ ಕುಳಿತಿದ್ದರು. ಕೆಲವರು ಗಾನವಿದ್ಯೆಯನ್ನು ಕಲಿತವರೂ ಕೂಡ ಸಂತೋಷದಿಂದ ಆ ಪಕ್ಷಿಯ ಸುತ್ತಲೂ ಕುಳಿತು ಹಾಡುತ್ತಿದ್ದರು.

೧೧. ಆ ಗಾನ ಬಂಧುವು ನಾರದರು ಬಂದದ್ದನ್ನು ನೋಡಿ ಎದ್ದು ಯೋಗ್ಯವಾಗಿ ಸ್ವಾಗತಿಸಿ ನಮಸ್ಕಾರಮಾಡಿ ಪೂಜಿಸಿದನು. ಆಮೇಲೆ ಗಾನ ಬಂಧುವು ನಾರದನನ್ನು ಕುರಿತು ಹೀಗೆಂದು ಹೇಳಿದನು.

೧೨. ಮಹಾಪ್ರಾಜ್ಞರಾದ ಎಲೈ ನಾರದರೇ, ತಾವು ಇಲ್ಲಿ ಏಕೆ ಬಂದಿದ್ದೀರಿ? ನನ್ನಿಂದ ಏನಾಗಬೇಕಾಗಿದೆ.? ನಿಮಗಾಗಿ ನಾನೇನನ್ನು ಮಾಡಲಿ? ಎಂದನು.

ಕಿಂ ಕಾರ್ಯಂ ಹಿ ಮಯಾ ಬ್ರಹ್ಮನ್ ಬ್ರೂಹಿ ಕಿಂ ಕರವಾಣಿ ತೇ ।

॥ ನಾರದ ಉವಾಚ ॥

ಉಲೂಕೇಂದ್ರ ಮಹಾಪ್ರಾಜ್ಞ ಶೃಣು ಸರ್ವಂ ಯಥಾತಥಂ ॥೧೩॥

ಮಮ ವೃತ್ತಂ ಪ್ರವಕ್ಷ್ಯಾಮಿ ಪುರಾಭೂತಂ ಮಹಾದ್ಭುತಂ ।
ಅತೀತೇ ಹಿ ಯುಗೇ ವಿದ್ವನ್ ನಾರಾಯಣ ಸಮೀಪಗಂ ॥೧೪॥

ಮಾಂ ವಿನಿರ್ಧೂಯ ಸಂಹೃಷ್ಟಃ ಸಮಾಹೂಯ ಚ ತುಂಬುರುಂ ।
ಲಕ್ಷ್ಮ್ಯಾ ಸಮನ್ವಿತೋ ವಿಷ್ಣು ರಶೃಣೋದ್ಗಾನಮುತ್ತಮಂ ॥೧೫॥

ಬ್ರಹ್ಮಾದಯಃ ಸುರಾಸ್ಸರ್ವೇ ನಿರಸ್ತಾಃಸ್ಥಾನತೋಽಚ್ಯುತಾಃ ।
ಕೌಶಿಕಾದ್ಯಾಃ ಸಮಾಸೀನಾ ಗಾನಯೋಗೇನ ವೈ ಹರಿಂ ॥೧೬॥

ಏವಮಾರಾಧ್ಯ ಸಂಪ್ರಾಪ್ತಾ ಗಾಣಪತ್ಯಂ ಯಥಾಸುಖಂ ।
ತೇನಾಹ ಮತಿದುಃಖಾರ್ತಸ್ತಪಸ್ತಪ್ತುಮಿಹಾಗತಃ ॥೧೭॥

---

೧೩. ನಾರದನು ಹೀಗೆಂದು ಹೇಳಿದನು. ಬುದ್ಧಿವಂತನಾದ ಉಲೂಕ ಶ್ರೇಷ್ಠನೇ, ಹಿಂದೆ ನನ್ನ ಅತ್ಯಾಶ್ಚರ್ಯಕರವಾದ ಕಥೆಯನ್ನು ಹೇಳುತ್ತೇನೆ. ಎಲ್ಲಾ ಕಥೆಯನ್ನೂ ಕೇಳು.

೧೪–೧೫. ಎಲೈ ವಿದ್ವಾಂಸನೇ, ಹಿಂದಿನ ಯುಗದಲ್ಲಿ ನಾರಾಯಣನ ಹತ್ತಿರದಲ್ಲಿದ್ದ ನಾನು ದೂರತಳ್ಳಲ್ಪಟ್ಟೆನು. ವಿಷ್ಣುವು ಸಂತೋಷದಿಂದ ತುಂಬುರನನ್ನು ಕರೆದು ಲಕ್ಷ್ಮಿಯೊಡಗೂಡಿ ಉತ್ತಮವಾದ ಗಾನವನು ಕೇಳಿದನು.

೧೬. ಯಾವಾಗಲೂ ನಿತ್ಯವಾದ ಸ್ಥಾನವುಳ್ಳ ಬ್ರಹ್ಮಾದಿ ದೇವತೆಗಳೂ ಕೂಡ ಪಡೆಯಲು ಅಸಾಧ್ಯವಾದ ನಾರಾಯಣನ ಸಾಮೀಪ್ಯವನ್ನು ವಿಷ್ಣುವಿನ ಭಜನೆಯನ್ನು ಮಾಡಿ ಕೌಶಿಕಾದಿಗಳು ಪಡೆದರು.

೧೭. ಈ ರೀತಿಯಾಗಿ ಭಜನೆಯಿಂದ ವಿಷ್ಣುವನ್ನು ಸಂತೋಷಗೊಳಿಸಿ ಗಾಣಪತ್ಯವನ್ನು ಹೊಂದಿದರು. ಆದರಿಂದಲೇ ಬಹಳ ಚಿಂತೆಯಿಂದ ಕೂಡಿದ ಮನಸ್ಸುಳ್ಳವನಾಗಿ ನಾನೂ ತಪಸ್ಸುಮಾಡಲು ಇಲ್ಲಿಗೆ ಬಂದೆನು.

ಯದ್ದತ್ತಂ ಯದ್ಧುತಂ ಚೈವ ಯಥಾ ವಾ ಶ್ರುತಮೇವಚ ।
ಯದಧೀತಂ ಮಯಾ ಸರ್ವಂ ಕಲಾಂ ನಾರ್ಹತಿ ಷೋಡಶೀಂ ॥

ವಿಷ್ಣೋರ್ಮಾಹಾತ್ಮ್ಯಯುಕ್ತಸ್ಯ ಗಾನಯೋಗಸ್ಯ ವೈ ತತಃ ।
ಸಂಚಿಂತ್ಯಾಹಂ ತಪೋ ಘೋರಂ ತದರ್ಥಂ ತಪ್ತವಾನ್ ದ್ವಿಜಃ ॥

ದಿವ್ಯವರ್ಷ ಸಹಸ್ರಂ ವೈ ತತೋ ಹ್ಯಶೃಣವಂ ಪುನಃ ।
ವಾಣೀಮಾಕಾಶ ಸಂಭೂತಾಂ ತ್ವಾಮುದ್ದಿಶ್ಯ ವಿಹಂಗಮ ॥೨೦॥

ಉಲೂಕಂ ಗಚ್ಛ ದೇವರ್ಷೇ ಗಾನಬಂಧುಂ ಮತಿರ್ಯದಿ ।
ಗಾನೇ ಚೇತ್ ವರ್ತತೇ ಬ್ರಹ್ಮನ್ ತತ್ರ ತ್ವಂ ವೇತ್ಸ್ಯಸೇಽಚಿರಾತ್ ॥

ಇತ್ಯಹಂ ಪ್ರೇರಿತಸ್ತೇನ ತ್ವತ್ಸಮೀಪ ಮಿಹಾಗತಃ ।
ಕಿಂಕರಿಷ್ಯಾಮಿ ಶಿಷ್ಯೋಽಹಂ ತವ ಮಾಂ ಪಾಲಯಾಧ್ಯಯ ॥೨೨॥

---

೧೮. ನಾನು ದಾನಮಾಡಿದ್ದಾಗಲೀ, ಯಾಗಮಾಡಿದ್ದಾಗಲೀ, ನನ್ನ ಅಧ್ಯಾಯನಾಧ್ಯಾಪನಾದಿಗಳಾಗಲೀ. ಯಾವುದೂ ಇದರ ಹದಿನಾರರಲ್ಲಿ ಒಂದುಭಾಗಕ್ಕೂ ಸಮನಾಗಲಾರದು.

೧೯. ಎಲೈ ಪಕ್ಷಿಶ್ರೇಷ್ಠನೇ, ವಿಷ್ಣುವಿನ ಮಹಿಮೆಯಿಂದ ಕೂಡಿದ ಸಂಗೀತಕ್ಕೆ ಸಮನಾದದ್ದು ಇನ್ನೊಂದಿಲ್ಲ. ಹೀಗೆ ಯೋಚಿಸಿಯೇ ನಾನು ಉಗ್ರವಾದ ತಪಸ್ಸನ್ನು ಮಾಡಿದೆನು.

೨೦. ಎಲೈ ಪಕ್ಷಿಯೇ, ಒಂದುಸಾವಿರ ದೇವವರ್ಷಗಳು ಕಳೆದುವು. ಆಮೇಲೆ ನಿನ್ನ ವಿಚಾರದ ಆಕಾಶವಾಣಿಯನ್ನು ಹೀಗೆ ಕೇಳಿದೆನು.

೨೧. ದೇವರ್ಷಿಯಾದನಾರದನೇ, ನೀನು ಸಂಗೀತವನ್ನು ಕಲಿಯಲಪೇಕ್ಷಿಸುವುದಾದರೆ ಗಾನಬಂಧುವಾದ ಉಲೂಕನಲ್ಲಿಗೆ ಹೋಗು. ಅಲ್ಲಿ ಬೇಗ ನೀನು ಕಲಿಯುವವನಾಗುತ್ತೀಯೆ. ಎಂದು ಕೇಳಿದೆನು.

೨೨. ಹೀಗೆಂದು ಕೇಳಿ ನಾನು ನಿನ್ನಹತ್ತಿರಕ್ಕೆ ಬಂದಿದ್ದೇನೆ ನಾನು ನಿನ್ನ ಶಿಷ್ಯನು. ನಾನು ಏನನ್ನು ಮಾಡಬೇಕೆಂಬುದನ್ನು ಹೇಳಿ ನನ್ನನ್ನು ರಕ್ಷಿಸುವವನಾಗು.

|| ಗಾನಬಂಧುರುವಾಚ ||

ಶೃಣು ನಾರದ ಯದ್ವೃತ್ತಂ ಪುರಾ ಮಮ ಮಹಾಮತೇ ।
ಅತ್ಯಾಶ್ಚರ್ಯಸಮಾಯುಕ್ತಂ ಸರ್ವಪಾಪಹರಂ ಶುಭಂ ||೨೩||

ಭುವನೇಶ ಇತಿಖ್ಯಾತೋ ರಾಜಾಽಭೂದ್ಧಾರ್ಮಿಕಃ ಪುರಾ ।
ಅಶ್ವಮೇಧಸಹಸ್ರೈಶ್ಚ ವಾಜಪೇಯಾ ಯುತೇನ ಚ ||೨೪||

ಗವಾಂ ಕೋಟ್ಯೈರ್ಬುದೇ ಶ್ಚೈವ ಸುವರ್ಣಸ್ಯ ತಥೈವ ಚ ।
ವಾಸಸಾಂ ರಥಹಸ್ತೀನಾಂ ಕನ್ಯಾಶ್ವಾನಾಂ ತಥೈವ ಚ ||೨೫||

ದತ್ವಾ ಸ ರಾಜಾ ವಿಪ್ರೇಭ್ಯೋ ಮೇದಿನೀಂ ಪ್ರತಿಪಾಲಯನ್ ।
ನಿವಾರಯನ್ ಸ್ವಕೇ ರಾಜ್ಯೇ ಗೇಯಯೋಗೇನ ಕೇಶವಂ ||೨೬||

---

೨೩. ನಾರದನ ಮಾತನ್ನು ಕೇಳಿ ಗಾನಬಂಧುವು ಹೀಗೆ ಹೇಳಿದನು. ಎಲೈ ಪ್ರಜ್ಞಾವಂತನಾದ ನಾರದನೇ, ಹಿಂದಿನ ಬಹಳ ಆಶ್ಚರ್ಯಕರವಾದ ಮತ್ತು ಸರ್ವಪಾಪಗಳನ್ನೂ ಪರಿಹರಿಸುವ ನನ್ನ ಕಥೆಯನ್ನು ಕೇಳುವವನಾಗು

೨೪. ಹಿಂದೆ ಪರಮಧಾರ್ಮಿಕನಾದ ಭುವನೇಶನೆಂಬ ರಾಜನಿದ್ದನು. ಅವನು ಸಹಸ್ರ ಅಶ್ವಮೇಧವನ್ನೂ, ಅಯುತ ಸಂಖ್ಯೆಯ ಹತ್ತುಸಾವಿರ ವಾಜಪೇಯ ಯಾಗಗಳನ್ನೂ ಮಾಡಿದ್ದನು.

೨೫. ಅವನು ಕೋಟ್ಯಾಂತರ ಹಸುಗಳನ್ನೂ, ಚಿನ್ನ, ಬಟ್ಟೆ, ರಥ, ಆನೆ, ಕುದುರೆ, ಮೊದಲಾದುವುಗಳನ್ನೂ, ಬ್ರಾಹ್ಮಣರಿಗೆ ದಾನಮಾಡಿ ಭೂಮಿಯನ್ನು ಆಳುತ್ತಿದ್ದನು.

೨೬–೨೭. ಈ ರೀತಿಯಲ್ಲಿ ಆಳುತ್ತಾ ತನ್ನ ರಾಜ್ಯದಲ್ಲಿ ಒಂದು ಆಜ್ಞೆ ಮಾಡಿದ್ದನು. ಏನೆಂದರೆ, ಯಾವನೇ ಆಗಲೀ ಕೇಶವನನ್ನಾಗಲೀ ಅಥವಾ ಇತರ ಯಾವ ದೇವತೆಗಳನ್ನಾಗಲೀ ಭಜಿಸಿ ಗಾನದಿಂದ ಹಾಡಿದ್ದೇ ಆದರೆ

ಅನ್ಯಂ ವಾ ಗೇಯಯೋಗೇನ ಗಾಯನ್ ಯದಿ ಸ ಮೇ ಭವೇತ್ ।
ವಧ್ಯಃ ಸರ್ವಾತ್ಮನಾ ತಸ್ಮಾದ್ವೇದೈರೀಡ್ಯಃ ಪರಃ ಪುಮಾನ್ ॥೨೭॥
ಗಾನಯೋಗೇನ ಸರ್ವತ್ರ ಸ್ತ್ರೀಯೋ ಗಾಯಂತು ನಿತ್ಯಶಃ ।
ಸೂತಮಾಗಧ ಸಂಘಾಶ್ಚ ಗೀತಂ ತೇ ಕಾರಯಂತು ವೈ ॥೨೮॥
ಇತ್ಯಾಜ್ಞಾಪ್ಯ ಮಹಾತೇಜಾ ರಾಜ್ಯಂ ವೈ ಪರ್ಯಪಾಲಯತ್ ।
ಸತ್ಯರಾಜ್ಞಃ ಪುರಾಭ್ಯಾಶೇ ಹರಿಮಿತ್ರ ಇತಿ ಶ್ರುತಃ ॥೨೯॥
ಬ್ರಾಹ್ಮಣೋ ವಿಷ್ಣುಭಕ್ತಶ್ಚ ಸರ್ವದ್ವಂದ್ವವಿವರ್ಜಿತಃ ।
ನದೀ ಪುಲಿನ ಮಾಸಾದ್ಯಪ್ರತಿಮಾಂ ಚ ಹರೇಃ ಶುಭಾಂ ॥೩೦॥
ಅಭ್ಯರ್ಚ್ಯ ಚ ಯಥಾನ್ಯಾಯಂ ಘೃತದಧ್ಯುತ್ತರಂ ಬಹು ।
ಮಿಷ್ಟಾನ್ನಂ ಪಾಯಸಂ ದತ್ವಾ ಹರೇರಾವೇದ್ಯ ಪೂಪಕಂ ॥೩೧॥

---

ಅವನು ಕೊಲ್ಲಲ್ಪಡುತ್ತಾನೆ. ಆದುದರಿಂದ ಯಾವಾಗಲೂ ಸರ್ವೇಶ್ವರನನ್ನು ವೇದಗಳಿಂದಲೇ ಸ್ತುತಿಸಬೇಕು.

೨೮. ಸಂಗೀತದಿಂದ ವೇದಾನಧಿಕಾರಿಗಳಾದ ಸ್ತ್ರೀಯರು ಮಾತ್ರ ನಿತ್ಯದಲ್ಲೂ ಹಾಡಲಿ. ಸೂತಮಾಗಧರೇ ಮೊದಲಾದವರೂ, ವಂದಿಗಳು ಗೀತವನ್ನು ಹಾಡಲಿ. ಮತ್ತೆ ಯಾರೂ ಹಾಡ ಕೂಡದು ಎಂದು ಆಜ್ಞಾಪಿಸಿ ರಾಜ್ಯವನ್ನು ಆಳುತ್ತಿದ್ದನು.

೨೯. ಆರಾಜನ ಪಟ್ಟಣದ ಸಮೀಪದಲ್ಲಿ ಹರಿಮಿತ್ರನೆಂಬ ವಿಷ್ಣು ಭಕ್ತನಾದ ಬ್ರಾಹ್ಮಣನು ಎಲ್ಲಾ ಮೋಹ ಮಾತ್ಸರ್ಯಗಳೆಂಬ ದೋಷಗಳ ಸಂಗವನ್ನೂ ಬಿಟ್ಟವನಾಗಿ ಇರುತ್ತಿದ್ದನು.

೩೦–೩೨. ಆ ಬ್ರಾಹ್ಮಣನು ನದೀತೀರಕ್ಕೆ ಹೋಗಿ ಅಲ್ಲಿ ವಿಷ್ಣುವಿನ ಒಳ್ಳೆಯ ಪ್ರತಿಮೆಯನ್ನಿಟ್ಟು ಅನೇಕ ವಿಧವಾದ ಪೂಜೆಯ ಸಾಮಾನುಗಳಿಂದ ಪೂಜಿಸುತ್ತಿದ್ದನು. ಅನಂತರದಲ್ಲಿ ಅದಕ್ಕೆ ಮೃಷ್ಟಾನ್ನ ಮತ್ತು ಪಾಯಸಗಳನ್ನೂ, ಭಕ್ಷ್ಯವನ್ನೂ, ನೈವೇದ್ಯಮಾಡಿ, ಅದರಲ್ಲೇ ನೆಟ್ಟ ಮನಸ್ಸುಳ್ಳವನಾಗಿ ನಮಸ್ಕರಿಸುತ್ತಿದ್ದನು. ಇದಾದ ಮೇಲೆ ಬಹಳ

ಪ್ರಣಿಪತ್ಯ ಯಥಾನ್ಯಾಯಂ ತತ್ರ ವಿನ್ಯಸ್ತಮಾನಸಃ ।
ಅಗಾಯತ ಹರಿಂ ತತ್ರ ತಾಲವರ್ಣ ಲಯಾನ್ವಿತಂ ॥೩೨॥
ಅತೀವ ಸ್ನೇಹಸಂಯುಕ್ತಃ ತದ್ಗತೇನಾಂತರಾತ್ಮನಾ ।
ತತೋ ರಾಜ್ಞಃ ಸಮಾದೇಶಾತ್ ಚರಾಸ್ತತ್ರ ಸಮಾಗತಾಃ ॥೩೩॥
ತದರ್ಚನಾದಿ ಸಕಲಂ ನಿಧೂಯ ಚ ಸಮಂತತಃ ।
ಬ್ರಾಹ್ಮಣಂ ತಂ ಗೃಹೀತ್ವಾ ತೇ ರಾಜ್ಞೇ ಸಮ್ಯಕ್ ನ್ಯವೇದಯನ್ ॥
ತತೋ ರಾಜಾ ದ್ವಿಜಶ್ರೇಷ್ಠಂ ಪರಿಭರ್ತ್ಸ್ಯ ಸುದುರ್ಮತಿಃ ।
ರಾಜ್ಯಾತ್ ನಿರ್ಯಾತಯಾಮಾಸ ಹೃತ್ವಾ ಸರ್ವಂ ಧನಾಧಿಕಂ ॥೩೫॥
ಪ್ರತಿಮಾಂ ಚ ಹರೇಶ್ಚೈವ ಮ್ಲೇಚ್ಛಾ ಹೃತ್ವಾ ಯಯುಃ ಪುನಃ ।
ತತಃ ಕಾಲೇನ ಮಹತಾ ಕಾಲಧರ್ಮಮುಪೇಯಿವಾನ್ ॥೩೬॥

---

ಪ್ರೀತಿಯಿಂದ ಅದರಲ್ಲೇ ಇಟ್ಟ ಬುದ್ಧಿಯುಳ್ಳವನಾಗಿ ತಾಳಸ್ವರಲಯಗಳಿಂದ ಕೂಡಿದ ಸಂಗೀತದಿಂದ ವಿಷ್ಣುವಿನ ಭಜನೆಯನ್ನು ಮಾಡುತ್ತಿದ್ದನು.

೩೩–೩೪. ಹೀಗೆ ಮಾಡುತ್ತಿರಲು ಒಂದುಸಾರಿ ರಾಜನ ದೂತರು ರಾಜನ ಅಪ್ಪಣೆಯಂತೆ ಅಲ್ಲಿಗೂ ಬಂದರು. ಅಲ್ಲಿದ್ದ ಪೂಜೆಯಸಾಮಗ್ರಿಯನ್ನೂ ಚೆಲ್ಲಾಡಿ ಆ ಬ್ರಾಹ್ಮಣನನ್ನು ಹಿಡಿದು ರಾಜನ ಮುಂದೆ ನಿಲ್ಲಿಸಿ ಎಲ್ಲಾ ವಿಚಾರವನ್ನೂ ಬಿನ್ನವಿಸಿದರು.

೩೫. ಕೆಟ್ಟಬುದ್ಧಿಯುಳ್ಳ ಆ ರಾಜನು ಆ ಬ್ರಾಹ್ಮಣ ಶ್ರೇಷ್ಠನನ್ನು ಚೆನ್ನಾಗಿ ಬೈದು, ಅವನ ಧನಗಳನ್ನೆಲ್ಲವನ್ನೂ ಅಪಹರಿಸಿದನು. ಮತ್ತು ತನ್ನ ರಾಜ್ಯದಿಂದಲೂ ಅವನನ್ನು ಹೊರ ಹೊರಡಿಸಿದನು.

ಅವನು ಪೂಜಿಸುತ್ತಿದ್ದ ವಿಷ್ಣುವಿನ ಪ್ರತಿಮೆಯನ್ನು ಮ್ಲೇಚ್ಛರು ತೆಗೆದುಕೊಂಡು ಹೋದರು.

೩೬. ಕೆಲವು ಕಾಲವು ಕಳೆದ ಮೇಲೆ ಎಲ್ಲಾ ಲೋಕಗಳಲ್ಲೂ ಪೂಜಿಸಲ್ಪಡುತ್ತಿದ್ದ ಆ ರಾಜನು ಕಾಲಧರ್ಮ (ಮರಣ) ವನ್ನು ಹೊಂದಿದನು.

ಸ ರಾಜಾ ಸರ್ವಲೋಕೇಷು ಪೂಜ್ಯಮಾನಃ ಸಮಂತತಃ ।
ಕ್ಷುಧಾಽರ್ತಶ್ಚ ತಥಾ ಖಿನ್ನೋ ಯಮಮಾಹ ಸು ದುಃಖಿತಃ ॥
ಕ್ಷುತ್ತೃಟ್ ಚ ವರ್ತತೇ ದೇವ ಸ್ವರ್ಗತಸ್ಯಾಪಿ ಮೇ ಸದಾ ।
ಮಯಾ ಪಾಪಂ ಕೃತಂ ಕಿಂ ವಾ ಕಿಂ ಕರಿಷ್ಯಾಮಿ ವೈ ಯಮ ॥೩೮॥

॥ ಯಮ ಉವಾಚ ॥

ತ್ವಯಾ ಹಿ ಸುಮಹತ್ಪಾಪಂ ಕೃತಮಜ್ಞಾನಮೋಹತಃ ।
ಹರಿಮಿತ್ರಂ ಪ್ರತಿ ತದಾ ವಾಸುದೇವಪರಾಯಣಂ ॥೩೯॥
ಹರಿಮಿತ್ರೇ ಕೃತಂ ಪಾಪಂ ವಾಸುದೇವಾರ್ಚನಾದಿಷು ।
ತೇನ ಪಾಪೇನ ಸಂಪ್ರಾಪ್ತಃ ಕ್ಷುದ್ರೋಗಸ್ತ್ವಾಂ ಸದಾ ನೃಪ ॥

---

೩೭–೩೮. ಪರಲೋಕವನ್ನು ಹೊಂದಿದ ಆ ರಾಜನು ಹಸಿವಿನಿಂದ ಬಳಲಿದವನಾಗಿ ಬಹಳ ಸಂಕಟದಿಂದ ಯಮನನ್ನು ಕುರಿತು, ಎಲೈ ಯಮನೇ, ನನ್ನನ್ನು ಹಸಿವೂ, ಬಾಯಾರಿಕೆಯೂ ಬಾಧಿಸುತ್ತಿವೆ. ಸ್ವರ್ಗದಲ್ಲಿರುವ ನನಗೆ ಹೀಗಾಗಲು ಕಾರಣವೇನು? ನಾನೇನು ಪಾಪಮಾಡಿದೆನು? ಈಗ ಇದನ್ನು ಹೋಗಲಾಡಿಸಿ ಕೊಳ್ಳಲು ಏನನ್ನುಮಾಡಲಿ? ಎಂದು ಕೇಳಿದನು.

೩೯. ಯಮನು ಹೇಳಿದನು.—ಎಲೌ ರಾಜನೇ, ನೀನು ವಿಷ್ಣುಭಕ್ತನಾದ ಹರಿಮಿತ್ರನಿಗೆ ಅಜ್ಞಾನದಿಂದ ಅಂಧನಾಗಿ ಬಹಳವಾದ ತೊಂದರೆಯನ್ನು ಕೊಟ್ಟಿ ಯಾದುದರಿಂದ ನೀನು ಮಹಾಪಾಪವನ್ನು ಮಾಡಿದವನಾಗಿರುವೆ.

೪೦. ವಾಸುದೇವನ ಪೂಜಾದಿಗಳನ್ನು ಮಾಡುವುದರಲ್ಲಿ ನೀನು ಹರಿಮಿತ್ರನಿಗೆ ತೊಂದರೆಕೊಟ್ಟು ಪಾಪಿಯಾಗಿರುವೆ. ಆ ಪಾಪದಿಂದ ಎಲೌ ರಾಜನೇ, ನಿನಗೆ ಹೊಟ್ಟೆ ಹಸಿವೆಂಬರೋಗ ಪ್ರಾಪ್ತಿಯಾಯಿತು.

ಎಲೈ ರಾಜನೇ, ಆದಕಾರಣ ನೀನು ಮಾಡಿದ ದಾನಗಳೂ, ಯಜ್ಞವೇ ಮೊದಲಾದ ಕರ್ಮಗಳೂ, ಸಕಲವೂ ಕೂಡ ನಷ್ಟವಾಯಿತು.

ದಾನಯಜ್ಞಾದಿಕಂ ಸರ್ವಂ ಪ್ರನಷ್ಟಂ ತೇ ನರಾಧಿಪ ।
ಗೀತವಾದ್ಯಸಮೋಪೇತಂ ಗಾಯಮಾನಂ ಮಹಾಮತಿಂ ॥೪೧॥

ಹರಿಮಿತ್ರಂ ಸಮಾಹೂಯ ಹೃತವಾನಸಿ ತದ್ಧನಂ ।
ಉಪಹಾರಾದಿಕಂ ಸರ್ವಂ ವಾಸುದೇವಸ್ಯ ಸನ್ನಿಧೌ ॥೪೨॥

ತವ ಭೃತ್ಯೈಸ್ತದಾ ಲುಪ್ತಂ ಪಾಪಂ ಚಕ್ರುಸ್ತ್ವದಾಜ್ಞಯಾ ।
ಹರೇಃ ಕೀರ್ತಿಂ ವಿನಾ ಚಾನ್ಯ ದ್ಬ್ರಾಹ್ಮಣೇನ ನೃಪೋತ್ತಮ ॥೪೩॥

ನ ಗೇಯಂಯೋಗೇ ಗಾತವ್ಯಂ ತಸ್ಮಾತ್ ಪಾಪಂ ಕೃತಂ ತ್ವಯಾ ।
ನಷ್ಟಸ್ತೇ ಸರ್ವಲೋಕೋಽದ್ಯ ಗಚ್ಛ ಪರ್ವತಕೋಟರಂ ॥೪೪॥

ಪೂರ್ವೋತ್ಸೃಷ್ಟಂ ಸ್ವದೇಹಂ ತಂ ಖಾದನ್ನಿತ್ಯಂ ನಿಕೃತ್ಯ ವೈ ।
ತಸ್ಮಿನ್ಕೋಣೇ ತ್ವಿಮಂ ದೇಹಂ ಖಾದನ್ನಿತ್ಯಂ ಕ್ಷುಧಾಽನ್ವಿತಃ ॥೪೫॥

---

೪೧. ಸಂಗೀತದಿಂದಲೂ, ವಾದ್ಯದಿಂದಲೂ ಕೂಡಿ ದೇವಸ್ತೋತ್ರವನ್ನು ಮಾಡುತ್ತಿದ್ದ ಮಹಾ ಬುದ್ಧಿಶಾಲಿಯಾದ ಹರಿಮಿತ್ರನನ್ನು ಕರೆಸಿ ಅವನ ಸಕಲ ಹಣಗಳನ್ನೂ ಅಪಹರಿಸಿರುತ್ತೀಯೆ.

೪೨. ನಿನ್ನ ಅಪ್ಪಣೆಯಪ್ರಕಾರ ನಿನ್ನ ಸೇವಕರು ಪರಮಾತ್ಮನ ಸನ್ನಿಧಿಯಲ್ಲಿಯೇ ಪೂಜೋಪಕರಣಗಳನ್ನೆಲ್ಲವನ್ನೂ ನಾಶಪಡಿಸಿದರು.

೪೩-೪೪. ಎಲೈ ರಾಜನೇ, ಬ್ರಾಹ್ಮಣನಾದವನು ಹರಿಕೀರ್ತನೆ ಹೊರತಾಗಿ ಬೇರೆಯದನ್ನು ಹಾಡಬಾರದು. ಎಂದೂ ವಿಧಿಸಿದೆ ಈ ಎಲ್ಲ ಕಾರಣದಿಂದಲೂ ನೀನು ಪಾಪವನ್ನು ಮಾಡಿರುತ್ತೀಯೆ. ಆದಕಾರಣ ನೀನು ಪುಣ್ಯ ಕರ್ಮಗಳಿಂದ ಸಂಪಾದಿಸಿದ ಸಕಲ ಸೌಖ್ಯದ ಲೋಕಗಳೂ ಕೂಡ ನಷ್ಟವಾಗಿರುತ್ತವೆ. ಈಗಲೇ ಪರ್ವತಕೋಟರಕ್ಕೆ ಹೋಗುವವನಾಗು.

೪೫. ಆ ಪ್ರದೇಶದಲ್ಲಿ ಪೂರ್ವದಲ್ಲಿ ನೀನು ತ್ಯಜಿಸಿರತಕ್ಕ ನಿನ್ನ ದೇಹವನ್ನು ನೀನೇ ಹಸಿವಿನಿಂದ ಪೀಡಿತನಾಗಿ ಪ್ರತಿದಿನವೂ ತಿನ್ನುತ್ತಾ ಒಂದು ಮನ್ವಂತರ ಪರ್ಯಂತವಾಗಿ ಮಹಾನರಕದಲ್ಲಿ ವಾಸಿಸುವನಾಗು.

ಮಹಾನಿರಯ ಸಂಸ್ಥಸ್ತ್ವಂ ಯಾವನ್ಮನ್ವಂತರಂ ಭವೇತ್ ।
ಮನ್ವಂತರೇ ತತೋಽತೀತೇ ಭೂಮ್ಯಾಂ ತ್ವಂ ಚ ಭವಿಷ್ಯಸಿ ॥೪೬॥

॥ ಗಾನಬಂಧು ರುವಾಚ ॥

ತತಃ ಕಾಲೇನ ಸಂಪ್ರಾಪ್ಯ ಮಾನುಷ್ಯ ಮವಗಚ್ಛಸಿ ।
ಏವಮುಕ್ತ್ವಾ ಯಮೋ ವಿದ್ವಾಂಸ್ತತ್ರೈವಾಂತರಧೀಯತ ॥೪೭॥

ಹರಿಮಿತ್ರೋ ವಿಮಾನೇನ ಸ್ತೂಯಮಾನೋ ಗಣಾಧಿಪೈಃ ।
ವಿಷ್ಣುಲೋಕಂ ಗತಃ ಶ್ರೀಮಾನ್ ಸಂಗೃಹ್ಯ ಗಣಬಾಂಧವಾನ್ ॥

ಭುವನೇಶೋ ನೃಪೋ ಹ್ಯಸ್ಮಿನ್ ಕೋಟರೇ ಪರ್ವತಸ್ಯ ವೈ ।
ಖಾದಮಾನಃ ಶವಂ ನಿತ್ಯಮಾಸ್ತೇ ಕ್ಷುತ್ತೃಟ್ಸಮನ್ವಿತಃ ॥೪೯॥

ಅದ್ರಾಕ್ಷಂ ತಂ ನೃಪಂ ತತ್ರ ಸರ್ವಮೇತನ್ಮಮೋಕ್ತವಾನ್ ।
ಸಮಾಲೋಕ್ಯಾಹ ಮಾಜ್ಞಾಯ ಹರಿಮಿತ್ರಂ ಸಮೇಯಿವಾನ್ ॥

---

೪೬. ಮನ್ವಂತರವು ಕಳೆದ ಅನಂತರದಲ್ಲಿ ನೀನು ಭೂಮಿಯಲ್ಲಿ ಹುಟ್ಟುತ್ತೀಯೆ. ತರುವಾಯ ಕಾಲಾನುಗುಣವಾಗಿ ಮನುಷ್ಯ ಸಂಬಂಧವಾದ ಜ್ಞಾನವನ್ನು ಪಡೆಯುವೆ.

೪೭. ಗಾನಬಂಧುವು ಹೇಳಿದನು.—ಈರೀತಿಯಾಗಿ ಯಮನು ಹೇಳಿ ಅಲ್ಲೇ ಅಂತರ್ಧಾನವನ್ನೈದನು.

೪೮. ಅನಂತರದಲ್ಲಿ ಗಣ ಪ್ರಮುಖರಿಂದ ಹೊಗಳಲ್ಪಡುವವನಾಗಿ ಹರಿಮಿತ್ರನು ಆ ಗಣಪ್ರಮುಖರಿಂದ ಕೂಡಿ ವಿಮಾನದಿಂದ ವಿಷ್ಣುಲೋಕಕ್ಕೆ ಹೋದನು.

೪೯. ಈ ಪರ್ವತ ಕೋಟರದಲ್ಲಿ ಆ ರಾಜನು ಪ್ರತಿದಿನವೂ ಶವವನ್ನು ಕಿತ್ತು ತಿನ್ನುತ್ತಾ ಹಸಿವು ಬಾಯಾರಿಕೆಗಳಿಂದ ಕೂಡಿದ್ದನು.

೫೦. ರಾಜನನ್ನು ಅವನಿದ್ದಸ್ಥಳದಲ್ಲಿ ನೋಡಿದ್ದೆನು. ಈ ಎಲ್ಲವನ್ನೂ ನನಗೆ ಅವನು ಹೇಳಿದನು. ಅನಂತರದಲ್ಲಿ ನಾನು ಹರಿಮಿತ್ರನನ್ನು ಕಂಡು ಅವನ ಅಪ್ಪಣೆಯನ್ನು ಪಡೆಯಲು ಅವನಲ್ಲಿಗೆ ಹೋದೆನು.

ವಿಮಾನೇನಾರ್ಕವರ್ಣೇನ ಗಚ್ಛಂತಮಮರೈರ್ವೃತಂ ।
ಇಂದ್ರದ್ಯುಮ್ನ ಪ್ರಸಾದೇನ ಪ್ರಾಪ್ತಂ ಮೇ ಹ್ಯಾಯುರುತ್ತಮಂ ॥

ತೇನಾಹಂ ಹರಿಮಿತ್ರಂ ವೈ ದೃಷ್ಟವಾನಸ್ಮಿ ಸುವ್ರತ ।
ತದೈಶ್ವರ್ಯಪ್ರಭಾವೇನ ಮನೋ ಮೇ ಸಮುಪಾಗತಂ ॥೫೨॥

ಗಾನವಿದ್ಯಾಂ ಪ್ರತಿ ತದಾ ಕಿನ್ನರೈಸ್ಸಮುಪಾವಿಶಂ ।
ಷಷ್ಟಿಂ ವರ್ಷಸಹಸ್ರಾಣಾಂ ಗಾನಯೋಗೇನ ಮೇ ಮುನೇ ॥೫೩॥

ಜಿಹ್ವಾಪ್ರಸಾದಿತಾ ಸ್ಪಷ್ಟಾ ತತೋ ಗಾನಮಶಿಕ್ಷಯಂ ।
ತತಸ್ತದ್ವಿಗುಣೇನೈವ ಕಾಲೇನಾಭೂದಿಯಂ ಮಮ ॥೫೪॥

ಗಾನಯೋಗ ಸಮಾಯುಕ್ತಾ ಗತಾ ಮನ್ವಂತರಾ ದಶ ।
ಗಾನಾಚಾರ್ಯೋಽಭವಂ ತತ್ರ ಗಂಧರ್ವಾದ್ಯಾಃಸಮಾಗತಾಃ ॥೫೫॥

---

೫೧. ಎಲೈ ಶ್ರೇಷ್ಠನಾದ ವ್ರತಶಾಲಿಯೇ, ನಾನು ಇಂದ್ರದ್ಯುಮ್ನನ ಪ್ರಸಾದ ಬಲದಿಂದ ಉತ್ತಮಾಯುವಾಗಿದ್ದೆನು. ಅದರಿಂದ ಸುರರಿಂದ ಕೂಡಿ ಸೂರ್ಯನಂತೆ ಬಣ್ಣಉಳ್ಳ ವಿಮಾನದಲ್ಲಿ ಹೋಗುತ್ತಿದ್ದ ಹರಿಮಿತ್ರನನ್ನು ನೋಡಿದೆನು.

೫೨–೫೩. ಆ ಹರಿಮಿತ್ರನ ಐಶ್ವರ್ಯವನ್ನು ನೋಡಿ ನಾನೂಕೂಡ ಗಾನವಿದ್ಯೆಯನ್ನು ಕಲಿಯಬೇಕೆಂದು ಇಚ್ಛಿಸಿದೆನು. ಆಗ ಕಿನ್ನರರಿಂದ ಅರವತ್ತು ಸಹಸ್ರವರ್ಷಗಳು ಬಹಳ ಪ್ರಯಾಸ ಪೂರ್ವಕವಾಗಿ ಗಾನ ವಿದ್ಯೆಯು ನನಗೆ ಕಲಿಸಲ್ಪಟ್ಟಿತು.

೫೪. ಅದಕ್ಕಿಂತಲೂ ಅರವತ್ತುಸಾವಿರದ ಎರಡರಷ್ಟು ಕಾಲ ನನ್ನ ನಾಲಿಗೆಯು ಗಾನವಿದ್ಯೆಯಿಂದ ಕೂಡಿತ್ತು. ಹಾಗೆ ನಾನು ಗಾನಮಾಡುತ್ತಾ ಇರಲು ಹತ್ತು ಮನ್ವಂತರಗಳು ಕಳೆದುವು.

೫೫. ಆಗ ನಾನು ಗಾನಾಚಾರ್ಯನೇ ಆದೆನು. ಗಂಧರ್ವರೇ ಮೊದಲಾದವರು ಗಾನವನ್ನು ಕಲಿಯಲು ನನ್ನಲ್ಲಿಗೆ ಬಂದರು.

ಏತೇ ಕಿನ್ನರ ಸಂಘಾ ವೈ ಮಾಮಾಚಾರ್ಯಮುಪಾಗತಾಃ ।
ತಪಸಾ ನೈವ ಶಕ್ಯಾ ವೈ ಗಾನವಿದ್ಯಾ ತಪೋಧನ ॥೫೬॥
ತಸ್ಮಾಚ್ಛ್ರುತೇನ ಸಂಯುಕ್ತೋ ಮತ್ತಸ್ತ್ವಂ ಗಾನಮಾಪ್ನುಹಿ ।
ಏವಮುಕ್ತೋ ಮುನಿಸ್ತಂ ವೈ ಪ್ರಣಿಪತ್ಯ ಜಗೌ ತದಾ ॥೫೭॥
ತಚ್ಛೃಣುಷ್ವ ಮುನಿಶ್ರೇಷ್ಠ ವಾಸುದೇವಂ ನಮಸ್ಯತು ।

॥ ಮಾರ್ಕಂಡೇಯ ಉವಾಚ ॥

ಉಲೂಕೇನೈವಮುಕ್ತಸ್ತು ನಾರದೋ ಮುನಿಸತ್ತಮಃ ॥೫೮॥
ಶಿಕ್ಷಾಕ್ರಮೇಣ ಸಂಯುಕ್ತಸ್ತತ್ರ ಗಾನ ಮಶಿಕ್ಷಯತ್ ।
ಗಾನಬಂಧುಸ್ತದಾಽಽಹೇದಂ ತ್ಯಕ್ತಲಜ್ಜೋ ಭವಾಧುನಾ ॥೫೯॥

---

ಅನಂತರದಲ್ಲಿ ಆಚಾರ್ಯನಾದ ನನ್ನಲ್ಲಿಗೆ ಈ ಕಿನ್ನರರ ಸಮೂಹವೂ ಕೂಡ ಗಾನ ವಿದ್ಯೆಯನ್ನು ಕಲಿಯಲು ಬಂದಿತು.

೫೬. ಎಲೈ ತಪಸ್ಸೇ ಐಶ್ವರ್ಯವಾಗಿಉಳ್ಳ ನಾರದನೇ, ಗಾನವಿದ್ಯೆಯು ತಪಸ್ಸಿನಿಂದ ಹೊಂದಲಸಾಧ್ಯವಾದುದು. ಆದುದರಿಂದ ಶಾಸ್ತ್ರಪೂರ್ವಕ ವಾಗಿ ನನ್ನಿಂದ ಗಾನ ವಿದ್ಯೆಯನ್ನು ಹೊಂದುವವನಾಗು.

೫೭. ಎಲೈ ಋಷಿಗಳಲ್ಲಿ ಶ್ರೇಷ್ಠನೇ, ವಾಸುದೇವನನ್ನು ನಮಸ್ಕರಿಸಿ ಕೇಳುವವನಾಗು. ಹೀಗೆಂದು ಹೇಳಲ್ಪಟ್ಟ ಆ ಋಷಿಯು ಅವನನ್ನು ನಮಸ್ಕರಿಸಿ ಹೊರಟುಹೋದನು.

೫೮. ಮಾರ್ಕಂಡೇಯನು ಹೇಳಿದನು :—ಮುನಿಶ್ರೇಷ್ಠನಾದ ನಾರದನಿಗೆ ಈ ಪ್ರಕಾರವಾಗಿ ಉಲೂಕನು ಹೇಳಿ ಅನಂತರದಲ್ಲಿ ಶಿಕ್ಷಾಕ್ರಮ ದಿಂದ ಗಾನ ವಿದ್ಯೆಯನ್ನು ಹೇಳಿಕೊಟ್ಟನು.

೫೯. ಅನಂತರದಲ್ಲಿ ಗಾನಬಂಧುವಾದ ಉಲೂಕನು ನಾರದನಿಗೆ ಈಗ ಲಜ್ಜೆಯನ್ನು ಬಿಡುವವನಾಗು ಎಂದು ಹೇಳಿದನು.

॥ ಉಲೂಕ ಉವಾಚ ॥

ಸ್ತ್ರೀಸಂಗಮೇ ತಥಾ ಗೀತೇ ದ್ಯೂತೇ ವ್ಯಾಖ್ಯಾನಸಂಗಮೇ ।
ವ್ಯವಹಾರೇ ತಥಾಽಽಹಾರೇ ತ್ವರ್ಥಾನಾಂ ಚ ಸಮಾಗಮೇ ॥೬೦॥

ಆಯೇ ವ್ಯಯೇ ತಥಾ ನಿತ್ಯಂ ತ್ಯಕ್ತಲಜ್ಜಸ್ತು ವೈ ಭವೇತ್ ।
ನ ಕುಂಚಿತೇನ ಗೂಢೇನ ನಿತ್ಯಂ ಪ್ರಾವರಣಾದಿಭಿಃ ॥೬೧॥

ಹಸ್ತವಿಕ್ಷೇಪ ಭಾವೇನ ವ್ಯಾದಿತಾಸ್ಯೇನ ಚೈವಹಿ ।
ನಿರ್ಯಾತಜಿಹ್ವಾಯೋಗೇನ ನ ಗೇಯಂ ಹಿ ಕಥಂಚನ ॥೬೨॥

ನ ಗಾಯೇದೂರ್ಧ್ವಬಾಹುಶ್ಚ ನೋರ್ಧ್ವದೃಷ್ಟಿಃ ಕಥಂಚನ ।
ಸ್ವಾಂಗಂ ನಿರೀಕ್ಷಮಾಣೇನ ಪರಂ ಸಂಪ್ರೇಕ್ಷತಾ ತಥಾ ॥೬೩॥

ಸಂಘಟ್ಟೇ ಚ ತಥೋತ್ಥಾನೇ ಕಟಿಸ್ಥಾನಂ ನ ಶಸ್ಯತೇ ।
ಹಾಸೋ ರೋಷಸ್ತಥಾ ಕಂಪಸ್ತಥಾಽನ್ಯತ್ರ ಸ್ಮೃತಿಃ ಪುನಃ ॥೬೪॥

---

೬೦. ಸ್ತ್ರೀಸಮಾಗಮದಲ್ಲೂ, ಗಾನಮಾಡುವುದರಲ್ಲೂ, ಜೂಜಿನಲ್ಲಿಯೂ, ವ್ಯಾಖ್ಯಾನ ವಿಷಯದಲ್ಲೂ, ಆಹಾರ ಮತ್ತು ವಿಹಾರಗಳಲ್ಲೂ ಹಣದ ವ್ಯವಹಾರದಲ್ಲಿಯೂ, ಕೂಡ ಯಾವಾಗಲೂ ಲಜ್ಜೆಯನ್ನು ಬಿಟ್ಟು ವ್ಯವಹರಿಸಬೇಕು.

೬೧–೬೩. ಪ್ರತಿನಿತ್ಯವೂ ಆವರಣಗಳಿಂದ ರಹಸ್ಯವಾಗಿ ಸಂಕೋಚದಿಂದಲೂ, ಕೈಯಿಂದ ಮುಚ್ಚಿಕೊಂಡೂ, ದೊಡ್ಡದಾಗಿ ಬಾಯಿಯನ್ನು ತೆಗೆದುಕೊಂಡೂ, ಅರುಚಿಕರವಾಗಿಯೂ, ಮತ್ತು ಮನಸ್ಸಿಗೆ ಬಂದಂತೆಯೂ, ಗಾನಮಾಡಬಾರದು. ಕೈಯನ್ನು ಮೇಲಕ್ಕೆತ್ತಿಕೊಂಡು, ಮೇಲಕ್ಕೆ ನೋಡುತ್ತಲೂ, ಇನ್ನೊಬ್ಬರನ್ನು ನೋಡುತ್ತಲೂ, ಗಾನಮಾಡಬಾರದು.

೬೪. ಸಂಘಟನದಲ್ಲಿಯೂ, ಉತ್ಥಾನದಲ್ಲಿಯೂ, ಕಟಿಸ್ಥಾನದಲ್ಲೂ, ನಗುವುದೂ, ಕೋಪಮಾಡುವುದೂ, ಹಾಗೆಯೇ ನಡುಗುವುದೂ ಮತ್ತು ಬೇರೆಯ ಕಡೆ ಸ್ಮರಣೆಯಿಂದಿರುವುದೂ, ನಿಷೇಧಿಸಲ್ಪಟ್ಟಿದೆ.

ನೈತಾನಿ ಶಸ್ತ್ರರೂಪಾಣಿ ಗಾನಯೋಗೇ ಮಹಾಮತೇ ।
ನೈಕಹಸ್ತೇನ ಶಕ್ಯಂ ಸ್ಯಾತ್ತಾಲಸಂಘಟ್ಟನಂ ಮುನೇ ॥೬೫॥

ಕ್ಷುಧಾಽಽರ್ತೇನ ಭಯಾರ್ತೇನ ತೃಷ್ಣಾಽಽರ್ತೇನ ತಥೈವ ಚ ।
ಗಾನಯೋಗೋ ನ ಕರ್ತವ್ಯೋ ನಾಂಧಕಾರೇ ಕಥಂಚನ ॥೬೬॥

ಏವಮಾದೀನಿ ಚಾನ್ಯಾನಿ ನ ಕರ್ತವ್ಯಾನಿ ಗಾಯತಾ ।

॥ ಮಾರ್ಕಂಡೇಯ ಉವಾಚ ॥

ಏವಮುಕ್ತಸ್ಸ ಭಗವಾಂ ಸ್ತೇನೋಕ್ತೈರ್ವಿಧಿಲಕ್ಷಣೈಃ ॥೬೭॥

ಅಶಿಕ್ಷಯತ್ತಥಾ ಗೀತಂ ದಿವ್ಯಂ ವರ್ಷಸಹಸ್ರಕಂ ।
ತತಃ ಸಮಸ್ತ ಸಂಪನ್ನಃ ಗೀತಪ್ರಸ್ತಾರ ಕಾದಿಷು ॥೬೮॥

---

೬೫. ಮಹಾ ಬುದ್ಧಿಶಾಲಿಯೇ, ಮೇಲೆಹೇಳಿದ ರೂಪಗಳು ಗಾನದಲ್ಲಿ ನಿಂದಿಸಲ್ಪಟ್ಟಿವೆ. ಒಂದೇ ಕೈಯಿಂದ ತಾಳವನ್ನು ಹಾಕುವುದು ಸಾಧ್ಯವಿಲ್ಲವು.

೬೬. ಹಸಿವುಳ್ಳವನಿಂದಲೂ, ಹೆದರಿದವನಿಂದಲೂ, ಬಾಯಾರಿಕೆಯಿಂದ ಬಳಲಿದವನಿಂದಲೂ ಸಹ ಹಾಡಲ್ಪಡಬಾರದು. ಹಾಗೆಯೇ ಕತ್ತಲೆಯಲ್ಲಿಯೂ ಸಹ, ಹೇಗೆ ಹೇಗೋ ಹಾಡಬಾರದು.

೬೭. ಹಾಡುವವನಿಂದ ಇವೇ ಮೊದಲಾದ ಮತ್ತು ಇತರ ನಿಯಮಗಳ ಅತಿಕ್ರಮವು ಮಾಡಲ್ಪಡಬಾರದು. ಈ ಪ್ರಕಾರವಾಗಿ ಉಲೂಕನು ಹೇಳಲು ಪೂಜ್ಯನಾದ ನಾರದನು ಅವನು ಹೇಳಿದ ಪ್ರಕಾರದಲ್ಲಿ ಒಂದು ಸಹಸ್ರ ದೇವವರ್ಷಗಳವರೆಗೆ ಗೀತವನ್ನು ಅಭ್ಯಾಸ ಮಾಡಿದನು.

೬೮. ಅನಂತರದಲ್ಲಿ ಗೀತಪ್ರಸ್ತಾರಾದಿಗಳಲ್ಲಿ ಸಕಲವನ್ನೂ ತಿಳಿದು ವೀಣೆಯೇ ಮೊದಲಾದುವುಗಳಲ್ಲಿ ಸಂಪೂರ್ಣವಾಗಿ ಸಕಲಸ್ವರ ವಿಭಾಗಗಳನ್ನೆಲ್ಲವನ್ನೂ ತಿಳಿದನು.

ವಿಪಂಚ್ಯಾದಿಷು ಸಂಪನ್ನಃ ಸರ್ವಸ್ವರವಿಭಾಗವಿತ್ ।
ಅಯುತಾನಿ ಚ ಷಟ್‌ತ್ರಿಂಶ ಸಹಸ್ರಾಣಿ ಶತಾನಿ ಚ ॥೬೯॥
ಸ್ವರಾಣಾಂ ಭೇದಯೋಗೇನ ಜ್ಞಾನವಾನ್ ಮುನಿಸತ್ತಮ ।
ತತೋ ಗಂಧರ್ವ ಸಂಘಾಶ್ಚ ಕಿನ್ನರಾಣಾಂ ತಥೈವಚ ॥೭೦॥
ಮುನಿನಾ ಸಹ ಸಂಯುಕ್ತಾಃ ಪ್ರೀತಿಯುಕ್ತಾ ಭವಂತಿ ತೇ ।
ಗಾನಬಂಧುಂ ಮುನಿಃ ಪ್ರಾಹ ಪ್ರಾಪ್ಯ ಗಾನಮನುತ್ತಮಂ ॥೭೧॥
ತ್ವಾಂ ಸಮಾಸಾದ್ಯ ಸಂಪನ್ನಸ್ತ್ವಂ ಹಿ ಗೀತಾವಿಶಾರದಃ ।
ಧ್ವಾಂಕ್ಷಶತ್ರೋ ಮಹಾಪ್ರಾಜ್ಞ ಕಿಮಾಚಾರ್ಯ ಕರೋಮಿ ತೇ ॥೭೨॥

॥ ಗಾನಬಂಧು ರುವಾಚ ॥

ಬ್ರಹ್ಮಣೋ ದಿವಸೇ ಬ್ರಹ್ಮನ್ ಮನವಸ್ತು ಚತುರ್ದಶ ।
ತತಸ್ತ್ರೈಲೋಕ್ಯಸಂಪ್ಲಾವೋ ಭವಿಷ್ಯತಿ ಮಹಾಮುನೇ ॥೭೩॥

---

೬೯. ಆ ಋಷಿ ಶ್ರೇಷ್ಠನಾದ ನಾರದನು ಸ್ವರಗಳ ಅನೇಕ ಲಕ್ಷೋಪ ಲಕ್ಷ ಸಂಖ್ಯಾಕವಾದ ಭೇದ ಮತ್ತು ಪ್ರಭೇದಗಳನ್ನು ಚೆನ್ನಾಗಿ ತಿಳಿದನು.

೭೦. ಅನಂತರದಲ್ಲಿ ಸಕಲಗಂಧರ್ವ ಮತ್ತು ಕಿನ್ನರ ಸಮೂಹ ಗಳು ನಾರದರೊಡನೇ ಸೇರಿ ಸಂತೋಷಯುತರಾದರು.

೭೧-೭೨. ಈ ಪ್ರಕಾರ ನಾರದ ಋಷಿಯು ಬಹಳ ಶ್ರೇಷ್ಠವಾದ ಗಾನವಿದ್ಯೆಯನ್ನು ಕಲಿತು, ತದನಂತರದಲ್ಲಿ ಗಾನವಿದ್ಯೆ ಹೇಳಿಕೊಡುವುದ ರಲ್ಲಿ ತನಗೆ ಗುರುವಾದ ಮತ್ತು ಗಾನಬಂಧುವೂ ಆದ ಆ ಉಲೂಕನನ್ನು ಕುರಿತು, ಓ ಮಹಾಪ್ರಜ್ಞಾಶಾಲಿಯೂ, ಗಾನವಿದ್ಯೆಯಲ್ಲಿ ಪಂಡಿತನೂ, ಮತ್ತು ಕಾಗೆಯ ಶತ್ರುವೂ ಆದ ಆಚಾರ್ಯನೇ, ನಿನ್ನಿಂದ ನಾನು ಗಾನ ವಿದ್ಯೆಯಲ್ಲಿ ಪಾಂಡಿತ್ಯವನ್ನು ಪಡೆದೆನು. ನಿನಗೆ ನಾನು ಯಾವ ಹಿತವನ್ನು ಮಾಡಲಿ? ಹೇಳುವವನಾಗು. ಎಂದು ಕೇಳಿದನು.

೭೩-೭೪. ಗಾನಬಂಧುವು ಹೇಳಿದನು:-ಬ್ರಹ್ಮಋಷಿಯೇ, ಬ್ರಹ್ಮನ ಒಂದು ದಿವಸದಲ್ಲಿ ಹದಿನಾಲ್ಕು ಮನುಗಳಾಗುತ್ತಾರೆ. ಅನಂತರದಲ್ಲಿ

ತಾವನ್ಮೇ ತ್ವಾಯುಷೋ ಭಾವಸ್ತಾವನ್ಮೇ ಪರಮಂ ಶುಭಂ ।
ಮನಸಾಽಧ್ಯಾಹಿತಂ ಮೇ ಸ್ಯಾದ್ದಕ್ಷಿಣಾ ಮುನಿಸತ್ತಮ ॥೭೪॥

॥ ನಾರದ ಉವಾಚ ॥

ಅತೀತ ಕಲ್ಪ ಸಂಯೋಗೇ ಗರುಡಸ್ತ್ವಂ ಭವಿಷ್ಯಸಿ ।
ಸ್ವಸ್ತಿ ತೇಽಸ್ತು ಮಹಾಪ್ರಾಜ್ಞ ಗಮಿಷ್ಯಾಮಿ ಪ್ರಸೀದ ಮಾಂ ॥೭೫॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ಜಗಾಮಾಥ ನಾರದೋಽಪಿ ಜನಾರ್ದನಂ ।
ಶ್ವೇತದ್ವೀಪೇ ಹೃಷೀಕೇಶಂ ಗಾಪಯಾಮಾಸ ಗೀತಕಾನ್ ॥೭೬॥

ತತ್ರ ಶ್ರುತ್ವಾ ತು ಭಗವನ್ನಾರದಂ ಪ್ರಾಹ ಮಾಧವಃ ।
ತುಂಬುರೋರ್ನ ವಿಶಿಷ್ಟೋಽಸಿ ಗೀತೈರದ್ಯಾಪಿ ನಾರದ ॥೭೭॥

---

ಮೂರು ಲೋಕಗಳ ಪ್ರಳಯವು ಸಂಭವಿಸುತ್ತದೆ. ಎಲೈ ಮಹಿಮೆಯಿಂದ ಯುಕ್ತನಾದ ಋಷಿಯೇ, ಅಲ್ಲಿಯ ವರೆಗೂ ನನಗೆ ಆಯುಸ್ಸು ಇರುತ್ತದೆ. ಆದಕಾರಣ ಆ ಪರ್ಯಂತ ನನ್ನ ಮನೋಭಿಲಾಷೆಯೂ ಮತ್ತು ಶರೀರಾರೋಗ್ಯಾದಿ ಮಂಗಳವೂ ಪ್ರಾಪ್ತವಾಗುವುದೇ ಗುರು ದಕ್ಷಿಣೆಯು.

೭೫. ನಾರದನು ಹೇಳಿದನು :—ಕಳೆದು ಹೋದ ಕಲ್ಪದ ಸಂಬಂಧವು ಪ್ರಾಪ್ತವಾದರೆ ನೀನು ಗರುಡನಾಗುವೆ. ಎಲೈ ಪ್ರಜ್ಞಾಶಾಲಿಯೇ, ನಿನಗೆ ಮಂಗಳವಾಗಲಿ, ನಾನು ಹೋಗುತ್ತೇನೆ. ಅನುಗ್ರಹಿಸುವವನಾಗು.

೭೬. ಆಗ ಮಾರ್ಕಂಡೇಯನು ಹೇಳಿದನು :—ಈ ಪ್ರಕಾರವಾಗಿ ನಾರದನು ಉಲೂಕನಿಗೆ ಹೇಳಿ, ಅನಂತರಲ್ಲಿ ಜನಾರ್ದನನನ್ನು ನೋಡಲು ಹೋದನು. ಶ್ವೇತ ದ್ವೀಪಕ್ಕೆ ಹೋಗಿ ವಿಷ್ಣುವನ್ನು ಸಮೀಪಿಸಿ ಗಾನಮಾಡಿದನು.

೭೭. ನಾರದನ ಗಾನವನ್ನು ಕೇಳಿ ಭಗವಂತನು ನಾರದನನ್ನು ಕುರಿತು ಈ ಪ್ರಕಾರವಾಗಿ ಹೇಳಿದನು. ಎಲೈ ನಾರದನೇ, ಈಗಲೂ ಕೂಡ ನೀನು ಗಾನದಲ್ಲಿ ತುಂಬುರನನ್ನು ಮೀರಿಸಿಲ್ಲವು.

ಯದಾ ವಿಶಿಷ್ಟೋ ಭವಿತಾ ತಂ ಕಾಲಂ ಪ್ರವದಾಮ್ಯಹಂ ।
ಗಾನಬಂಧುಂ ಸಮಾಸಾದ್ಯ ಗಾನಾರ್ಥಜ್ಞೋ ಭವಾನಸಿ ॥೭೮॥

ವೈವಸ್ವತಸ್ಯಾಷ್ಟಾವಿಂಶತಿಮೇ ಯುಗೇ ।
ದ್ವಾಪರಾಂತೇ ಭವಿಷ್ಯಾಮಿ ಯದುವಂಶ ಕುಲೋದ್ಭವಃ ॥೭೯॥

ದೇವಕ್ಯಾಂ ವಸುದೇವಸ್ಯ ಕೃಷ್ಣೋ ನಾಮ್ನಾ ಮಹಾಮತೇ ।
ತದಾನೀಂ ಮಾಂ ಸಮಾಸಾದ್ಯ ಸ್ಮಾರಯೇಥಾ ಯಥಾ ತಥಂ ॥೮೦॥

ತತ್ರ ತ್ವಾಂ ಗೀತ ಸಂಪನ್ನಂ ಕರಿಷ್ಯಾಮಿ ಮಹಾವ್ರತಂ ।
ತುಂಬುರೋಶ್ಚ ಸಮಂ ಚೈವ ತಥಾಽತಿಶಯ ಸಂಯುತಂ ॥೮೧॥

---

೭೮. ಎಲೈ ನಾರದನೇ, ಯಾವಾಗ ತುಂಬುರನಿಗಿಂತಲೂ ಹೆಚ್ಚು ವಿದ್ಯಾಶಾಲಿಯಾಗುವೆಯೆಂಬುದನ್ನೂ ಸಹ ಹೇಳುವೆನು. ನೀನೇನೋ ಗಾನಬಂಧುವಿನಲ್ಲಿಗೆ ಹೋಗಿ ಸಂಗೀತ ವಿಷಯವನ್ನೇನೋ ತಿಳಿದವನಾಗಿರುವೆ.

೭೯. ಎಲೈ ಮಹಾ ಬುದ್ಧಿಶಾಲಿಯೇ, ವೈವಸ್ವತ ಮನುವಿನ ಇಪ್ಪತ್ತೆಂಟನೆಯ ದ್ವಾಪರಯುಗದ ಅಂತ್ಯದಲ್ಲಿ ಯದುವಂಶದಲ್ಲಿ ದೇವಕಿಯ ಗರ್ಭದಲ್ಲಿ ವಸುದೇವನ ಮಗನಾಗಿ ಕೃಷ್ಣನೆಂಬ ಹೆಸರಿನಿಂದ ಉದ್ಭವಿಸುತ್ತೇನೆ. (ಅವತರಿಸುತ್ತೇನೆ)

೮೦–೮೧. ಆವಾಗ ನನ್ನಲ್ಲಿಗೆ ನೀನು ಬಂದು ಈ ವಿಷಯವನ್ನು ನನಗೆ ಜ್ಞಾಪಿಸುವವನಾಗು. ಅಲ್ಲಿ ನಾನು ಗಾನ ವಿಶಾರದನಾಗಲು ವ್ರತಿಯಾದ ನಿನ್ನನ್ನು ಗಾನವಿದ್ಯೆಯಲ್ಲಿ ಪಾರಂಗತನನ್ನಾಗಿ ಮಾಡುವೆನು ಮತ್ತು ತುಂಬುರನಿಗೆ ಸಮಾನನನ್ನಾಗಿಯೂ ಮತ್ತು ಅವನಿಗಿಂತಲೂ ಹೆಚ್ಚು ವಿದ್ಯಾವಂತನನ್ನಾಗಿಯೂ, ಮಾಡುತ್ತೇನೆ.

ತಾವತ್ಕಾಲಂ ಯಥಾಯೋಗಂ ದೇವಗಂಧರ್ವಯೋನಿಷು ।
ಶಿಕ್ಷಯಸ್ವ ಯಥಾನ್ಯಾಯಮಿತ್ಯುಕ್ತ್ವಾಂತರಧೀಯತ ॥೮೨॥
ತತೋ ಮುನಿಃ ಪ್ರಣಮ್ಯೈನಂ ವೀಣಾವಾದನತತ್ಪರಃ ।
ದೇವರ್ಷಿರ್ದೇವ ಸಂಕಾಶಃ ಸರ್ವಾಭರಣ ಭೂಷಿತಃ ॥೮೩॥
ತಪಸಾಂ ನಿಧಿರತ್ಯಂತಂ ವಾಸುದೇವಪರಾಯಣಃ ।
ಸ್ಕಂಧೇ ವಿಪಂಚೀಮಾಸಾದ್ಯ ಸರ್ವಲೋಕಾಂಶ್ಚಚಾರಸಃ ॥೮೪॥
ವಾರುಣಂ ಯಾಮ್ಯ ಮಾಗ್ನೇಯ ಮೈಂದ್ರಂ ಕೌಬೇರಮೇವಚ ।
ವಾಯವ್ಯಂ ಚ ತಥೇಶಾನಂ ಸಂಸದಂ ಪ್ರಾಪ್ಯ ಧರ್ಮವಿತ್ ॥೮೫॥
ಗಾಯಮಾನೋ ಹರಿಂ ಸಮ್ಯಗ್ವೀಣಾ ವಾದವಿಚಕ್ಷಣಃ ।
ಗಂಧರ್ವಾಪ್ಸರಸಾಂ ಸಂಘೈಃ ಪೂಜ್ಯಮಾನಸ್ತತಸ್ತತಃ ॥೮೬॥

---

೮೨. ಅಲ್ಲಿಯವರೆಗೆ ನಿನ್ನಲ್ಲಿಗೆ ಬರುವ ದೇವಗಂಧರ್ವರುಗಳಿಗೆ ವಿಧಿವತ್ತಾಗಿ ಗಾನವಿದ್ಯೆಯನ್ನು ಕಲಿಸುತ್ತಿರುವವನಾಗು. ಎಂದು ಹೇಳಿ ಅಂತರ್ಧಾನನಾದನು.

೮೩–೮೪. ಅನಂತರದಲ್ಲಿ ಪರಮಾತ್ಮನನ್ನು ನಮಸ್ಕರಿಸಿ ಸಕಲಾಭರಣಗಳಿಂದಲೂ ಭೂಷಿತನೂ, ದೇವ ಸದೃಶವಾದ ಕಾಂತಿಯಿಂದ ಕೂಡಿದವನೂ, ತಪೋನಿಧಿಯೂ, ವಾಸುದೇವನಲ್ಲೇ ಆಸಕ್ತನೂ, ದೇವರ್ಷಿಯೂ ಆದ ನಾರದನು ಹೆಗಲ ಮೇಲೆ ವೀಣೆಯನ್ನು ಇಟ್ಟುಕೊಂಡು ವೀಣಾ ವಾದನದಲ್ಲೇ ಮಗ್ನನಾಗಿ ಸಕಲ ಲೋಕಗಳಲ್ಲೂ ಸಂಚಾರ ಮಾಡುತ್ತಿದ್ದನು.

೮೫–೮೬. ವರುಣನ, ಯಮನ, ಅಗ್ನಿಯ, ಇಂದ್ರನ, ಕುಬೇರನ, ವಾಯುವಿನ, ಮತ್ತು ಈಶಾನನ, ಸಭೆಗಳಿಗೆ ಧರ್ಮಜ್ಞನೂ ಮತ್ತು ವೀಣಾವಾದನದಲ್ಲಿ ಬುದ್ಧಿಶಾಲಿಯೂ ಆದ ನಾರದನು ಹೋಗಿ ಹರಿಗಾನವನ್ನು ಮಾಡುತ್ತಾ ಅಲ್ಲಲ್ಲಿ ಗಂಧರ್ವರಿಂದಲೂ ಮತ್ತು ಅಪ್ಸರೆಯರಿಂದಲೂ ಪೂಜಿಸಲ್ಪಡುತ್ತಿದ್ದನು.

ಬ್ರಹ್ಮಲೋಕಂ ಸಮಾಸಾದ್ಯ ಕಸ್ಮಿಂಶ್ಚಿತ್ಕಾಲಪರ್ಯಯೇ ।
ಹಾಹಾ ಹೂಹೂಶ್ಚ ಗಂಧರ್ವೌ ಗೀತವಾದ್ಯ ವಿಶಾರದೌ ॥೮೭॥

ಬ್ರಹ್ಮಣೋ ಗಾಯಕೌ ದಿವ್ಯೌ ನಿತ್ಯೌ ಗಂಧರ್ವ ಸತ್ತಮೌ ।
ತತ್ರ ತಾಭ್ಯಾಂ ಸಮಾಸ(ಸಾ)ದ್ಯ ಗಾಯಮಾನೋ ಹರಿಂ ಪ್ರಭುಂ ॥

ಬ್ರಹ್ಮಣಾ ಚ ಮಹಾತೇಜಾಃ ಪೂಜಿತೋ ಮುನಿಸತ್ತಮಃ ।
ತಂ ಪ್ರಣಮ್ಯ ಮಹಾತ್ಮಾನಂ ಸರ್ವಲೋಕಪಿತಾಮಹಂ ॥೮೯॥

ಚಚಾರ ಚ ಯಥಾಕಾಮಂ ಸರ್ವಲೋಕೇಷು ನಾರದಃ ।
ತತಃ ಕಾಲೇನ ಮಹತಾ ಗೃಹಂ ಪ್ರಾಪ್ಯ ಚ ತುಂಬುರೋಃ ॥೯೦॥

ವೀಣಾಮಾದಾಯ ತತ್ರಸ್ಥೋ ಹ್ಯಗಾಯತ ಮಹಾಮುನಿಃ ।
ಸ್ವರಕಲ್ಪಾಸ್ತು ತತ್ರಸ್ಥಾಃ ಷಡ್ಜಾದ್ಯಾಸ್ಸಪ್ತ ವೈ ಮತಾಃ ॥೯೧॥

---

೮೮. ನಾರದನು ಕಾಲಕ್ರಮದಲ್ಲಿ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ಗಂಧರ್ವಶ್ರೇಷ್ಠರೂ ಮನೋಹರರೂ ಶಾಶ್ವತರೂ ಮತ್ತು ಗೀತದಲ್ಲೂ ಮತ್ತು ವಾದನದಲ್ಲೂ ಪಂಡಿತರೂ ಆದ ಹಾಹಾ ಮತ್ತು ಹೂಹೂ ಎಂಬ ಗಂಧರ್ವರೊಡನೆ ಸೇರಿ ಪ್ರಭುವಾದ ವಿಷ್ಣುವನ್ನು ಕುರಿತು ಗಾನ ಮಾಡುತ್ತಿದ್ದನು.

೮೯. ಮುನಿಶ್ರೇಷ್ಠನಾದ ನಾರದನು ಬ್ರಹ್ಮನಿಂದಲೂ ಸಹ ಪೂಜಿಸಲ್ಪಟ್ಟು ಸಕಲ ಲೋಕಗಳಿಗೂ ಪಿತಾಮಹನಾದ ಮತ್ತು ಮಹಾತ್ಮನೂ ಆದ ಬ್ರಹ್ಮನಿಗೆ ನಮಸ್ಕರಿಸಿ ಸಮಸ್ತಲೋಕಗಳಲ್ಲೂ ಮನದ ಇಚ್ಛೆಯಂತೆ ಸಂಚರಿಸುತ್ತಿದ್ದನು.

೯೦. ಹೀಗೆ ಲೋಕಗಳಲ್ಲಿ ಸಂಚರಿಸುತ್ತಾ ನಾರದನು ಬಹಳ ಸಮಯವಾದಮೇಲೆ ತುಂಬುರನ ಮನೆಗೆ ಹೋದನು. ಅಲ್ಲಿರುವವನಾಗಿ ವೀಣೆಯನ್ನು ತೆಗೆದು ನುಡಿಸುತ್ತಾ ಗಾನಮಾಡಿದನು.

೯೧. ಅಲ್ಲಿ (ತುಂಬುರನ ಮನೆಯಲ್ಲಿದ್ದ) ಸ್ವರದಲ್ಲಿ ಮೊದಲಿಗರಾದ ಷಡ್ಜಾದಿ ಏಳು ಸ್ವರದೇವರನ್ನು ಪ್ರತ್ಯಕ್ಷವಾಗಿ ಆಡುತ್ತಿರುವವರನ್ನಾಗಿ ನೋಡಿ, ಪೂಜ್ಯನಾದ ನಾರದನು ಜಾಗ್ರತೆಯಾಗಿ ಅಲ್ಲಿಂದ ತೆರಳಿದನು.

ಕ್ರೀಡತೋ ಭಗವಾನ್ ದೃಷ್ಟ್ವಾ ನಿರ್ಗತಶ್ಚ ಸುಸತ್ವರಂ ।
ಶಿಕ್ಷಯಾಮಾಸ ಬಹುಶ ಸ್ತತ್ರ ತತ್ರ ಮಹಾಮತಿಃ ॥ ೯೨ ॥

ಶ್ರಮ ಯೋಗೇನ ಸಂಯುಕ್ತೋ ನಾರದೋಽಪಿ ಮಹಾಮುನಿಃ ।
ಸಪ್ತ ಸ್ವರಾಂಗನಾಃ ಪಶ್ಯನ್ ಗಾನವಿದ್ಯಾವಿಶಾರದಃ ॥ ೯೩ ॥

ಆಸೀದ್ವೀಣಾ ಸಮಾಯೋಗೇ ನ ತಾಸ್ತಂತ್ರ್ಯಃ ಪ್ರವೇದಿರೇ।
ತತೋ ರೈವತಕೇ ಕೃಷ್ಣಂ ಪ್ರಣಿಪತ್ಯ ಮಹಾ ಮುನಿಃ ॥ ೯೪ ॥

(ವ್ಯ)ವಿಜ್ಞಾಪಯ ದಶೇಷಂ ತು ಶ್ವೇತದ್ವೀಪೇ ತು ಯತ್ಪುರಾ ।
ನಾರಾಯಣೇನ ಕಥಿತಂ ಗಾನಯೋಗ ಮನುತ್ತಮಂ ॥ ೯೫ ॥

ತಚ್ಛ್ರುತ್ವಾ ಪ್ರಾಹಸತ್ಕೃಷ್ಣಃ ಪ್ರಾಹ ಜಾಂಬವತೀಂ ಮುದಾ ।
ಏವಂ ಮುನಿವರಂ ಭದ್ರೇ ಶಿಕ್ಷಯಸ್ವ ಯಥಾ ವಿಧಿ ॥ ೯೬ ॥

---

೯೨-೯೩. ಅಲ್ಲಲ್ಲಿ ಮಹಾ ಬುದ್ಧಿಶಾಲಿಯಾದ ನಾರದನು ಬಹಳವಾಗಿ ಅಭ್ಯಸಿದನು. ಬಹಳ ಶ್ರಮದಿಂದ ಗಾನವಿದ್ಯಾ ವಿಶಾರದನಾದ ಅವನೂ ಕೂಡ ಕಡೆಗೆಸಪ್ತಸ್ವರದೇವತಾ ಸ್ತ್ರೀಯರನ್ನು ನೋಡಿದನು. ಆದರೆ ವೀಣೆಯತಂತಿಗಳಲ್ಲಿ ಅವರನ್ನು ಪಡೆಯಲಾರದವನಾದನು. ಎಂದರೆ ಯಾವರೀತಿ ಅವರ ಸ್ವರೂಪವನ್ನು ನೋಡಿದನೋ ಹಾಗೆ ವೀಣೆಯಲ್ಲಿ ನುಡಿಸಲು ಶಕ್ತನಾಗಲಿಲ್ಲ. ಆ ಕಾರಣದಿಂದ ವಿದ್ಯೆಯಲ್ಲಿ ಇನ್ನೂ ಅವನು ಪೂರ್ಣನಾಗದೇ ಇದ್ದನು.

೯೪-೯೫. ಅನಂತರದಲ್ಲಿ ನಾರದನು ರೈವತ ಪಟ್ಟಣಕ್ಕೆ ಹೋದನು. ಅಲ್ಲಿ ಶ್ರೀಕೃಷ್ಣನನ್ನು ನೋಡಿ ನಮಸ್ಕಾರಮಾಡಿ ಹಿಂದೆ ಶ್ವೇತದ್ವೀಪದಲ್ಲಿ ನಾರಾಯಣನು ಹೇಳಿದ್ದ ಉತ್ತಮವಾದ ಗಾನದ ವಿಷಯವನ್ನೂ ವಿಜ್ಞಾಪಿಸಿಕೊಂಡನು.

೯೬. ಆ ಮಾತನ್ನು ಕೇಳಿ ಶ್ರೀಕೃಷ್ಣನು ನಕ್ಕು ಸಂತೋಷದಿಂದ ಜಾಂಬುವತಿಯನ್ನು ಕುರಿತು, ಎಲೌ ಮಂಗಳಕರಳೇ ಕ್ರಮವಾಗಿ ಮುನಿಶ್ರೇಷ್ಠನಿಗೆ ವಿಣಾವಾದನ ಸಹಿತವಾಗಿ ಗಾನವನ್ನು ಹೇಳಿಕೊಡು. ಎಂದು ಹೇಳಿದನು.

ವೀಣಾಗಾನ ಸಮಾಯೋಗೇ ತಥೇತ್ಯುಕ್ತ್ವಾ ಚ ಸಾ ಹರಿಂ ।
ಪ್ರಹಸಂತೀ ಯಥಾಯೋಗಂ ಶಿಕ್ಷಯಾಮಾಸ ತಂ ಮುನಿಂ ॥೯೭॥

ತತಃ ಸಂವತ್ಸರೇ ಪೂರ್ಣೇ ಪುನರಾಗಮ್ಯ ಮಾಧವಂ ।
ಪ್ರಣಿಪತ್ಯಾಗ್ರತಸ್ತಸ್ಥೌ ಪುನರಾಹ ಸ ಕೇಶವಃ ॥೯೮॥

ಸತ್ಯಾಸಮೀಪಮಾಗಚ್ಛ ಶಿಕ್ಷಯಸ್ವ ಯಥಾವಿಧಿ ।
ತಥೇತ್ಯುಕ್ತ್ವಾ ಸತ್ಯಭಾಮಾಂ ಪ್ರಣಿಪತ್ಯ ಜಗೌ ಮುನಿಃ ॥೯೯॥

ತಯಾ ಸ ಶಿಕ್ಷಿತೋ ವಿದ್ವಾನ್ ಪೂರ್ಣೇ ಸಂವತ್ಸರೇ ಪುನಃ ।
ವಾಸುದೇವನಿಯುಕ್ತೋಽಸೌ ರುಕ್ಮಿಣೀ ಸದನಂ ಗತಃ ॥೧೦೦॥

ಅಂಗನಾಭಿಸ್ತತಸ್ತಾಭಿರ್ದಾಸೀಭಿರ್ಮುನಿಸತ್ತಮಃ ।
ಉಕ್ತೋಽಸೌ ಗಾಯಮಾನೋಽಪಿ ನ ಸ್ವರಂ ವೇತ್ಸಿ ವೈ ಮುನೇ ॥

ತತಃ ಶ್ರಮೇಣ ಮಹತಾ ವತ್ಸರತ್ರಯ ಸಂಯುತಂ ।
ಶಿಕ್ಷಿತೋಽಸೌ ತದಾ ದೇವ್ಯಾ ರುಕ್ಮಿಣ್ಯಾಽಪಿ ಜಗೌ ಮುನಿಃ ॥೧೦೨॥

---

೯೭. ಆ ಜಾಂಬುವತಿಯು ಹಾಗೆಯೇ ಆಗಲೆಂದು ಶ್ರೀಕೃಷ್ಣನಿಗೆ ಹೇಳಿ ಆ ಋಷಿಗೆ ಕ್ರಮವಾಗಿ ಗಾನ ವಿದ್ಯೆಯನ್ನು ಹೇಳಿ ಕೊಟ್ಟಳು. ಅನಂತರದಲ್ಲಿ ಸಂವತ್ಸರದ ಪರ್ಯಂತ ಗಾನವಿದ್ಯೆಯನ್ನು ಕಲಿತು ಸಂವತ್ಸರವು ಮುಗಿಯಲು ಕೃಷ್ಣನ ಸಮೀಪಕ್ಕೆ ಬಂದು ಅವನಿಗೆ ನಮಸ್ಕರಿಸಿ ನಿಂತುಕೊಂಡನು.

೯೮–೧೦೦. ನಾರದನು ಶ್ರೀಕೃಷ್ಣನ ಅಪ್ಪಣೆಯ ಪ್ರಕಾರ ಪೂರ್ಣವಾದ ಸಂವತ್ಸರಕಾಲ ಸತ್ಯಭಾಮೆಯಲ್ಲಿ ಶಿಕ್ಷೆಯನ್ನು ಪಡೆದವನಾಗಿ ಮತ್ತೆ ಕೃಷ್ಣನಿಂದ ನಿಯೋಗಿಸಲ್ಪಟ್ಟವನಾಗಿ ಗಾನವಿದ್ಯೆಯನ್ನು ಕಲಿಯಲು ರುಕ್ಮಿಣಿಯ ಮನೆಗೆ ಹೋದನು.

೧೦೧. ಅನಂತರದಲ್ಲಿ ಅಲ್ಲಿರುವ ಸ್ತ್ರೀಯರು ಮತ್ತು ದಾಸಿಯರು ನಾರದನನ್ನು ಕುರಿತು ಹೀಗೆ ಹೇಳಿದರು. ಎಲೈ ಮುನಿಯೇ, ನೀನೇನೋ ಹಾಡುತ್ತೀಯೆ. ಆದರೆ ನಿನಗೆ ಇನ್ನೂ ಸ್ವರಜ್ಞಾನವೇ ಆಗಿ ಇಲ್ಲವೆಂದು ಹೇಳಿದರು !

೧೦೨. ರುಕ್ಮಿಣೀ ದೇವಿಯಿಂದಲೂ ನಾರದನು ಬಹಳ ಶ್ರಮದಿಂದ ಮೂರು ವರ್ಷಗಳು ಗಾನವಿದ್ಯೆಯನ್ನು ಅಭ್ಯಾಸ ಮಾಡಿದನು.

ತತಃ ಸ್ವರಾಂಗನಾಃ ಪ್ರಾಪ್ಯ ತಂತ್ರೀಯೋಗಂ ಮಹಾಮುನೇಃ ।
ಆಹೂಯ ಕೃಷ್ಣೋ ಭಗವಾನ್ ಸ್ವಯಮೇವ ಮಹಾಮುನಿಂ ॥
ಅಶಿಕ್ಷಯದ ಮೇಯಾತ್ಮಾ ಗಾನಯೋಗಮನುತ್ತಮಂ ।
ತತೋಽತಿಶಯ ಮಾಪನ್ನಸ್ತುಂಬುರೋರ್ಮುನಿಸತ್ತಮಃ ॥೧೦೪॥
ತತೋ ನನರ್ತ ದೇವರ್ಷಿಃ ಪ್ರಣಿಪತ್ಯ ಜನಾರ್ದನಂ ।
ಉವಾಚ ಚ ಹೃಷೀಕೇಶಃ ಸರ್ವಜ್ಞಸ್ತ್ವಂ ಮಹಾಮುನೇ ॥೧೦೫॥
ಪ್ರಹಸ್ಯ ಗಾನಯೋಗೇನ ಗಾಯಸ್ವ ಮಮ ಸನ್ನಿಧೌ ।
ಏತತ್ತೇ ಪ್ರಾರ್ಥಿತಂ ಪ್ರಾಪ್ತಂ ಮಮ ಲೋಕೇ ತಥೈವ ಚ ॥೧೦೬॥

---

೧೦೩. ಅನಂತರದಲ್ಲಿ ಸಪ್ತಸ್ವರಾಂಗನೆಯರು ನಾರದನ ವೀಣೆಯನ್ನು ಸೇರಿದರು. ಪರಮಾತ್ಮನಾದ ಶ್ರೀಕೃಷ್ಣನು ರುಕ್ಮಿಣಿಯ ಶಿಕ್ಷಣಾನಂತರ ದಲ್ಲಿ ತಾನೇ ನಾರದನಿಗೆ ಉತ್ತಮವಾದ ಗಾನವಿದ್ಯೆಯನ್ನು ಹೇಳಿ ಕೊಟ್ಟನು.

೧೦೪. ಶ್ರೀಕೃಷ್ಣನು ತಾನೇ ನಾರದನಿಗೆ ಶಿಕ್ಷಣವನ್ನು ಕೊಟ್ಟದ್ದ ರಿಂದ ತುಂಬುರನಿಗಿಂತಲೂ ಹೆಚ್ಚಾದ ಸ್ಥಾನವನ್ನು ನಾರದನು ಪಡೆದನು. ಈ ರೀತಿಯಾಗಿ ತಾನು ಸಕಲವಾದ ಗಾನವಿದ್ಯೆಯಲ್ಲೂ ಪಾರಂಗತನಾದುದ ರಿಂದ ಸಂತೋಷಗೊಂಡು ಕೃಷ್ಣನಿಗೆ ನಮಸ್ಕರಿಸಿ ನರ್ತನ ಮಾಡಿದನು !

೧೦೫-೧೦೬. ಆಗ ಶ್ರೀಕೃಷ್ಣನು ನಕ್ಕು ಎಲೈ ಮಹಾಮುನಿಯೇ, ಸಂಗೀತ ಶಾಸ್ತ್ರದ ಪ್ರಕಾರ ನನ್ನ ಸನ್ನಿಧಿಯಲ್ಲಿ ಹಾಡುವವನಾಗು. ನೀನು ಅಪೇಕ್ಷಿಸಿದ ಗಾನವಿದ್ಯೆ ಮತ್ತು ನನ್ನ ಲೋಕ ಈ ಎರಡೂ ಸಹ ನಿನಗೆ ಪ್ರಾಪ್ತವಾಗಿವೆ. ಪ್ರತಿದಿನವೂ ತುಂಬುರನೊಡನೆ ಇಚ್ಛೆಬಂದಂತೆ ಹಾಡು ತ್ತಿರುವವನಾಗು !

ನಿತ್ಯಂ ತುಂಬುರುಣಾ ಸಾರ್ಧಂ ಗಾಯಸ್ವ ಚ ಯಥಾತಥಂ ।
ಏವಮುಕ್ತೋ ಮುನಿಸ್ತತ್ರ ಯಥಾಯೋಗಂ ಚಚಾರ ಸಃ ॥೧೦೭॥
ಯದಾ ಸಂಪೂಜಯನ್ ಕೃಷ್ಣೋ ರುದ್ರಂ ಭುವನನಾಯಕಂ ।
ತದಾ ಜಗೌ ಹರೇಸ್ತಸ್ಯ ನಿಯೋಗಾಚ್ಛಂಕರಾಯ ವೈ ॥೧೦೮॥
ರುಕ್ಮಿಣ್ಯಾ ಸಹ ಸತ್ಯಾ ಚ ಜಾಂಬವತ್ಯಾ ಮಹಾಮುನಿಃ ।
ಕೃಷ್ಣೇನ ಚ ನೃಪಶ್ರೇಷ್ಠ ಶ್ರುತಿಜಾತಿವಿಶಾರದಃ ॥೧೦೯॥
ಏಷ ವೋ ಮುನಿಶಾರ್ದೂಲಾಃ ಪ್ರೋಕ್ತೋ ಗೀತಕ್ರಮೋ ಮುನೇಃ।
ಬ್ರಾಹ್ಮಣೋ ವಾಸುದೇವಾಖ್ಯಂ ಗಾಯಮಾನೋ ಭೃಶಂ ನೃಪ ॥
ಹರೇಸ್ಸಾಲೋಕ್ಯಮಾಪ್ನೋತಿ ರುದ್ರಗಾನೋಽಧಿಕೋ ಭವೇತ್ ।
ಅನ್ಯಥಾ ನರಕಂ ಗಚ್ಛೇತ್ ಗಾಯಮಾನೋಽನ್ಯದೇವ ಹಿ ॥೧೧೧॥

---

೧೦೭. ಈ ಪ್ರಕಾರವಾಗಿ ಕೃಷ್ಣನು ಹೇಳಿದ ಬಳಿಕ ನಾರದನು ಯಥಾಕ್ರಮವಾಗಿ ಸಂಚರಿಸ ತೊಡಗಿದನು.

೧೦೮—೧೦೯. ಶ್ರೀಕೃಷ್ಣನು ಲೋಕನಾಯಕನಾದ ಈಶ್ವರನ ಅರ್ಚನೆಯನ್ನು ಮಾಡುವ ಕಾಲದಲ್ಲಿ ಶ್ರೀಕೃಷ್ಣನ ಅಪ್ಪಣೆಯ ಪ್ರಕಾರ ಸಕಲ ಸ್ವರಗಳನ್ನೂ ತಿಳಿದ ನಾರದನು ಶಂಕರನ ತೃಪ್ತಿಗಾಗಿ, ಎಲೈರಾಜನೇ, ಕೃಷ್ಣ ರುಕ್ಮಿಣೀ, ಸತ್ಯಭಾಮಾ ಮತ್ತು ಜಾಂಬವತಿಯೊಡನೆ ಹಾಡುತ್ತಿದ್ದನು.

೧೧೦. ಎಲೈ ಮುನಿಶ್ರೇಷ್ಠರೇ, ಈ ಪ್ರಕಾರವಾದ ನಾರದನ ಗಾನಯೋಗದ ಪ್ರಾಪ್ತಿಯ ಕಥೆಯು ನಿಮಗಾಗಿ ಹೇಳಲ್ಪಟ್ಟಿತು. ಎಲೈ ರಾಜನೇ, ವಿಷ್ಣುಸ್ತೋತ್ರವನ್ನು ಹೆಚ್ಚಾಗಿ ಗಾನಮಾಡುವ ಬ್ರಾಹ್ಮಣನು ವಿಷ್ಣುಲೋಕವನ್ನು ಪಡೆಯುತ್ತಾನೆ. ಈಶ್ವರಸ್ತುತಿಯನ್ನು ಗಾನಮಾಡುವವನು ಅದಕ್ಕಿಂತಲೂ ಅಧಿಕವಾದ ಹರನಲೋಕವನ್ನು ಪಡೆಯುತ್ತಾನೆ.

೧೧೧—೧೧೨. ಹರಿಹರ ಇಬ್ಬರ ಸ್ತುತಿಯನ್ನೂ ಬಿಟ್ಟು ಬೇರೆಯದನ್ನು ಗಾನಮಾಡುವ ಬ್ರಾಹ್ಮಣನು ನರಕಕ್ಕೆ ಹೋಗುತ್ತಾನೆ. ಕರ್ಮದಿಂದಲೂ ಮನಸ್ಸಿನಿಂದಲೂ ಮತ್ತು ಮಾತಿನಿಂದಲೂ ಸಹ ವಾಸುದೇವನಲ್ಲೇ ನಿರತನಾಗಿ ತಾನು ಗಾನಮಾಡುತ್ತಲೂ, ಮತ್ತೊಬ್ಬರು ಗಾನ ಮಾಡುವು

ಕರ್ಮಣಾ ಮನಸಾ ವಾಚಾ ವಾಸುದೇವ ಪರಾಯಣಃ ।
ಗಾಯನ್ನೃಣ್ವಂ ಸ್ತಮಾಪ್ನೋತಿ ತಸ್ಮಾದ್ಗೇಯಂ ಪರಂ ವಿದುಃ॥೧೧೨॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ವೈಷ್ಣವ ಗೀತ ಕಥನಂ
ನಾಮ ತೃತೀಯೋಽಧ್ಯಾಯಃ

---

ದನ್ನು ಕೇಳುತ್ತಲೂ, ಇದ್ದರೆ ವಾಸುದೇವನನ್ನೇ ಹೊಂದುತ್ತಾನೆ. ಆದ ಕಾರಣ ಗಾನವಿದ್ಯೆಯು ಸರ್ವಶ್ರೇಷ್ಠವಾದುದೆಂದು ತಿಳಿಯುತ್ತಾರೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ವೈಷ್ಣವ ಗೀತದ ಮಹಿಮೆಯ
ಕಥನವೆಂಬ ಮೂರನೆಯ ಅಧ್ಯಾಯವು ಮುಗಿದುದು

अथ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಚತುರ್ಥೋಽಧ್ಯಾಯಃ

॥ ಋಷಯ ಊಚುಃ ॥

ವೈಷ್ಣವಾ ಇತಿ ಯೇ ಪ್ರೋಕ್ತಾ ವಾಸುದೇವಪರಾಯಣಾಃ ।
ಕಾನಿ ಚಿಹ್ನಾನಿ ತೇಷಾಂ ವೈ ತನ್ನೋ ಬ್ರೂಹಿ ಮಹಾಮತೇ ॥ ೧ ॥
ಕೇಷಾಂ ವಾ ಕಿಂ ಕರೋತ್ಯೇಷ ಭಗವಾನ್ ಭೂತಭಾವನಃ ।
ಏತನ್ಮೇ ಸರ್ವಮಾಚಕ್ಷ್ವ ಸೂತ ಸರ್ವಾರ್ಥವಿತ್ತಮ ॥ ೨ ॥

॥ ಸೂತ ಉವಾಚ ॥

ಅಂಬರೀಷೇಣ ವೈ ಪೃಷ್ಟೋ ಮಾರ್ಕಂಡೇಯಃ ಪುರಾ ಮುನಿಃ ।
ಯುಷ್ಮಾಭಿರದ್ಯ ಯತ್ಪ್ರೋಕ್ತಂ ತದ್ವದಾಮಿ ಯಥಾತಥಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಾಲ್ಕನೆಯ ಅಧ್ಯಾಯವು.

೧. ಋಷಿಗಳು ಹೇಳಿದರು :— ಎಲೈ ಮಹಾ ಬುದ್ಧಿಶಾಲಿಯಾದ ಸೂತನೇ, ಪೂರ್ವಾಧ್ಯಾಯದಲ್ಲಿ ವಾಸುದೇವನಲ್ಲಿ ಆಸಕ್ತರಾದ ಭಕ್ತರು ವೈಷ್ಣವರೆಂದು ಹೇಳಲ್ಪಟ್ಟಿತಲ್ಲವೇ ? ಆ ವೈಷ್ಣವರಿಗೆ ಗುರುತುಗಳು (ಲಕ್ಷಣಗಳು) ಯಾವುವು ? ಎಂಬುದನ್ನು ನಮಗೆ ಹೇಳುವವನಾಗು.

೨. ಅಂತಹ ಭಕ್ತರಿಗೆ ಭೂತ ಭಾವನನಾದ ಪರಮಾತ್ಮನು ಏನನ್ನು ಮಾಡುತ್ತಾನೆ ? ಎಂಬುವುದೇ ಮೊದಲಾದ ಸರ್ವವನ್ನೂ ನಮಗೆ ಓ ಸಕಲವನ್ನೂ ತಿಳಿದ ಸೂತನೇ, ಹೇಳುವವನಾಗು.

೩. ಸೂತನು ಹೇಳಿದನು :— ನೀವು ಯಾವುದನ್ನು ಕೇಳುತ್ತೀರೋ, ಹಿಂದೆ ಅದೇ ವಿಷಯವನ್ನು ಅಂಬರೀಷನು ಮಾರ್ಕಂಡೇಯನನ್ನು ಕೇಳಿದನು. ಅವನು ಹೇಳಿದ ಉತ್ತರವನ್ನೇ ಈಗ ನಿಮಗೆ ಯಥಾವತ್ತಾಗಿ ಹೇಳುತ್ತೇನೆ.

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ಯಥಾನ್ಯಾಯಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ಯತ್ರಾಸ್ತೇ ವಿಷ್ಣುಭಕ್ತಸ್ತು ತತ್ರ ನಾರಾಯಣಃ ಸ್ಥಿತಃ ॥ ೪ ॥
ವಿಷ್ಣುರೇವ ಹಿ ಸರ್ವತ್ರ ಏಷಾಂ ವೈ ದೇವತಾ ಸ್ಮೃತಾ ।
ಕೀರ್ತ್ಯಮಾನೇ ಹರೌ ನಿತ್ಯಂ ರೋಮಾಂಚೋ ಯಸ್ಯ ವರ್ತತೇ ॥
ಕಂಪಃ ಸ್ವೇದ ಸ್ತಥಾಽಕ್ಷೇಷು ದೃಶ್ಯಂತೇ ಜಲಬಿಂದವಃ ।
ವಿಷ್ಣುಭಕ್ತಿಸಮಾಯುಕ್ತಾನ್ ಶ್ರೌತಸ್ಮಾರ್ತ ಪ್ರವರ್ತಕಾನ್ ॥ ೬ ॥
ಪ್ರೀತೋ ಭವತಿ ಯೋ ದೃಷ್ಟ್ವಾ ವೈಷ್ಣವೋಽಸೌ ಪ್ರಕೀರ್ತಿತಃ ।
ನಾನ್ಯದಾಚ್ಛೇದಯೇದ್ವಸ್ತ್ರಂ ವೈಷ್ಣವೋ ಜಗತೋಽರಣೇ ॥ ೭ ॥
ವಿಷ್ಣುಭಕ್ತ ಮಥಾ ಯಾಂತಂ ಯೋ ದೃಷ್ಟ್ವಾಸಂಮುಖಸ್ಥಿತಃ ।
ಪ್ರಣಾಮಾದಿ ಕರೋತ್ಯೇವಂ ವಾಸುದೇವೇ ಯಥಾ ತಥಾ ॥ ೮ ॥

---

೪. ಮಾರ್ಕಂಡೇಯನು ಹೇಳಿದನು:—ಎಲೈ ರಾಜನೇ, ಯಾವುದನ್ನು ಕೇಳಲಿಚ್ಛಿಸುತ್ತಿರುವೆಯೋ ಅದನ್ನು ಕ್ರಮವಾಗಿ ಹೇಳುವೆನು. ಕೇಳು ವಿಷ್ಣುಭಕ್ತರು ಎಲ್ಲಿರುವರೋ ಅಲ್ಲಿ ನಾರಾಯಣನು ಯಾವಾಗಲೂ ಇರುತ್ತಾನೆ.

೫–೬. ಯಾರು ವಿಷ್ಣುವನ್ನೇ ದೇವರನ್ನಾಗಿ ತಿಳಿದು ವಿಷ್ಣುವಿನ ಪೂಜೆ, ಭಜನೆ, ಮೊದಲಾದುವುಗಳಲ್ಲಿ ನಿರತರಾಗಿರುವರೋ, ಯಾರಿಗೆ ಹರಿ ಕೀರ್ತನ ಸಮಯದಲ್ಲಿ ರೋಮಾಂಚವುಂಟಾಗುವುದೋ, ವಿಷ್ಣು ಕೀರ್ತನಸಮಯದಲ್ಲಿ ಯಾರ ಇಂದ್ರಿಯಗಳಲ್ಲಿ ಕಂಪ (ನಡುಕ) ಬೆವರಿನ ಹನಿಗಳು ತೋರುತ್ತವೋ, ಯಾರು ಶ್ರೌತ, ಮತ್ತು ಸ್ಮಾರ್ತಕರ್ಮಾಸಕ್ತರಾದ ಮತ್ತು ವಿಷ್ಣುಭಕ್ತಿಯಿಂದ ಕೂಡಿದವರನ್ನು ನೋಡಿ ಸಂತೋಷಗೊಳ್ಳುತ್ತಾರೋ, ಅವರೂ ವೈಷ್ಣವರು.

೭. ಪ್ರಪಂಚದ ರಕ್ಷಣಕ್ಕಾಗಿ ವೈಷ್ಣವನಾದವನು ಪರಿಧಾನೀಯಕ್ಕಿಂತಲೂ ಬೇರೆ ಬಟ್ಟೆಯನ್ನು ಹೊದೆಯಬಾರದು.

೮. ಬರುತ್ತಿರುವ ವಿಷ್ಣುಭಕ್ತನನ್ನು ನೋಡಿ ವಿಷ್ಣುಭಕ್ತನಾದವನು ಎದುರಿಗೆ ನಿಂತು ವಾಸುದೇವನಲ್ಲಿ ಹೇಗೋ ಹಾಗೆ ನಮಸ್ಕಾರಾದಿಗಳನ್ನು ಮಾಡುತ್ತಾನೆ.

ಸ ವೈ ಭಕ್ತ ಇತಿ ಜ್ಞೇಯಃ ಸ ಜಯೀ ಸ್ಯಾಜ್ಜಗತ್ತ್ರಯೇ ।
ರೂಕ್ಷಾಕ್ಷರಾಣಿ ಶೃಣ್ವನ್ವೈ ತಥಾ ಭಾಗವತೇರಿತಃ ॥ ೯ ॥
ಪ್ರಣಾಮಪೂರ್ವಂ ಕ್ಷಾಂತ್ಯಾ ವೈ ಯೋ ವದೇದ್ವೈಷ್ಣವೋ ಹಿ ಸಃ ।
ಗಂಧಪುಷ್ಪಾದಿಕಂ ಸರ್ವಂ ಶಿರಸಾ ಯೋ ಹಿ ಧಾರಯೇತ್ ॥೧೦॥
ಹರೇಸ್ಸರ್ವಮಿತೀತ್ಯೇವಂ ಮತ್ವಾಽಸೌ ವೈಷ್ಣವಃ ಸ್ಮೃತಃ ।
ವಿಷ್ಣುಕ್ಷೇತ್ರೇ ಶುಭಾನ್ಯೇವ ಕರೋತಿ ಸ್ನೇಹಸಂಯುತಃ ॥೧೧॥
ಪ್ರತಿಮಾಂ ಚ ಹರೇರ್ನಿತ್ಯಂ ಪೂಜಯೇತ್ಪ್ರಯತಾತ್ಮವಾನ್ ।
ವಿಷ್ಣುಭಕ್ತಸ್ಸ ವಿಜ್ಞೇಯಃ ಕರ್ಮಣಾ ಮನಸಾ ಗಿರಾ ॥೧೨॥
ನಾರಾಯಣಪರೋ ನಿತ್ಯಂ ಮಹಾಭಾಗವತೋ ಹಿ ಸಃ ।
ಭೋಜನಾರಾಧನಂ ಸರ್ವಂ ಯಥಾ ಶಕ್ತ್ಯಾಕರೋತಿ ಯಃ ॥೧೩॥

---

೯. ಕೆಟ್ಟಮಾತನ್ನು ಕೇಳಿಯೂ ಯಾವನು ನಮಸ್ಕಾರಮಾಡಿ ಸೈರಣೆಯಿಂದ ಪ್ರತಿ ಹೇಳದಿರುವನೋ ಅವನೇ ನಿಜವಾದ ಭಕ್ತನು ಮತ್ತು ವೈಷ್ಣವನು. ಅವನೇ ಮೂರು ಲೋಕದಲ್ಲಿಯೂ ಜಯಶಾಲಿಯಾದವನು.

೧೦. ಗಂಧ, ಪುಷ್ಪವೇ ಮೊದಲಾದುವನ್ನು ಯಾವನು ವಿಷ್ಣು ಸಂಬಂಧವಾದುದೆಂದು ತಿಳಿದು ತಲೆಯಲ್ಲಿ ಧರಿಸುತ್ತಾನೋ ಅವನು ವಿಷ್ಣುಭಕ್ತನು.

೧೧. ವೈಷ್ಣವನಾದವನು ವಿಷ್ಣುಕ್ಷೇತ್ರದಲ್ಲಿ ಸ್ನೇಹವಿಶಿಷ್ಟನಾಗಿ ಎಲ್ಲವೂ ಶ್ರೀಹರಿಗೆ ಸೇರಿದ್ದೆಂದು ತಿಳಿದು ಮಂಗಳಕರಗಳಾದ ಕೆಲಸ ಗಳನ್ನೇ ಮಾಡುತ್ತಾನೆ.

೧೨. ವಿಷ್ಣುವಿನ ಪ್ರತಿಮೆಯನ್ನು ಕಾಯ, ವಾಕ್, ಕರ್ಮ ದಿಂದಲೂ, ವಿಷ್ಣುಭಕ್ತನಾದವನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

೧೩. ವಿಷ್ಣುಭಕ್ತನಾದವನಿಗೆ ಯಾವನು ಭೋಜನ ಸತ್ಕಾರಾದಿ ಗಳನ್ನು ಯಥಾ ಶಕ್ತಿಯಾಗಿ ನಾರಾಯಣ ಪರನಾಗಿ ಮಾಡುತ್ತಾನೋ ಅವನು ಮಹಾಭಾಗವತನು ಇದೇ ನ್ಯಾಯವಾಗಿ ಮಾಡಬೇಕಾದುದು.

ವಿಷ್ಣುಭಕ್ತಸ್ಯ ಚ ಸದಾ ಯಥಾನ್ಯಾಯಂ ಹಿ ಕಥ್ಯತೇ ।
ನಾರಾಯಣ ಪರೋ ವಿದ್ವಾನ್ಯಸ್ಯಾನ್ನಂ ಪ್ರೀತಮಾನಸಃ ॥೧೪॥

ಅಶ್ನಾತಿ ತದ್ಧರೇರಾಸ್ಯಂ ಗತಮನ್ನಂ ನ ಸಂಶಯಃ ।
ಸ್ವಾರ್ಚನಾದಪಿ ವಿಶ್ವಾತ್ಮಾ ಪ್ರೀತೋ ಭವತಿ ಮಾಧವಃ ॥೧೫॥

ಮಹಾ ಭಾಗವತೇ ತಚ್ಚ ದೃಷ್ಟ್ವಾಽಸೌ ಭಕ್ತವತ್ಸಲಃ ।
ವಾಸುದೇವ ಪರಂ ದೃಷ್ಟ್ವಾ ವೈಷ್ಣವಂ ದಗ್ಧ ಕಿಲ್ಬಿಷಂ ॥೧೬॥

ದೇವಾಪಿ ಭೀತಾಸ್ತಂ ಯಾಂತಿ ಪ್ರಣಿಪತ್ಯ ಯಥಾಽಽಗತಂ ।
ಶ್ರೂಯತಾಂ ಹಿ ಪುರಾವೃತ್ತಂ ವಿಷ್ಣುಭಕ್ತಸ್ಯ ವೈಭವಂ ॥೧೭॥

ದೃಷ್ಟ್ವಾ ಯಮೋಽಪಿ ವೈ ಭಕ್ತಂ ವೈಷ್ಣವಂ ದಗ್ಧಕಿಲ್ಬಿಷಂ ।
ಉತ್ಥಾಯ ಪ್ರಾಂಜಲಿರ್ಭೂತ್ವಾ ನನಾಮ ಭೃಗುನಂದನಂ ॥೧೮॥

ತಸ್ಮಾತ್ಸಂ ಪೂಜಯೇದ್ಭಕ್ತ್ಯಾ ವೈಷ್ಣವಾನ್ವಿಷ್ಣುವನ್ನರಃ ।
ಸ ಯಾತಿ ವಿಷ್ಣು ಸಾಮೀಪ್ಯಂ ನಾತ್ರ ಕಾರ್ಯಾ ವಿಚಾರಣಾ ॥೧೯॥

---

೧೪. ನಾರಾಯಣನ ಭಕ್ತನಾದ ವಿದ್ವಾಂಸನು ಯಾವವನ ಅನ್ನವನ್ನು ಸಂತೋಷದಿಂದ ತಿನ್ನುತ್ತಾನೋ ಆ ಅನ್ನವು ವಿಷ್ಣು ಮುಖವನ್ನು ತಲಪಿ ವಿಷ್ಣುವೇ ಊಟಮಾಡಿದಂತಾಗುವುದರಲ್ಲಿ ಸಂಶಯವಿಲ್ಲವು.

೧೫. ತನ್ನ ಅರ್ಚನೆಯಿಂದ ಹೇಗೋ ಹಾಗೆ ಲೋಕೇಶನೂ, ಭಕ್ತವತ್ಸಲನೂ, ಆದ ಮಾಧವನು ಮಹಾಭಾಗವತರಲ್ಲಿ ಮಾಡಿದ ಸತ್ಕಾರದಿಂದಲೂ ಸಂತೋಷಗೊಳ್ಳುತ್ತಾನೆ.

೧೬. ಪಾಪರಹಿತನೂ, ವಾಸುದೇವಪರನೂ ಆದ ವೈಷ್ಣವನನ್ನು ನೋಡಿ ದೇವತೆಗಳುಕೂಡ ಹೆದರಿ ಅವನಿಗೆ ನಮಸ್ಕರಿಸಿ ಹೋಗುತ್ತಾರೆ.

೧೭–೧೮. ಹಿಂದೆ ಸಂಭವಿಸಿದ ವಿಷ್ಣುಭಕ್ತನ ಮಹಿಮೆಯಕಥೆಯನ್ನು ಕೇಳುವವರಾಗಿರಿ. ಪಾಪರಹಿತನಾದ ವಿಷ್ಣುಭಕ್ತನಾದ ಚ್ಯವನ ಋಷಿಯನ್ನು ನೋಡಿ ಯಮನೂಕೂಡ ಎದ್ದು ಅಂಜಲಿಬದ್ಧನಾಗಿ ಪ್ರಶಂಸಿಸಿದನು.

೧೯. ಆದಕಾರಣದಿಂದ ಮನುಷ್ಯನು ಭಕ್ತಿಯಿಂದ ವಿಷ್ಣುಭಕ್ತರನ್ನು, ವಿಷ್ಣುವನ್ನು ಪೂಜಿಸುವಂತೆ, ಚೆನ್ನಾಗಿ ಸತ್ಕರಿಸಬೇಕು. ಹಾಗೆ

ಅನ್ಯಭಕ್ತ ಸಹಸ್ರೇಭ್ಯೋ ವಿಷ್ಣುಭಕ್ತೋ ವಿಶಿಷ್ಯತೇ ।
ವಿಷ್ಣುಭಕ್ತ ಸಹಸ್ರೇಭ್ಯೋ ರುದ್ರಭಕ್ತೋ ವಿಶಿಷ್ಯತೇ ॥೨೦॥
ರುದ್ರ ಭಕ್ತಾತ್ಪರ ತರೋ ನಾಸ್ತಿ ಲೋಕೇ ನ ಸಂಶಯಃ ।
ತಸ್ಮಾತ್ತು ವೈಷ್ಣವಂ ಚಾಪಿ ರುದ್ರಭಕ್ತ ಮಥಾಽಪಿ ವಾ ॥೨೧॥
ಪೂಜಯೇತ್ಸರ್ವಯತ್ನೇನ ಧರ್ಮ ಕಾಮಾರ್ಥ ಮುಕ್ತಯೇ ॥೨೨॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ವಿಷ್ಣು ಭಕ್ತಕಥನಂ ನಾಮ ಚತುರ್ಥೋಽಧ್ಯಾಯಃ

---

ಸತ್ಕಾರ ಮಾಡತಕ್ಕವನು ವಿಷ್ಣುವಿನ ಸಾನಿಧ್ಯವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂದೇಹ ಪಡಬೇಕಾದುದೇ ಇಲ್ಲ.

೨೦. ಉಳಿದ ಸಾವಿರ ದೇವಭಕ್ತರಿಗಿಂತಲೂ ವಿಷ್ಣುಭಕ್ತನು ಶ್ರೇಷ್ಠನಾದವನು. ಸಾವಿರ ವಿಷ್ಣುಭಕ್ತರಿಗಿಂತಲೂ ರುದ್ರಭಕ್ತನು ಶ್ರೇಷ್ಠನು. ರುದ್ರ ಭಕ್ತರಿಗಿಂತಲೂ ಶ್ರೇಷ್ಠನಾದವನು ಈ ಲೋಕದಲ್ಲಿ ಯಾವನೊಬ್ಬನೂ ಇಲ್ಲವು. ಈ ವಿಷಯದಲ್ಲಿ ಸಂದೇಹವು ಸಲ್ಲದು.

೨೧–೨೨. ಅದಕಾರಣ ವಿಷ್ಣು ಭಕ್ತನನ್ನಾಗಲೀ ರುದ್ರ ಭಕ್ತನನ್ನಾಗಲೀ ಪ್ರಯತ್ನ ಪೂರ್ವಕವಾಗಿ ಧರ್ಮ, ಕಾಮ, ಅರ್ಥ, ಮತ್ತು ಮೋಕ್ಷಗಳನ್ನು ಪಡೆಯಲು ಅರ್ಚಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ವಿಷ್ಣುಭಕ್ತರ ಮಹಿಮೆಯ ಕಥನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
पंचमोऽध्यायः
॥ ಋಷಯ ಊಚುಃ ॥

ಐಕ್ಷ್ವಾಕುರಂಬರೀಷೋ ವೈ ವಾಸುದೇವ ಪರಾಯಣಃ ।
ಪಾಲಯಾಮಾಸ ಪೃಥಿವೀಂ ವಿಷ್ಣೋರಾಜ್ಞಾಪುರಸ್ಸರಃ ॥ ೧ ॥

ಶ್ರುತಮೇತನ್ಮಹಾಬುದ್ಧೇ ತತ್ಸರ್ವಂ ವಕ್ತುಮರ್ಹಸಿ ।
ನಿತ್ಯಂ ತಸ್ಯ ಹರೇಶ್ಚಕ್ರಂ ಶತ್ರುರೋಗ ಭಯಾದಿಕಂ ॥ ೨ ॥

ಹಂತೀತಿ ಶ್ರೂಯತೇ ಲೋಕೇ ಧಾರ್ಮಿಕಸ್ಯ ಮಹಾತ್ಮನಃ ।
ಅಂಬರೀಷಸ್ಯ ಚರಿತಂ ತತ್ಸರ್ವಂ ಬ್ರೂಹಿ ಸತ್ತಮ ॥ ೩ ॥

ಮಾಹಾತ್ಮ್ಯಮನುಭಾವಂ ಚ ಭಕ್ತಿಯೋಗಮನುತ್ತಮಂ ।
ಯಥಾವಚ್ಛ್ರೋತುಮಿಚ್ಛಾಮಃ ಸೂತ ವಕ್ತುಂ ತ್ವಮರ್ಹಸಿ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐದನೆಯ ಅಧ್ಯಾಯವು.

೧. ಓ ಮಹಾಬುದ್ಧಿಶಾಲಿಯಾದ ಸೂತನೇ, ಇಕ್ಷ್ವಾಕು ವಂಶೋತ್ಪನ್ನನಾದ ವಾಸುದೇವ ಭಕ್ತನಾದ ಅಂಬರೀಷನು ನಾರಾಯಣನ ಆಜ್ಞಾನುಸಾರವಾಗಿ ರಾಜ್ಯಭಾರವನ್ನು ಮಾಡುತ್ತಿದ್ದನೆಂದು ಕೇಳಿರುತ್ತೇವೆ. ಆ ಎಲ್ಲವನ್ನೂ ಸಮಗ್ರವಾಗಿ ಹೇಳುವವನಾಗು.

೨-೩. ಓ ಮಹಾಮಹಿಮನೇ, ಯಾವಾಗಲೂ ವಿಷ್ಣು ಚಕ್ರವು ಅವನ ಶತ್ರು, ರೋಗ, ಮತ್ತು ಭಯಾದಿಗಳನ್ನು ನಾಶಮಾಡುತ್ತಿದ್ದಿತೆಂಬುದಾಗಿಯೂ, ಧಾರ್ಮಿಕನೂ, ಮತ್ತು ಮಹಾತ್ಮನೂ ಆದ ಅಂಬರೀಷನ ಚರಿತ್ರೆಯು ಲೋಕದಲ್ಲಿ ಪ್ರಸಿದ್ಧವಾಗಿದೆ. ಆ ಎಲ್ಲವನ್ನೂ ಹೇಳು.

೪. ಓ ಸೂತನೇ, ಆ ಅಂಬರೀಷನ ಮಾಹಾತ್ಮ್ಯವನ್ನೂ ಅನುಭಾವನ್ನೂ, ಅತಿಶ್ರೇಷ್ಠವಾದ ಭಕ್ತಿಯನ್ನೂ ಸಹ ಯಥಾಕ್ರಮವಾಗಿ ಕೇಳಬೇಕೆಂದಿದ್ದೇವೆ. ನಮಗೆ ಹೇಳುವವನಾಗು.

ಶ್ರೂಯತಾಂ ಮುನಿಶಾರ್ದೂಲಾಶ್ಚರಿತಂ ತಸ್ಯ ಧೀಮತಃ ।
ಅಂಬರೀಷಸ್ಯ ಮಾಹಾತ್ಮ್ಯಂ ಸರ್ವಪಾಪ ಹರಂ ಪರಂ ॥ ೫ ॥
ತ್ರಿಶಂಕೋರ್ದಯಿತಾ ಭಾರ್ಯಾ ಸರ್ವಲಕ್ಷಣ ಶೋಭಿತಾ ।
ಅಂಬರೀಷಸ್ಯ ಜನನೀ ನಿತ್ಯಂ ಶೌಚ ಸಮನ್ವಿತಾ ॥ ೬ ॥
ಯೋಗನಿದ್ರಾ ಸಮಾರೂಢಂ ಶೇಷ ಪರ್ಯಂಕ ಶಾಯಿನಂ ।
ನಾರಾಯಣಂ ಮಹಾತ್ಮಾನಂ ಬ್ರಹ್ಮಾಂಡ ಕಮಲೋದ್ಭವಂ ॥ ೭ ॥
ತಮಸಾ ಕಾಲ ರುದ್ರಾಖ್ಯಂ ರಜಸಾ ಕನ ಕಾಂಡಜಂ ।
ಸತ್ವೇನ ಸರ್ವಗಂ ವಿಷ್ಣುಂ ಸರ್ವದೇವನಮಸ್ಕೃತಂ ॥ ೮ ॥
ಅರ್ಚಯಾ ಮಾಸ ಸತತಂ ವಾಙ್ಮನಃ ಕಾಯ ಕರ್ಮಭಿಃ ।
ಮಾಲ್ಯ ದಾನಾದಿಕಂ ಸರ್ವಂ ಸ್ವಯಮೇವಮಚೀಕರತ್ ॥ ೯ ॥

---

೫. ಎಲೈ ಮುನಿಶ್ರೇಷ್ಠರೇ, ಮಹಾಬುದ್ಧಿಶಾಲಿಯಾದ ಅಂಬರೀಷನ ಶ್ರೇಷ್ಠವಾದ, ಸಕಲ ಪಾಪಗಳನ್ನೂ ಹೋಗಲಾಡಿಸುವ, ಮಾಹಾತ್ಮ್ಯವನ್ನು ಹೇಳುತ್ತೇನೆ, ಕೇಳಿ.

೬–೮. ತ್ರಿಶಂಕುವಿನ ಪತ್ನಿಯೂ, ಸರ್ವಲಕ್ಷಣಗಳಿಂದ ಕೂಡಿದವಳೂ, ಯಾವಾಗಲೂ ಶುಚಿಯಾಗಿರತಕ್ಕವಳೂ, ಆದ ಅಂಬರೀಷನ ತಾಯಿಯು ಯೋಗನಿದ್ರೆಯಿಂದಿರುವವನೂ, ಆದಿಶೇಷನೆಂಬ ಮಂಚದ ಮೇಲೆ ಮಲಗಿರುವವನೂ, ಬ್ರಹ್ಮಾಂಡವೆಂಬ ಕಮಲಕ್ಕೆ ಉದ್ಬೋಧಕನೂ ಮಹಾತ್ಮನೂ, ತಮೋಗುಣದಿಂದ ಕಾಲರುದ್ರನೆಂದೂ, ರಜೋಗುಣದಿಂದ ಬ್ರಹ್ಮನೆಂದೂ, ಸತ್ತ್ವಗುಣದಿಂದ ಸರ್ವವ್ಯಾಪಿಯಾದ ಸಕಲ ದೇವತೆಗಳಿಂದಲೂ, ನಮಸ್ಕರಿಸಲ್ಪಡುವ ಪ್ರಭುವೆಂದೂ, ಹೇಳಿಸಿಕೊಳ್ಳುವ ನಾರಾಯಣನನ್ನು ಯಾವಾಗಲೂ, ಮನಸ್ಸು, ಮಾತು, ಶರೀರ, ಮತ್ತು ಕೆಲಸಗಳಿಂದಲೂ ಸಹ ಅರ್ಚಿಸುತ್ತಿದ್ದಳು.

೯–೧೦. ಪುಷ್ಪಾದಿಪೂಜಾ ಸಾಮಗ್ರಿಗಳನ್ನು ತಾನೇ ತರುತ್ತಿದ್ದಳು. ಗಂಧವನ್ನು ತೇದು ಇಡುವುದೂ, ಧೂಪಾದಿಗಳನ್ನು ಮಾಡುವುದೂ, ನೆಲ

ಗಂಧಾದಿ ಪೇಷಣಂ ಚೈವ ಧೂಪದ್ರವ್ಯಾದಿಕಂ ತಥಾ ।
ಭೂಮೇ ರಾಲೇಪ ನಾದೀನಿ ಹವಿಷಾಂ ಪಚನಂ ತಥಾ ॥೧೦॥

ತತ್ಕೌತುಕ ಸಮಾ ವಿಷ್ಟಾ ಸ್ವಯಮೇವ ಚಕಾರ ಸಾ ।
ಶುಭಾ ಪದ್ಮಾವತೀ ನಿತ್ಯಂ ವಾಚಾ ನಾರಾಯಣೇತಿ ವೈ ॥೧೧॥

ಅನಂತೇತ್ಯೇವ ಸಾ ನಿತ್ಯಂ ಭಾಷಮಾಣಾ ಪತಿವ್ರತಾ ।
ದಶವರ್ಷಸಹಸ್ರಾಣಿ ತತ್ಪರೇಣಾಂತರಾತ್ಮನಾ ॥೧೨॥

ಅರ್ಚಯಾಮಾಸ ಗೋವಿಂದಂ ಗಂಧಪುಷ್ಪಾದಿಭಿಃ ಶುಚಿಃ ।
ವಿಷ್ಣುಭಕ್ತಾನ್ಮಹಾಭಾಗಾನ್ ಸರ್ವಪಾಪ ವಿವರ್ಜಿತಾನ್ ॥೧೩॥

ದಾನಮಾನಾರ್ಚನೈರ್ನಿತ್ಯಂ ಧನೈ ರತ್ನೈರತೋಷಯತ್ ।
ತತಃ ಕದಾಚಿತ್ಸಾ ದೇವೀ ದ್ವಾದಶೀಂ ಸಮುಪೋಷ್ಯ ವೈ ॥೧೪॥

---

ವನ್ನು ಸಗಣಿಯಿಂದ ಸಾರಿಸುವುದು, ಮತ್ತು ಹವಿಸ್ಸನ್ನು ಬೇಯಿಸುವುದು ಇವೆಲ್ಲವನ್ನೂ ತಾನೇ ಆದರದೊಡನೆ ಮಾಡುತ್ತಿದ್ದಳು.

೧೧-೧೨. ಮಂಗಳೆಯಾದ ಪದ್ಮಾವತಿಯು ಯಾವಾಗಲೂ, ಹೇ ನಾರಾಯಣ, ಹೇ ಅನಂತ, ಎಂಬುದಾಗಿ ಹೇಳುತ್ತಾ, ಪತಿವ್ರತೆಯಾದ ಅವಳು ಹತ್ತುಸಹಸ್ರವರ್ಷಗಳು ಪರಮಾತ್ಮನಲ್ಲೇ ಲೀನವಾದ ಅಂತ ರಾತ್ಮವುಳ್ಳವಳಾಗಿ ಗೋವಿಂದನನ್ನು ಶುಚಿರ್ಭೂತಳಾಗಿ ಗಂಧಪುಷ್ಪಾದಿ ಗಳಿಂದ ಪೂಜಿಸಿದಳು.

೧೩. ಸಕಲ ಪಾಪಗಳಿಂದ ಬಿಡಲ್ಪಟ್ಟಿರುವ ವಿಷ್ಣುಭಕ್ತರಾದವರನ್ನು ದಾನಮಾನ (ಗೌರವ) ಪೂಜೆಗಳಿಂದಲೂ, ಧನಕನಕಾದಿಗಳನ್ನು ಕೊಡು ವುದರಿಂದಲೂ, ಪ್ರತಿನಿತ್ಯವೂ ಸಂತೋಷ ಪಡಿಸುತ್ತಿದ್ದಳು.

೧೪. ಹೀಗಿರಲು ಒಂದು ಸಲ ದ್ವಾದಶೀ ಉಪವಾಸ ವ್ರತವನ್ನು ಆಚರಿಸಿದವಳಾಗಿ ವಿಷ್ಣುವಿನ ಎದುರುಗಡೆಯಲ್ಲಿ ಪತಿಯೊಡನೆ ಮಲಗಿ ನಿದ್ರಿಸಿದಳು.

ಹರೇರಗ್ರೇ ಮಹಾಭಾಗಾ ಸುಷ್ವಾಪ ಪತಿನಾ ಸಹ ।
ತತ್ರ ನಾರಾಯಣೋ ದೇವಸ್ತಾಮಾಹ ಪುರುಷೋತ್ತಮಃ ॥೧೫॥
ಕಿಮಿಚ್ಛಸಿ ವರಂ ಭದ್ರೇ ಮತ್ತಸ್ತ್ವಂ ಬ್ರೂಹಿ ಭಾಮಿನಿ ।
ಸಾ ದೃಷ್ಟ್ವಾತು ವರಂ ವವ್ರೇ ಪುತ್ರೋ ಮೇ ವೈಷ್ಣವೋ ಭವೇತ್ ॥
ಸಾರ್ವಭೌಮೋ ಮಹಾತೇಜಾಃ ಸ್ವಕರ್ಮನಿರತಃ ಶುಚಿಃ ।
ತಥೇತ್ಯುಕ್ತ್ವಾ ದದೌ ತಸ್ಯೈ ಫಲಮೇಕಂ ಜನಾರ್ದನಃ ॥೧೭॥
ಸಾ ಪ್ರಬುದ್ಧಾ ಫಲಂ ದೃಷ್ಟ್ವಾ ಭರ್ತ್ರೇ ಸರ್ವಂ ನ್ಯವೇದಯತ್ ।
ಭಕ್ಷಯಾಮಾಸ ಸಂಹೃಷ್ಟಾ ಫಲಂ ತದ್ಗತಮಾನಸಾ ॥೧೮॥
ತತಃ ಕಾಲೇನ ಸಾ ದೇವೀ ಪುತ್ರಂ ಕುಲವಿವರ್ಧನಂ ।
ಅಸೂತ ಸಾ ಸದಾಚಾರಂ ವಾಸುದೇವಪರಾಯಣಂ ॥೧೯॥

---

೧೫. ಆವಾಗ ಪುರುಷಶ್ರೇಷ್ಠನಾದ ಸ್ವಾಮಿಯಾದ ನಾರಾಯಣನು ಅವಳನ್ನು ಕುರಿತು, ಎಲೌ ಮಂಗಳಾಂಗಿಯೇ, ಯಾವ ವರವನ್ನು ನನ್ನಿಂದ ಅಪೇಕ್ಷಿಸುವೆ? ಹೇಳು. ಎಂಬುದಾಗಿ ಕೇಳಿದನು.

೧೬–೧೭. ಸ್ವಪ್ನದಲ್ಲಿ ಪರಮಾತ್ಮನನ್ನು ನೋಡಿ ಅವಳು ಸಾರ್ವಭೌಮನೂ, ತೇಜಸ್ವಿಯೂ, ಯಾವಾಗಲೂ ತನ್ನ ಕೆಲಸದಲ್ಲಿ ಆಸಕ್ತನೂ, ವಿಷ್ಣು ಭಕ್ತನೂ ಆದ ಮಗನು ಬೇಕೆಂದು ವರವನ್ನು ಬೇಡಿದಳು. ಪರಮಾತ್ಮನು ನಿನ್ನ ಇಚ್ಛೆಯು ನೆರವೇರುತ್ತದೆಂದು ಹೇಳಿ ಅವಳಿಗೊಂದು ಫಲವನ್ನು ಕೊಟ್ಟನು.

೧೮. ಅನಂತರದಲ್ಲಿ ಎಚ್ಚರಗೊಂಡವಳಾಗಿ ದೇವದತ್ತವಾದ ಫಲವನ್ನು ನೋಡಿ ಪತಿಗೆ ಎಲ್ಲವನ್ನೂ ವಿವರಿಸಿದಳು. ಸಂತೋಷಗೊಂಡವಳಾಗಿ ಪತಿಯ ಅಪ್ಪಣೆಯಂತೆ ವಿಷ್ಣುವನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಆ ಫಲವನ್ನು ತಿಂದಳು.

೧೯. ಯುಕ್ತಕಾಲದಲ್ಲಿ ಆ ದೇವಿಯು ಕುಲವರ್ಧನನೂ, ಸದಾಚಾರಪರನೂ ವಾಸುದೇವಭಕ್ತನೂ ಆದ ಪುತ್ರನನ್ನು ಪ್ರಸವಿಸಿದಳು.

ಶುಭಲಕ್ಷಣ ಸಂಪನ್ನಂ ಚಕ್ರಾಂಕಿತ ತನೂರುಹಂ ।
ಜಾತಂ ದೃಷ್ಟ್ವಾ ಪಿತಾ ಪುತ್ರಂ ಕ್ರಿಯಾಸ್ಸರ್ವಾಶ್ಚಕಾರ ವೈ ॥೨೦॥
ಅಂಬರೀಷ ಇತಿ ಖ್ಯಾತೋ ಲೋಕೇ ಸಮಭವತ್ಪ್ರಭುಃ ।
ಪಿತರ್ಯುಪರತೇ ಶ್ರೀಮಾನಭಿಷಿಕ್ತೋ ಮಹಾಮುನಿಃ॥ ॥೨೧॥
ಮಂತ್ರಿಷ್ವಾಧಾಯ ರಾಜ್ಯಂ ಚ ತಪ ಉಗ್ರಂ ಚಕಾರ ಸಃ ।
ಸಂವತ್ಸರ ಸಹಸ್ರಂ ವೈ ಜಪನ್ನಾರಾಯಣಂ ಪ್ರಭುಃ ॥೨೨॥
ಹೃತ್ಪುಂಡರೀಕ ಮಧ್ಯಸ್ಥಂ ಸೂರ್ಯಮಂಡಲ ಮಧ್ಯತಃ ।
ಶಂಖ ಚಕ್ರಗದಾಪದ್ಮಂ ಧಾರಯಂತಂ ಚತುರ್ಭುಜಂ ॥೨೩॥

---

೨೦. ಸರ್ವಲಕ್ಷಣಗಳಿಂದಲೂ ಸಂಯುಕ್ತನೂ, ಚಕ್ರದಂತೆ ಗುರುತಿರುವ ಕೇಶಪಾಶ ಉಳ್ಳವನೂ,ಆಗಿ ಹುಟ್ಟಿದ ಪುತ್ರನನ್ನು ಕಂಡು ತಂದೆಯು ಜಾತಕರ್ಮಾದಿ ಸಂಸ್ಕಾರ ಕರ್ಮಗಳನ್ನು ಮಾಡಿದನು.

೨೧. ಪ್ರಪಂಚದಲ್ಲಿ ವಿಷ್ಣು ಭಕ್ತನೆಂದು ಪ್ರಸಿದ್ಧನಾಗಿ ತಂದೆಯ ಅನಂತರದಲ್ಲಿ ಕಾಂತಿಯುಕ್ತನಾದ, ಮಹಾಮುನಿ ಸದೃಶನಾದ ಅಂಬರೀಷರಾಜನು ಅಭಿಷಿಕ್ತನಾದನು.

೨೨-೨೩. ಅನಂತರದಲ್ಲಿ ರಾಜನು ರಾಜ್ಯವನ್ನು ಮಂತ್ರಿಗಳಲ್ಲಿರಿಸಿ, ತಾನು ಹೃದಯವೆಂಬ ಪುಂಡರೀಕ ಮಧ್ಯದಲ್ಲಿರುವ ಸೂರ್ಯಮಂಡಲ ಮಧ್ಯವರ್ತಿಯಾಗಿರುವ, ಶಂಖಚಕ್ರಾದ್ಯಾಯುಧಗಳನ್ನು ಧರಿಸಿರುವ, ನಾಲ್ಕು ಭುಜಗಳುಳ್ಳ, ಪರಿಶುದ್ಧವಾದ ಸ್ವರ್ಣಕಾಂತಿ ವಿಶಿಷ್ಟವಾದ, ಬ್ರಹ್ಮ, ವಿಷ್ಣು, ಮತ್ತು ಶಿವರೆಂಬ ಸ್ವರೂಪನಾಗಿರುವ, ಸಕಲಾಭರಣಗಳಿಂದ ಭೂಷಿತನಾಗಿರುವ, ಪೀತಾಂಬರವನ್ನು ಧರಿಸಿರುವ, ಶ್ರೀವತ್ಸವೆಂಬ ಲಾಂಛನಯುಕ್ತವಾದ ಹೃದಯವುಳ್ಳ, ಪುರುಷಶ್ರೇಷ್ಠನಾದ, ಪುರಾಣನಾದ,ಪ್ರಭುವಾದ,ನಾರಾಯಣನನ್ನು ಉದ್ದೇಶಿಸಿ ಸಹಸ್ರವರ್ಷಗಳವರೆಗೆ, ಘೋರವಾದ ತಪಸ್ಸನ್ನುಮಾಡಿದನು.

ಶ್ರೀವತ್ಸವಕ್ಷಸಂ ದೇವಂ ಪುರುಷಂ ಪುರುಷೋತ್ತಮಂ ।
ತತೋ ಗರುಡಮಾರುಹ್ಯ ಸರ್ವದೇವೈರಭಿಷ್ಟುತಃ ॥೨೪॥
ಶುದ್ಧಜಾಂಬೂನದ ನಿಭಂ ಬ್ರಹ್ಮ ವಿಷ್ಣು ಶಿವಾತ್ಮಕಂ ।
ಸರ್ವಾಭರಣ ಸಂಯುಕ್ತಂ ಪೀತಾಂಬರ ಧರಂ ಪ್ರಭುಂ ॥೨೫॥
ಆಜಗಾಮ ಸ ವಿಶ್ವಾತ್ಮಾ ಸರ್ವಲೋಕನಮಸ್ಕೃತಃ
ಐರಾವತ ಮಿವಾಚಿಂತ್ಯಂ ಕೃತ್ವಾ ವೈ ಗರುಡಂ ಹರಿಃ ॥೨೬॥
ಸ್ವಯಂ ಶಕ್ರ ಇವಾಸೀನಃ ತಮೂಹ ನೃಪಸತ್ತಮಂ ।
ಇಂದ್ರೋಽಹಮಸ್ಮಿ ಭದ್ರಂ ತೇ ಕಿಂ ದದಾಮಿ ವರಂ ಚ ತೇ ॥೨೭॥
ಸರ್ವಲೋಕೇಶ್ವರೋಽಹಂ ತ್ವಾಂ ರಕ್ಷಿತುಂ ಸಮುಪಾಗತಃ ।
॥ ಅಂಬರೀಷ ಉವಾಚ ॥
ನಾಹಂ ತ್ವಾಮಭಿಸಂಧಾಯ ತಪ ಆಸ್ಥಿತವಾನಿಹ ॥೨೮॥

---

೨೪–೨೫. ಅನಂತರದಲ್ಲಿ ಸಕಲ ದೇವತೆಗಳಿಂದಲೂ ಸುತ್ತುವರಿಯಲ್ಪಟ್ಟವನಾಗಿ ಸಕಲರಿಂದಲೂ ನಮಸ್ಕರಿಸಲ್ಪಡುತ್ತಾ ಆ ಪರಮಾತ್ಮನು ಅಂಬರೀಷನಲ್ಲಿಗೆ ಬಂದನು.

೨೬–೨೭. ವಿಷ್ಣುವು ಗರುಡನನ್ನು ಐರಾವತದೋಪಾದಿಯಲ್ಲಿ ಪರಿವರ್ತಿಸಿ, ಇಂದ್ರನಂತೆ ಆದರಮೇಲೆ ಕುಳಿತು, ಆ ರಾಜನನ್ನು ಕುರಿತು ಹೀಗೆ ಹೇಳಿದನು. ಎಲೈ ನೃಪಶ್ರೇಷ್ಠನೇ, ಇಂದ್ರನೂ, ಸರ್ವಲೋಕ ಪಾಲನೂ ಆದ ನಾನು ಬಂದಿರುತ್ತೇನೆ. ನಿನಗೆ ಅಭೀಷ್ಟವಾದ ವರವನ್ನು ಕೇಳಿಕೋ. ಕೊಡುತ್ತೇನೆ. ನಿನಗೆ ಮಂಗಳವಾಗಲಿ.

೨೮–೨೯. ಅಂಬರೀಷನು ಹೇಳಿದನು.:—ಎಲೈ ಇಂದ್ರನೇ, ನಿನ್ನನ್ನು ಕುರಿತು ನಾನು ತಪಸ್ಸನ್ನು ಮಾಡಲಿಲ್ಲ. ನೀನು ಕೊಡುವುದನ್ನೂಕೂಡ ನಾನು ತೆಗೆದುಕೊಳ್ಳುವುದಿಲ್ಲ. ನೀನು ಬಂದಹಾಗೆ ಹೋಗುವವನಾಗು. ನನ್ನ ಸ್ವಾಮಿಯು ಶ್ರೀಮನ್ನಾರಾಯಣನು. ನಾನು

ತ್ವಯಾ ದತ್ತಂ ಚ ನೇಷ್ಯಾಮಿ ಗಚ್ಛ ಶಕ್ರ ಯಥಾಸುಖಂ ।
ಮಮ ನಾರಾಯಣೋ ನಾಥಸ್ತನ್ನ ಮಾಮಿ ಜಗತ್ಪತಿಂ ॥೨೯॥

ಗಚ್ಛೇಂದ್ರ ಮಾಕೃಥಾಸ್ತ್ವತ್ರ ಮಮ ಬುದ್ಧಿ ವಿಲೋಪನಂ ।
ತತಃ ಪ್ರಹಸ್ಯ ಭಗವಾನ್ ಸ್ವರೂಪ ಮಕರೋದ್ಧರಿಃ ॥೩೦॥

ಶಾರ್ಙ್ಗಚಕ್ರಗದಾಪಾಣಿಃ ಖಡ್ಗಹಸ್ತೋ ಜನಾರ್ದನಃ ।
ಗರುಡೋಪರಿ ಸರ್ವಾತ್ಮಾ ನೀಲಾಚಲ ಇವಾಪರಃ ॥೩೧॥

ದೇವಗಂಧರ್ವ ಸಂಘೈಶ್ಚ ಸ್ತೂಯಮಾನಃ ಸಮಂತತಃ ।
ಪ್ರಣಮ್ಯ ಸ ಚ ಸಂತುಷ್ಟಸ್ತುಷ್ಟಾವ ಗರುಡಧ್ವಜಂ ॥೩೨॥

ಪ್ರಸೀದ ಲೋಕನಾಥೇಶ ಮಮ ನಾಥ ಜನಾರ್ದನ ।
ಕೃಷ್ಣ ವಿಷ್ಣೋ ಜಗನ್ನಾಥ ಸರ್ವಲೋಕ ನಮಸ್ಕೃತ ॥೩೩॥

---

ಅವನಿಗಾಗಿ ತಪಸ್ಸನ್ನು ಆಚರಿಸುತ್ತಿರುತ್ತೇನೆ. ಓ ಇಂದ್ರನೇ, ನನಗೆ ಬುದ್ಧಿ ಮೋಹವನ್ನುಂಟುಮಾಡದೇ ಹೊರಟು ಹೋಗುವವನಾಗು.

೩೦–೩೧. ಅನಂತರದಲ್ಲಿ ವಿಷ್ಣುವು ನಕ್ಕು ತನ್ನ ಸ್ವರೂಪವಾದ ಶಾರ್ಙ್ಗ ಮುಂತಾದ ಆಯುಧಗಳಿಂದ ವಿಶಿಷ್ಟವಾದ ಕೈಗಳುಳ್ಳವನಾಗಿಯೂ, ಗರುಡನಮೇಲೆ ಕುಳಿತು ನೀಲಾಚಲ ಸದೃಶವಾದ ವರ್ಣದಿಂದ ಕೂಡಿದ ದೇಹ ಉಳ್ಳವನಾಗಿಯೂ, ದೇವತೆಗಳಿಂದಲೂ, ಮತ್ತು ಗಂಧರ್ವರಿಂದಲೂ ಸುತ್ತುವರಿಯಲ್ಪಟ್ಟು ಸ್ತೋತ್ರ ಮಾಡಲ್ಪಡುವವನಾಗಿಯೂ, ಇರುವ ತನ್ನ ರೂಪವನ್ನು ತೋರಿಸಿದನು.

೩೨–೩೩. ಅಂಬರೀಷನು ಎದುರಿಗೆ ಪ್ರತ್ಯಕ್ಷವಾಗಿರುವ ವಿಷ್ಣುವನ್ನು ನೋಡಿ ಸಂತಸಗೊಂಡವನಾಗಿ ನಮಸ್ಕರಿಸಿ ಸ್ತೋತ್ರಮಾಡ ತೊಡಗಿದನು. ಓ ಜನಾರ್ದನನೇ, ಲೋಕಪಾಲಕರೆಲ್ಲರಿಗೂ ಪ್ರಭುವಾದವನೇ, ನನ್ನಸ್ವಾಮಿಯೇ, ಪ್ರಸನ್ನನಾಗು. ಸಮಸ್ತಲೋಕಗಳಲ್ಲಿರುವವರಿಂದಲೂ ನಮಸ್ಕರಿಸಲ್ಪಡುವವನೇ, ಕೃಷ್ಣನೇ, ಪ್ರಭುವೇ, ಪ್ರಸನ್ನನಾಗು.

ತ್ವಮಾದಿ ಸ್ತ್ವಮನಾದಿ ಸ್ತ್ವಮನಂತಃ ಪುರುಷಃ ಪ್ರಭುಃ ।
ಅಪ್ರಮೇಯಃ ವಿಭುಃ ವಿಷ್ಣುರ್ಗೋವಿಂದಃ ಕಮಲೇಕ್ಷಣಃ ॥೩೪॥
ಮಹೇಶ್ವರಾಂ ಗಜಃ ಮಧ್ಯೇ ಪುಷ್ಕರಃ ಖಗಮಃ ಖಗಃ ।
ಕವ್ಯವಾಹಃ ಕಪಾಲೀ ತ್ವಂ ಹವ್ಯವಾಹಃ ಪ್ರಭಂಜನಃ ॥೩೫॥
ಆದಿದೇವಃ ಕ್ರಿಯಾನಂದಃ ಪರಮಾತ್ಮಾಽತ್ಮನಿ ಸ್ಥಿತಃ ।
ತ್ವಾಂ ಪ್ರಪನ್ನೋಽಸ್ಮಿ ಗೋವಿಂದ ಜಯ ದೇವಕಿನಂದನ ॥೩೬॥
ಜಯ ದೇವ ಜಗನ್ನಾಥ ಪಾಹಿ ಮಾಂ ಪುಷ್ಕರೇಕ್ಷಣ ।
ನಾನ್ಯಾ ಗತಿ ಸ್ತ್ವದನ್ಯಾ ಮೇ ತ್ವಮೇವ ಶರಣಂ ಮಮ ॥೩೭॥

---

೩೪. ನೀನೇ ಆದಿಯು (ಮೊದಲಿಗನು). ನೀನೇ ಆದಿ ರಹಿತನೂ ಮತ್ತು ಅಂತ್ಯವಿಲ್ಲದವನು. ಪ್ರಭುವಾದವನು. ನೀನೇ ಪುರುಷನು. ನಿನ್ನ ಮಹಿಮೆಯನ್ನು ತಿಳಿಯಲಸದಳವು. ಆದ ಕಾರಣವೇ ನೀನು ವಿಭುಃ ವಿಷ್ಣುವು, ಕಮಲಕ್ಕೆ ಸದೃಶವಾದ ಕಣ್ಣುಳ್ಳವನು.

೩೫–೩೬. ಶಿವನ ಅಂಗದಿಂದ ಉತ್ಪನ್ನನಾದವನು, ನಾಭಿಯಲ್ಲಿ ಕಮಲವುಳ್ಳವನು, ಹೃದಯಾಕಾಶದಲ್ಲಿ ಯೋಗಿಗಳಿಂದ ಹೊಂದಲ್ಪಡತಕ್ಕವನು, ನೀನು ಸುಪರ್ಣನು, ಪಿತೃಗಳ ಉದ್ದೇಶದಿಂದ ಅರ್ಪಿಸಿದ ಹವಿಸ್ಸನ್ನು ಒಯ್ಯುವವನು. ಭೈರವಸ್ವರೂಪನು ಮತ್ತು ದೇವತಾ ಉದ್ದೇಶದಿಂದ ಅರ್ಪಿಸಲ್ಪಟ್ಟ ಹವಿಸ್ಸನ್ನು ಒಯ್ಯುತ್ತೀಯಾದ್ದರಿಂದ ಹವ್ಯವಾಹನನು, ನೀನೇ ಪ್ರಭಂಜನನು, ಆದಿದೇವನು, ಸತ್ಕರ್ಮದಿಂದ ಸಂತೋಷಗೊಳ್ಳುವವನೂ, ಮತ್ತು ಪರಮಾತ್ಮನು. ಓ ಗೋವಿಂದನೇ, ದೇವಕೀಪುತ್ರನೇ, ನಿನಗೆ ಜಯವಾಗಲಿ. ನಾನು ನಿನ್ನ ಮರೆಹೊಕ್ಕಿರುತ್ತೇನೆ. ಓ ಕಮಲ ನೇತ್ರನೇ, ಜಗನ್ನಾಥನೇ, ನನ್ನನ್ನು ರಕ್ಷಿಸುವವನಾಗು.

೩೭–೩೮. ನಿನಗಿಂತಲೂ ನನಗೆ ಬೇರೇಗತಿಯಿಲ್ಲವು, ನೀನೇ ನನಗೆ

॥ ಸೂತ ಉವಾಚ ॥

ತಮಾಹ ಭಗವಾನ್ವಿಷ್ಣುಃ ಕಿಂ ತೇ ಹೃದಿ ಚಿಕೀರ್ಷಿತಂ ।
ತತ್ಸರ್ವಂ ತೇ ಪ್ರದಾಸ್ಯಾಮಿ ಭಕ್ತೋಽಸಿ ಮಮ ಸುವ್ರತ ॥೩೮॥
ಭಕ್ತಪ್ರಿಯೋಽಹಂ ಸತತಂ ತಸ್ಮಾದ್ದಾತು ಮಿಹಾಗತಃ ।

॥ ಅಂಬರೀಷ ಉವಾಚ ॥

ಲೋಕನಾಥಪರಾನಂದ ನಿತ್ಯಂ ಮೇ ವರ್ತತೇ ಮತಿಃ ॥೩೯॥
ವಾಸುದೇವಪರೋ ನಿತ್ಯಂ ವಾಙ್ಮನಃ ಕಾಯ ಕರ್ಮಭಿಃ ।
ಯಥಾ ತ್ವಂ ದೇವದೇವಸ್ಯ ಭವಸ್ಯ ಪರಮಾತ್ಮನಃ ॥೪೦॥
ತಥಾ ಭವಾಮ್ಯಹಂ ವಿಷ್ಣೋ ತವ ದೇವ ಜನಾರ್ದನ ।
ಪಾಲಯಿಷ್ಯಾಮಿ ಪೃಥಿವೀಂ ಕೃತ್ವಾ ವೈ ವೈಷ್ಣವಂ ಜಗತ್ ॥೪೧॥
ಯಜ್ಞಹೋಮಾರ್ಚನೈಶ್ಚೈವ ತರ್ಪಯಾಮಿ ಸುರೋತ್ತಮಾನ್ ।
ವೈಷ್ಣವಾನ್ಪಾಲಯಿಷ್ಯಾಮಿ ನಿಹನಿಷ್ಯಾಮಿ ಶಾತ್ರವಾನ್ ॥೪೨॥

---

ರಕ್ಷಕನು ಎಂದನು. ಸೂತನು ಹೇಳಿದನು. ಆಗ ನಾರಾಯಣನು ಅಂಬರೀಷನನ್ನು ಕುರಿತು, ಹೀಗೆಂದನು. ನೀನು ನನ್ನ ಭಕ್ತನಾಗಿರುವೆ. ನಿನ್ನ ಹೃದಯದಲ್ಲಿರುವ ಅಪೇಕ್ಷೆಗಳನ್ನು ಹೇಳುವವನಾಗು. ಅದೆಲ್ಲವನ್ನೂ ಪೂರೈಸುತ್ತೇನೆ.

೩೯–೪೦. ಅಂಬರೀಷನು ಹೇಳಿದನು. :— ಓ ವ್ರತಶೀಲನೇ, ನೀನು ಭಕ್ತಪ್ರಿಯನೆಂದು ಲೋಕದಲ್ಲಿಪ್ರಸಿದ್ಧನು. ಓ ಪ್ರಭುವೇ, ಶ್ರೇಷ್ಠವಾದ ಆನಂದಸ್ವರೂಪನೇ, ನನ್ನ ಬದ್ಧಿಯು ಯಾವಾಗಲೂ ವಾಸುದೇವನಲ್ಲೇ ಆಸಕ್ತವಾಗಿರುತ್ತದೆ. ಯಾವಾಗಲೂ, ಶರೀರ, ಮಾತು ಮನಸ್ಸು ಮತ್ತು ಕೆಲಸಗಳಿಂದಲೂ, ನೀನು ಪರಮಾತ್ಮನೂ, ದೇವದೇವನೂ, ಆದ ಈಶ್ವರನಲ್ಲಿ ಹೇಗೆ ಇರುವೆಯೋ ಹಾಗೆ, ಓ ಜನಾರ್ದನನೇ, ಸ್ವಾಮಿಯೇ, ನಾನೂ ನಿನ್ನಲ್ಲಿ ಭಕ್ತನಾಗಿರುವೆನು.

೪೧–೪೨. ಪ್ರಪಂಚವನ್ನು ವಿಷ್ಣುಪೂಜೆಯಲ್ಲಿ ಆಸಕ್ತವಾದದ್ದನ್ನಾಗಿ ಮಾಡಿ ಭೂಮಿಯನ್ನು ಪಾಲಿಸುವೆನು. ಜಪಹೋಮ ಯಜ್ಞಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸುತ್ತೇನೆ. ವಿಷ್ಣುಭಕ್ತರನ್ನು ಕಾಪಾಡುವೆನು. ದೇವರಲ್ಲೂ, ಭಕ್ತರಲ್ಲೂ, ದ್ವೇಷವುಳ್ಳವರನ್ನು ನಾಶಪಡಿಸುವೆನು.

ಲೋಕತಾಪ ಭಯೋ ಭೀತ ಇತಿ ಮೇ ಧೀಯತೇ ಮತಿಃ ।
॥ ಶ್ರೀ ಭಗವಾನುವಾಚ ॥
ಏವಮಸ್ತು ಯಥೇಚ್ಛಂ ವೈ ಚಕ್ರಮೇತತ್ಸುದರ್ಶನಂ ॥೪೩॥
ಪುರಾ ರುದ್ರಪ್ರಸಾದೇನ ಲಬ್ಧಂ ವೈ ದುರ್ಲಭಂ ಮಯಾ ।
ಋಷಿಶಾಪಾದಿಕಂ ದುಃಖಂ ಶತ್ರುರೋಗಾದಿಕಂ ತಥಾ ॥೪೪॥
ನಿಹನಿಷ್ಯತಿ ತೇ ನಿತ್ಯ ಮಿತ್ಯುಕ್ತ್ವಾಂತರಧೀಯತ ।
॥ ಸೂತ ಉವಾಚ ॥
ತತಃ ಪ್ರಣಮ್ಯ ಮುದಿತೋ ರಾಜಾ ನಾರಾಯಣಂ ಪ್ರಭುಂ ॥೪೫॥
ಪ್ರವಿಶ್ಯ ನಗರೀಂ ರಮ್ಯಾಮಯೋಧ್ಯಾಂ ಪರ್ಯಪಾಲಯತ್ ।
ಬ್ರಾಹ್ಮಣಾ ದೀಂಶ್ಚ ವರ್ಣಾಂಶ್ಚ ಸ್ವೇಸ್ವೇ ಕರ್ಮಣ್ಯಯೋಜಯತ್ ॥
ನಾರಾಯಣ ಪರೋ ನಿತ್ಯಂ ವಿಷ್ಣುಭಕ್ತಾನ ಕಲ್ಮಷಾನ್ ।
ಪಾಲಯಾಮಾಸ ಹೃಷ್ಟಾತ್ಮಾ ವಿಶೇಷೇಣ ಜನಾಧಿಪಃ ॥೪೭॥

---

೪೩–೪೪. ಭಕ್ತಜನರಿಗೆ ತಾಪತ್ರಯದಿಂದ ಉಂಟಾಗುವ ಭಯದಲ್ಲಿ ನನ್ನ ಬುದ್ಧಿಯು ಧೈರ್ಯಉಳ್ಳದ್ದಾಗಿ ಅದನ್ನು ನಿವಾರಿಸುವ ಕಾರ್ಯದಲ್ಲಿ ನಿಲ್ಲಿಸಲ್ಪಡುತ್ತದೆ. ನಾರಾಯಣನು ಹೇಳಿದನು:—ನೀನು ಅಪೇಕ್ಷಿಸಿದುದೆಲ್ಲವೂ ಲಭಿಸಲಿ. ಹಿಂದೆ ರುದ್ರನ ಅನುಗ್ರಹದಿಂದ ನನ್ನಿಂದ ಪಡೆಯಲ್ಪಟ್ಟ ದುರ್ಲಭವಾದ ಈ ಸುದರ್ಶನಚಕ್ರವು ಋಷಿಶಾಪಾದಿಗಳಿಂದ ಪ್ರಾಪ್ತವಾದ ದುಃಖವನ್ನೂ, ಶತ್ರು ಮತ್ತು ರೋಗವೇ ಮೊದಲಾದುದರಿಂದ ಉಂಟಾಗಬಹುದಾದ ನಿನ್ನ ದುಃಖಗಳನ್ನೂ ನಾಶಮಾಡುತ್ತದೆ. ಎಂದು ಹೇಳಿ, ಕೊಟ್ಟು, ಅಂತರ್ಧಾನನಾದನು.

೪೫. ಸೂತನು ಹೇಳಿದನು.—ಅನಂತರದಲ್ಲಿ ಸಂತೋಷಗೊಂಡ ರಾಜನು ನಾರಾಯಣನಿಗೆ ನಮಸ್ಕರಿಸಿ ಮನೋಹರವಾದ ಅಯೋಧ್ಯಾಪುರವನ್ನು ಹೊಕ್ಕು ಚೆನ್ನಾಗಿ ರಾಜ್ಯಭಾರವನ್ನು ಮಾಡಿದನು.

೪೬–೪೭ ಬ್ರಾಹ್ಮಣಾದಿ ವರ್ಣಗಳನ್ನು ತಮ್ಮತಮ್ಮ ಕೆಲಸದಲ್ಲಿ ನಿಯೋಗಿಸಿದನು. ತಾನು ನಾರಾಯಣಭಕ್ತನಾಗಿ, ಪಾಪಶೂನ್ಯರಾದ ವಿಷ್ಣುಭಕ್ತರನ್ನು ತುಂಬ ಸಂತೋಷಗೊಂಡ ಮನಸ್ಸುಳ್ಳವನಾಗಿ ಪಾಲಿಸುತ್ತಿದ್ದನು.

ಅಶ್ವಮೇಧಶತೈರಿಷ್ಟ್ವಾ ವಾಜಪೇಯ ಶತೇನ ಚ ।
ಪಾಲಯಾಮಾಸ ಪೃಥಿವೀಂ ಸಾಗರಾ ವರಣಾ ಮಿಮಾಂ ॥೪೮॥
ಗೃಹೇ ಗೃಹೇ ಹರಿಸ್ತಸ್ಥೌ ವೇದಘೋಷೋ ಗೃಹೇಗೃಹೇ ।
ನಾಮಘೋಷೋ ಹರೇಶ್ಚೈವ ಯಜ್ಞಘೋಷಸ್ತಥೈವ ಚ ॥೪೯॥
ಅಭವನ್ ನೃಪಶಾರ್ದೂಲೇ ತಸ್ಮಿನ್ರಾಜ್ಯಂ ಪ್ರಶಾಸತಿ ।
ನಾಸಸ್ಯಾ ನಾತೃಣಾ ಭೂಮಿರ್ನ ದುರ್ಭಿಕ್ಷಾದಿ ಭಿರ್ಯುತಾ ॥೫೦॥
ರೋಗಹೀನಾಃ ಪ್ರಜಾ ನಿತ್ಯಂ ಸರ್ವೋಪದ್ರವ ವರ್ಜಿತಾಃ ।
ಅಂಬರೀಷೋ ಮಹಾತೇಜಾಃ ಪಾಲಯಾಮಾಸ ಮೇದಿನೀಂ ॥೫೧॥
ತಸ್ಯೈವಂ ವರ್ತಮಾನಸ್ಯ ಕನ್ಯಾ ಕಮಲಲೋಚನಾ ।
ಶ್ರೀಮತೀ ನಾಮ ವಿಖ್ಯಾತಾ ಸರ್ವಲಕ್ಷಣ ಸಂಯುತಾ॥ ೫೨॥

---

೪೮. ನೂರು ಅಶ್ವಮೇಧಯಜ್ಞಗಳನ್ನೂ, ನೂರು ವಾಜಪೇಯ ಯಾಗಗಳನ್ನೂ ಸಹ ಮಾಡಿ, ಸಾಗರವೇ ಆವರಣ (ಆಸೀಮಾ) ವಾಗಿ ಉಳ್ಳ ಈ ಭೂಮಿಯನ್ನು ಕಾಪಾಡಿದನು.

೪೯. ಪ್ರತಿಮನೆಯಲ್ಲಿಯೂ ಹರಿಪೂಜೆಯೂ, ಹರಿನಾಮಸ್ಮರಣೆಯೂ, ವೇದಾಧ್ಯಯನದ ಘೋಷವೂ ಯಜ್ಞಗಳಲ್ಲಿನ ಮಂತ್ರ ಘೋಷವೂ, ಸಹ ಆ ರಾಜಶ್ರೇಷ್ಠನು ರಾಜ್ಯಭಾರಮಾಡುತ್ತಿರಲು ನಡೆಯುತ್ತಿದ್ದವು.

೫೦–೫೧. ಮಹಾತೇಜಸ್ವಿಯಾದ ಅಂಬರೀಷನು ರಾಜ್ಯಭಾರ ಮಾಡುತ್ತಿರಲು ಭೂಮಿಯು ಯಾವಾಗಲೂ ದುರ್ಭಿಕ್ಷವಿಲ್ಲದ್ದಾಗಿ ಸಸ್ಯ ಸಮೃದ್ಧಿಯಿಂದ ಕೂಡಿತ್ತು. ಅವನ ರಾಜ್ಯದಲ್ಲಿ ಯಾವಾಗಲೂ ಪ್ರಜೆಗಳು ಆರೋಗ್ಯಉಳ್ಳವರಾಗಿಯೂ, ವಿವಿಧವಾದ ಈತಿಬಾಧೆಗಳೊಂದೂ ಇಲ್ಲದೆ ಸುಖವಾಗಿದ್ದರು.

೫೨. ಈ ರೀತಿಯಾಗಿರುವ ಆ ರಾಜನಿಗೆ ಸಕಲ ಶುಭಲಕ್ಷಣಗಳಿಂದ ಕೂಡಿದವಳೂ, ಕಮಲದಂತೆ ನೇತ್ರವುಳ್ಳವಳೂ, ಆದ ಶ್ರೀಮತಿಯೆಂದು ಪ್ರಸಿದ್ಧಳಾದ ಮಗಳಾದಳು.

ಪ್ರದಾನ ಸಮಯಂ ಪ್ರಾಪ್ತಾ ದೇವಮಾಯೇವ ಶೋಭನಾ ।
ತಸ್ಮಿನ್ಕಾಲೇ ಮುನಿಃ ಶ್ರೀಮಾನ್ನಾರದೋಽಭ್ಯಾಗತಶ್ಚ ವೈ ॥೫೩॥
ಅಂಬರೀಷಸ್ಯ ರಾಜ್ಞೋ ವೈ ಪರ್ವತಶ್ಚ ಮಹಾಮತಿಃ ।
ತಾವುಭಾವಾಗತೌ ದೃಷ್ಟ್ವಾ ಪ್ರಣಿಪತ್ಯ ಯಥಾವಿಧಿ ॥೫೪॥
ಅಂಬರೀಷೋ ಮಹಾತೇಜಾಃ ಪೂಜಯಾಮಾಸ ತಾವೃಷೀ ।
ಕನ್ಯಾಂ ತಾಂ ರಮಮಾಣಾಂ ವೈ ಮೇಘಮಧ್ಯೇ ಶತಹ್ರದಾಂ ॥೫೫॥
ಪ್ರಾಹ ತಾಂ ಪ್ರೇಕ್ಷ್ಯ ಭಗವಾನ್ನಾರದಃ ಸಸ್ಮಿತಸ್ತದಾ ।
ಕೇಯಂ ರಾಜಾ ಮಹಾಭಾಗಾ ಕನ್ಯಾ ಸುರಸುತೋಪಮಾ ॥೫೬॥
ಬ್ರೂಹಿ ಧರ್ಮ ಭೃತಾಂ ಶ್ರೇಷ್ಠ ಸರ್ವಲಕ್ಷಣ ಶೋಭಿತಾ ।

॥ ರಾಜೋವಾಚ ॥

ದುಹಿತೇಯಂ ಮಮ ವಿಭೋ ಶ್ರೀಮತೀ ನಾಮ ನಾಮತಃ ॥೫೭॥

---

೫೩. ವಿವಾಹ ಕಾಲವು ಪ್ರಾಪ್ತವಾಗಲು ಆ ಮಂಗಳಾಂಗಿಯು ದೇವಮಾಯೆಯೋ ಎಂಬಂತೆ ಸೌಂದರ್ಯ ಯುಕ್ತಳಾಗಿದ್ದಳು. ಆ ಸಮಯಕ್ಕೆ ಸರಿಯಾಗಿ ಅಂಬರೀಷನಲ್ಲಿಗೆ ನಾರದ ಮುನಿಯೂ ಮತ್ತು ಪರ್ವತಮುನಿಯೂ, ಇಬ್ಬರೂ ಬಂದರು.

೫೪. ಮಹಾತೇಜೋವಂತನಾದ ಅಂಬರೀಷನು ಹಾಗೆ ಬಂದಂಥ ಇಬ್ಬರು ಮಹರ್ಷಿಗಳನ್ನೂ ನಮಸ್ಕರಿಸಿ ವಿಧಿವತ್ತಾಗಿ ಪೂಜಿಸಿದನು.

೫೫ ಮೇಘಗಳ ಮಧ್ಯದಲ್ಲಿರುವ ಮಿಂಚಿನಂತೆ ಮನೋಮೋಹಕಳಾದ ಆ ಹುಡುಗಿಯನ್ನು ನೋಡಿ ಪೂಜ್ಯನಾದ ನಾರದನು ನಗುತ್ತಾ ಹೇಳಿದನು.

೫೬. ಎಲೈ ಧರ್ಮಿಷ್ಠರೊಳಗೆ ಶ್ರೇಷ್ಠನಾದವನೇ, ಸಕಲ ಲಕ್ಷಣಗಳಿಂದಲೂ ಪರಿಶೋಭಿತಳಾದ ದೇವ ಕನ್ಯೆಯೋಪಾದಿಯಲ್ಲಿರುವ, ಮಹಾಭಾಗ್ಯಶಾಲಿಯಾದ ಈ ಕನ್ಯೆಯು ಯಾರು? ಹೇಳುವವನಾಗು.

೫೭. ರಾಜನು ಹೇಳಿದನು.—ಸ್ವಾಮಿಯೇ, ಶ್ರೀಮತಿಯೆಂಬ ಹೆಸರಿನಿಂದ ಪ್ರಸಿದ್ಧಳಾದ ಇವಳು ನನ್ನ ಮಗಳು. ವಿವಾಹಸಮಯವು ಪ್ರಾಪ್ತವಾಗಿದೆ. ಇವಳು ವರನನ್ನು ಹುಡುಕುತ್ತಿರುತ್ತಾಳೆ.

ಪ್ರದಾನ ಸಮಯಂ ಪ್ರಾಪ್ತಾ ವರಮನ್ವೇಷತೇ ಶುಭಾ ।
ಇತ್ಯುಕ್ತೋ ಮುನಿಶಾರ್ದೂಲಸ್ತ್ವಾವೈಚ್ಛನ್ನಾರದೋ
ದ್ವಿಜಾಃ (ಜಃ) ॥

ಪರ್ವತೋಽಪಿ ಮುನಿಸ್ತಾಂ ವೈ ಚಕಮೇ ಮುನಿಸತ್ತಮಾಃ ।
ಅನುಜ್ಞಾಪ್ಯ ಚ ರಾಜಾನಂ ನಾರದೋ ವಾಕ್ಯಮಬ್ರವೀತ್ ॥೫೯॥

ರಹಸ್ಯಾಹೂಯ ಧರ್ಮಾತ್ಮಾ ಮಮ ದೇಹಿ ಸುತಾಮಿಮಾಂ ।
ಪರ್ವತೋ ಹಿ (ಽಪಿ) ತಥಾ ಪ್ರಾಹ ರಾಜಾನಂ ರಹಸಿ ಪ್ರಭುಃ ॥

ತಾ ವುಭೌ ಸಹ ಧರ್ಮಾತ್ಮಾ ಪ್ರಣಿಪತ್ಯ ಭಯಾರ್ದಿತಃ ।
ಉಭೌ ಭವಂತೌ ಕನ್ಯಾಂ ಮೇ ಪ್ರಾರ್ಥಯಾನೌ ಕಥಂ ತ್ವಹಂ ॥

ಕರಿಷ್ಯಾಮಿ ಮಹಾಪ್ರಾಜ್ಞ ಶೃಣು ನಾರದ ಮೇ ವಚಃ ।
ತ್ವಂ ಚ ಪರ್ವತ ಮೇ ವಾಕ್ಯಂ ಶೃಣು ವಕ್ಷ್ಯಾಮಿ ಯತ್ಪ್ರಭೋ ॥

---

೫೮. ಈ ರೀತಿಯಾಗಿ ರಾಜನು ಹೇಳಲು ನಾರದನು ಅವಳನ್ನು ಮದುವೆಯಾಗಲು ಇಚ್ಛಿಸಿದನು. ಪರ್ವತಮುನಿಯೂ ಕೂಡ ಹಾಗೆಯೇ ಅಪೇಕ್ಷಿಪಟ್ಟನು.

೫೯–೬೦. ನಾರದನು ರಾಜನನ್ನು ಗುಟ್ಟಿನಲ್ಲಿ ಕರೆದು ಎಲೈ ಧರ್ಮಾತ್ಮನೇ,ನಿನ್ನ ಈ ಮಗಳನ್ನು ನಾನು ಮದುವೆಯಾಗಲು ಅಪೇಕ್ಷಿಸುತ್ತೇನೆ. ಆದ ಕಾರಣ ನಿನ್ನ ಈ ಮಗಳನ್ನು ನನಗೆ ಕೊಡುವವನಾಗು ಎಂದು ಹೇಳಿದನು. ಹಾಗೆಯೇ ಗುಟ್ಟಿನಲ್ಲಿ ಪರ್ವತಮುನಿಯೂ ಸಹ ರಾಜನನ್ನು ಕುರಿತು ತನಗೆ ಮಗಳನ್ನು ಮದುವೆಮಾಡಿಕೊಡುವಹಾಗೆ ಹೇಳಿದನು.

೬೧–೬೩. ಈ ರೀತಿಯಾಗಿ ಇಬ್ಬರೂ ಪ್ರಾರ್ಥಿಸಲು ಆ ರಾಜನು ಭಯದಿಂದ ಇಬ್ಬರಿಗೂ ಜೊತೆಯಲ್ಲಿ ನಮಸ್ಕರಿಸಿ ಹೇಳಿದನು. ಓ ಮಹಾತ್ಮರೇ, ನೀವಿಬ್ಬರೂ ಈ ಕನ್ಯೆಯನ್ನು ಒಟ್ಟಿಗೆ ಕೇಳುವುದಾದರೆ ನಾನೇನನ್ನು ಮಾಡಲಿ? ಹಾಗಾದರೆ ಒಂದು ಮಾತನ್ನು ಹೇಳುತ್ತೇನೆ. ಪ್ರಾಜ್ಞರಾದ ನೀವುಗಳು ಕೇಳಿರಿ. ನನ್ನ ಮಂಗಳೆಯಾದ ಈ ಮಗಳು ಯಾರನ್ನು ವರಿಸುತ್ತಾಳೋ ಅವರಿಗೆ ಅವಳನ್ನು ಕೊಡುತ್ತೇನೆ. ಇದ

ಕನ್ಯೇಯಂ ಯುವಯೋರೇಕಂ ವರಯಿಷ್ಯತಿ ಚೇಚ್ಛುಭಾ ।
ತಸ್ಮೈ ಕನ್ಯಾಂ ಪ್ರಯಚ್ಛಾಮಿ ನಾನ್ಯಥಾ ಶಕ್ತಿರಸ್ತಿ ಮೇ ॥೬೩॥
ತಥೇತ್ಯುಕ್ತ್ವಾ ತತೋ ಭೂಯಃ ಶ್ವೋ ಯಾಸ್ಯಾವ ಇತಿ ಸ್ಮ ಹ ।
ಇತ್ಯುಕ್ತ್ವಾ ಮುನಿಶಾರ್ದೂಲೌ ಜಗ್ಮತುಃ ಪ್ರೀತಿಮಾನಸೌ ॥೬೪॥
ವಾಸುದೇವ ಪರೌ ಸಿತ್ಯ ಮುಭೌ ಜ್ಞಾನನಿದಾಂ ವರೌ ।
ವಿಷ್ಣುಲೋಕಂ ತತೋ ಗತ್ವಾ ನಾರದೋ ಮುನಿಸತ್ತಮಃ ॥೬೫॥
ಪ್ರಣಿಪತ್ಯ ಹೃಷೀಕೇಶಂ ವಾಕ್ಯ ಮೇತದುವಾಚ ಹ ।
ಶ್ರೋತವ್ಯ ಮಸ್ತಿ ಭಗವನ್ನಾಥ ನಾರಾಯಣ ಪ್ರಭೋ ॥೬೬॥
ರಹಸಿ ತ್ವಾಂ ಪ್ರವಕ್ಷ್ಯಾಮಿ ನಮಸ್ತೇ ಭುವನೇಶ್ವರ ।
ತತಃ ಪ್ರಹಸ್ಯ ಗೋವಿಂದಃ ಸರ್ವಾನುತ್ಸಾರ್ಯ ತಂ ಮುನಿಂ ॥೬೭॥
ಬ್ರೂಹೀತ್ಯಾಹ ಚ ವಿಶ್ವಾತ್ಮಾ ಮುನಿರಾಹ ಚ ಕೇಶವಂ ।
ತ್ವದೀಯೋ ನೃಪತಿಃ ಶ್ರೀಮಾನಂಬರೀಷೋ ಮಹೀಪತಿಃ ॥೬೮॥

---

ಕ್ಕಿಂತಲೂ ನನಗೆ ಬೇರೆಯ ಉಪಾಯವು ತೋಚುವುದಿಲ್ಲ. ಆದ ಕಾರಣ ನೀವುಗಳು ಇದಕ್ಕೆ ಒಪ್ಪಬೇಕೆಂದು ಪ್ರಾರ್ಥಿಸುತ್ತೇನೆ.

೬೪. ಹಾಗೆಯೇ ಆಗಲೆಂದು ಒಪ್ಪಿ, ಮತ್ತೆ ನಾಳೆಬರುವೆವೆಂದು ಹೇಳಿ, ಮುನಿಶ್ರೇಷ್ಠರೂ, ಪ್ರತಿನಿತ್ಯವೂ ವಾಸುದೇವನ ಗುಣಗಾನದಲ್ಲಿ ಆಸಕ್ತರೂ ಜ್ಞಾನಿಗಳೂ ಆದ ಇಬ್ಬರೂ ಸಹ ಸಂತೋಷಗೊಂಡವರಾಗಿ ಹೋದರು.

೬೫–೬೬. ಅನಂತರದಲ್ಲಿ ನಾರದನು ವಿಷ್ಣುಲೋಕಕ್ಕೆ ಹೋಗಿ ನಾರಾಯಣನಿಗೆ ನಮಸ್ಕರಿಸಿ ಓ ಪ್ರಭುವಾದ ನಾರಾಯಣನೇ, ಕೇಳಬೇಕಾದ ವಿಷಯವು ಇರುತ್ತದೆ. ಅದನ್ನು ಗುಟ್ಟಿನಲ್ಲಿ ನಿನಗೆ ಹೇಳುವೆನು. ಓ ಸ್ವಾಮಿಯೇ, ನಿನಗೆ ನಮಸ್ಕಾರವು. ಎಂಬುದಾಗಿ ಹೇಳಿದನು.

೬೭. ಆಗ ಪರಮಾತ್ಮನು ನಕ್ಕು ಪರಿವಾರಜನರೆಲ್ಲರನ್ನೂ ಕಳುಹಿಸಿ ನಾರದನನ್ನು ಕುರಿತು, ಎಲೈ ನಾರದನೇ, ಏನು ವಿಷಯ ಎಂಬುದನ್ನು ತಿಳಿಸುವವನಾಗು ಎಂದು ಹೇಳಿದನು.

೬೮–೬೯ ಅನಂತರದಲ್ಲಿ ನಾರದನು ಕೇಶವನನ್ನು ಕುರಿತು ಓ ಸ್ವಾಮಿಯೇ, ನಿನ್ನ ಭಕ್ತನಾದ ಅಂಬರೀಷನೆಂಬ ರಾಜನಿರುತ್ತಾನೆ. ಆ

ತಸ್ಯ ಕನ್ಯಾ ವಿಶಾಲಾಕ್ಷೀ ಶ್ರೀಮತೀ ನಾಮ ನಾಮತಃ ।
ಪರಿಣೇತುಂ ಮನಾಸ್ತತ್ರ ಗತೋಽಸ್ಮಿ ವಚನಂ ಶೃಣು ॥೬೯॥
ಪರ್ವತೋಽಯಂ ಮುನಿಃ ಶ್ರೀಮಾಂಸ್ತವ ಭೃತ್ಯಸ್ತಪೋನಿಧಿಃ ।
ತಾವ್ಯೈಚ್ಛತೊಽಪಿ ಭಗವನ್ನಾವಾಮಾಹ ಜನಾಧಿಪಃ ॥೭೦॥
ಅಂಬರೀಷೋ ಮಹಾತೇಜಾಃ ಕನ್ಯೇಯಂ ಯುವಯೋರ್ವರಂ ।
ಲಾವಣ್ಯಯುಕ್ತಂ ವೃಣುಯಾದ್ಯದಿ ತಸ್ಮೈ ದದಾಮ್ಯಹಂ ॥೭೧॥
ಇತ್ಯಾಹ ಹಾಂ ನೃಪಸ್ತತ್ರ ತಥೇತ್ಯುಕ್ತ್ವಾಽಹ ಮಾಗತಃ ।
ಆಗಮಿಷ್ಯಾಮಿ ತೇ ರಾಜನ್ ಶ್ವಃ ಪ್ರಭಾತೇ ಗೃಹಂ ತ್ವಿತಿ ॥೭೨॥
ಆಗತೋಽಹಂ ಜಗನ್ನಾಥ ಕರ್ತುಮರ್ಹಸಿಮೇ ಪ್ರಿಯಂ ।
ವಾನರಾನನ ವದ್ಭಾತಿ ಪರ್ವತಸ್ಯ ಮುಖಂಯಥಾ ॥೭೩॥

---

ರಾಜನಿಗೆ ವಿಶಾಲಾಕ್ಷಿಯಾದ ಶ್ರೀಮತಿಯೆಂಬ ಹೆಸರಿನಿಂದ ಪ್ರಸಿದ್ಧಳಾದ ಮಗಳಿರುತ್ತಾಳೆ. ಆ ಶ್ರೀಮತಿಯನ್ನು ಮದುವೆಯಾಗಬೇಕೆಂಬ ಅಭಿಲಾಷೆಯಿಂದ ಅಲ್ಲಿಗೆ ಹೋದೆನು.

೭೦–೭೧. ನಿನ್ನ ಭಕ್ತನಾದ ಈ ಪರ್ವತ ಮುನಿಯೂ ಕೂಡ ಆ ಕನ್ಯೆಯನ್ನು ಮದುವೆಯಾಗಲು ಸಿದ್ಧನಾದುದನ್ನು ನೋಡಿ ಆ ಅಂಬರೀಷನು ನಮ್ಮನ್ನು ಕುರಿತು, ನಿಮ್ಮಿಬ್ಬರಲ್ಲಿ ಸುಂದರನಾದವನನ್ನು ಇವಳು ತನ್ನ ಇಚ್ಛೆಯಿಂದ ವರಿಸಿದ್ದೇ ಆದರೆ ಅಂತಹವನಿಗೆ ಈ ಮಗಳನ್ನು ಕೊಡುತ್ತೇನೆಂದು ಹೇಳಿದನು. ಅದನ್ನು ಕೇಳಿ ನಾನು ಹಾಗೆಯೇ ಆಗಲೆಂದು ಹೇಳಿ ಇಲ್ಲಿಗೆ ಬಂದೆನು. ಅಲ್ಲದೆ,

೭೨–೭೩. ಎಲೈ, ರಾಜನೇ ನಾಳೆ ಬೆಳಿಗ್ಗೆ ನಿನ್ನ ಮನೆಗೆ ಬರುತ್ತೇನೆ. ಎಂದು ಹೇಳಿ ಬಂದಿರುತ್ತೇನೆ. ಓ ಪ್ರಭುವೇ, ನೀನು ನನಗೆ ಸಹಾಯವನ್ನು ಮಾಡುವವನಾಗು. ಪರ್ವತ ಮುನಿಯ ಮುಖವು ಕಪಿಯ ಮುಖದ ಹಾಗೆ ಕಾಣುವಂತೆ ಲೋಕನಾಥನೇ, ನನಗೆ ಹಿತವನ್ನುಕೋರುವುದಾದರೆ, ಮಾಡುವವನಾಗು.

ತಥಾ ಕುರು ಜಗನ್ನಾಥ ಮಮ ಚೇದಿಚ್ಛಸಿ ಪ್ರಿಯಂ ।
ತಥೇ ತ್ಯುಕ್ತ್ವಾ ಸ ಗೋವಿಂದಃ ಪ್ರಹಸ್ಯ ಮಧುಸೂದನಃ ॥೭೪॥
ತ್ವಯೋಕ್ತಂ ಚ ಕರಿಷ್ಯಾಮಿ ಗಚ್ಛ ಸೌಮ್ಯ ಯಥಾಽಽಗತಂ ।
ಏವ ಮುಕ್ತ್ವಾ (ಕ್ತೋ) ಮುನಿಃ ಹೃಷ್ಟಃ ಪ್ರಣಿಪತ್ಯ ಜನಾರ್ದನಂ ॥
ಮನ್ಯಮಾನಃ ಕೃತಾತ್ಮಾನಂ ತಥಾಽಯೋಧ್ಯಾಂ ಜಗಾಮ ಸಃ ।
ಗತೇ ಮುನಿವರೇ ತಸ್ಮಿನ್ಪರ್ವತೋಽಪಿ ಮಹಾಮುನಿಃ ೭೬॥
ಪ್ರಣಮ್ಯ ಮಾಧವಂ ಹೃಷ್ಟೋ ರಹಸ್ಯೇನ ಮುವಾಚ ಹ ।
ವೃತ್ತಂ ತಸ್ಯ ನಿವೇದ್ಯಾಗ್ರೇ ನಾರದಸ್ಯ ಜಗತ್ಪತೇಃ ॥೭೭॥
ಗೋಲಾಂಗೂಲಮುಖಂ ಯದ್ವನ್ಮುಖಂ ಭಾತಿ ತಥಾ ಕುರು ।
ತಚ್ಛ್ರುತ್ವಾ ಭಗವಾನ್ವಿಷ್ಣು ಸ್ತ್ವಯೋಕ್ತಂ ಚ ಕರೋಮಿ ವೈ ॥

---

೭೪. ಮಧುಸೂದನನಾದ ದೇವನು ನಾರದನ ಮಾತನ್ನು ಕೇಳಿ, ಸೌಮ್ಯನೇ, ಹಾಗೇ ಆಗಲಿ. ನಿನ್ನ ಇಷ್ಟದಂತೆ ಮಾಡುವೆನು. ನಿಶ್ಚಿಂತನಾಗಿ ನೀನು ಹೋಗು. ಎಂದು ಹೇಳಿದನು.

೭೫ ಪರಮಾತ್ಮನ ಮಾತಿನಿಂದ ಸಂತೋಷಗೊಂಡ ನಾರದನು ಜನಾರ್ದನನಿಗೆ ನಮಸ್ಕಾರಮಾಡಿ ಬಂದ ಕೆಲಸವಾಯಿತೆಂದು ತನ್ನನ್ನು ಕೃತಾರ್ಥನನ್ನಾಗಿ ತಿಳಿದು ಅಯೋಧ್ಯೆಗೆ ಹೋದನು.

೭೬–೭೭. ನಾರದನು ಹೊರಟು ಹೋದನಂತರ ಪರ್ವತಮುನಿಯೂ ಸಹ ವಿಷ್ಣುವಿನಲ್ಲಿಗೆ ಬಂದು ಪರಮಾತ್ಮನಿಗೆ ನಮಸ್ಕರಿಸಿ ಸಂತೋಷದಿಂದ ಗುಟ್ಟಿನಲ್ಲಿ ಹೇಳತೊಡಗಿದನು. ಜಗದೀಶನಿಗೆ ಪರ್ವತನು ಸಕಲವಾದ ಸಮಾಚಾರವನ್ನೂ ತಿಳಿಸಿ, ಸ್ವಾಮಿಯೇ, ನಾರದನ ಮುಖವನ್ನು ಗೋಲಾಂಗೂಲದ ಮುಖದಂತೆ ಕಾಣುವ ಹಾಗೆ ಮಾಡುವವನಾಗು. ಎಂದು ಬೇಡಿದನು.

೭೮–೭೯. ಪರ್ವತಮುನಿಗೂ ಕೂಡ ಪರಮಾತ್ಮನು ನಿನ್ನ ಇಷ್ಟದಂತೆಯೇ ಆಗಲಿ. ಜಾಗ್ರತೆಯಾಗಿ ಅಯೋಧ್ಯೆಗೆ ಹೋಗು. ನಮ್ಮಿಬ್ಬರ

ಗಚ್ಛ ಶೀಘ್ರಮಯೋಧ್ಯಾಂ ವೈ ಮಾವೇದೀರ್ನಾರದಸ್ಯ ವೈ ।
ತ್ವಯಾ ಮೇ ಸಂವಿದಂ ತತ್ರ ತಥೇತ್ಯುಕ್ತ್ವಾ ಜಗಾಮ ಸಃ ॥೭೯॥
ತತೋ ರಾಜಾ ಸಮಾಜ್ಞಾಯ ಪ್ರಾಪ್ತೌಮುನಿವರೌ ತದಾ ।
ಮಾಂಗಲ್ಯೈಃ ವಿವಿಧೈಸ್ಸರ್ವ ಮಯೋಧ್ಯಾಂ ಧ್ವಜಮಾಲಿನೀಂ ॥೮೦॥
ಮಂಡಯಾಮಾಸ ಪುಷ್ಪೈಶ್ಚ ಲಾಜೈಶ್ಚೈವ ಸಮಂತತಃ ।
ಅಂಬುಸಿಕ್ತ ಗೃಹದ್ವಾರಾಂ ಸಿಕ್ತಾಪಣ ಮಹಾಪಥಾಂ ॥೮೧॥
ದಿವ್ಯಗಂಧ ರಸೋಪೇತಾಂ ಧೂಪಿತಾಂ ದಿವ್ಯಧೂಪಕೈಃ ।
ಕೃತ್ವಾ ಚ ನಗರೀಂ ರಾಜಾ ಮಂಡಯಾಮಾಸ ತಾಂ ಸಭಾಂ ॥೮೨॥
ದಿವ್ಯಗಂಧೈ ಸ್ತಥಾಧೂಪೈ ರತ್ನೈಶ್ಚ ವಿವಿಧೈಸ್ತಥಾ ।
ಅಲಂಕೃತಾಂ ಮಣಿಸ್ತಂಭೈ ರ್ನಾನಾಮಾಲ್ಯೋಪಶೋಭಿತಾಂ ॥

---

ಮಾತುಕತೆ ನಾರದನಿಗೆ ಗೊತ್ತಾದೀತು. ಎಂಬುದಾಗಿ ಹೇಳಲು, ಪರ್ವತನು ಹಾಗೆಯೇ ಆಗಲೆಂದು ಒಪ್ಪಿ, ಅಯೋಧ್ಯೆಗೆ ಹೋದನು.

೮೦. ಮುನಿಶ್ರೇಷ್ಠರಿಬ್ಬರೂ ನಗರಿಗೆ ಬಂದದ್ದನ್ನು ತಿಳಿದು ಅಂಬರೀಷನು ನಾನಾ ಪ್ರಕಾರವಾದ ಮಂಗಳಕರಗಳಾದ ಹೂಗಳಿಂದಲೂ, ಲಾಜಗಳಿಂದಲೂ ಎಲ್ಲ ಕಡೆಯಲ್ಲಿಯೂ ಧ್ವಜಗಳಿಂದ ಕೂಡಿದ ಅಯೋಧ್ಯೆಯನ್ನು ಅಲಂಕರಿಸಿದನು.

೮೧-೮೨. ನೀರಿನಿಂದ ಸೇಚನಮಾಡಿದ ಗೃಹದ್ವಾರವುಳ್ಳ, ಸೇಚನಮಾಡಿದ ಅಂಗಡಿಗಳ ಬೀದಿಯುಳ್ಳ, ಮನೋಹರವಾದ ಗಂಧಗಳಿಂದಲೂ, ರಸಗಳಿಂದಲೂ ಕೂಡಿರುವ, ಆಹ್ಲಾದಕರವಾದ ಧೂಪಗಳ ಪರಿಮಳದಿಂದ ಕೂಡಿದ್ದನ್ನಾಗಿಯೂ ಮಾಡಿ, ರಾಜನು ಪಟ್ಟಣವನ್ನು ಮನೋಮೋಹಕವಾಗಿ ಶೃಂಗರಿಸಿದನು.

೮೩-೮೪. ಪರಿಮಳಯುಕ್ತವಾದ ಸುಗಂಧಗಳಿಂದಲೂ, ಧೂಪಗಳಿಂದಲೂ, ನಾನಾವಿಧವಾದ ರತ್ನಗಳಿಂದಲೂ, ಅಲಂಕೃತವಾದ, ರತ್ನಖಚಿತವಾದ ಕಂಬಗಳಿಂದಲೂ, ನಾನಾವಿಧವಾಧ ಹೂಮಾಲೆಗಳಿಂದಲೂ,

ಪರಾರ್ಧ್ಯಾಸ್ತರಣೋಪೇತೈಃ ದಿವ್ಯೈರ್ಭದ್ರಾಸನೈಃ ವೃತಾಂ ।
ಕೃತ್ವಾ ನೃಪೇಂದ್ರಸ್ತಾಂ ಕನ್ಯಾಂ ಹ್ಯಾದಾಯ ಪ್ರವಿವೇಶ ಹ ॥೮೪॥

ಸರ್ವಾಭರಣ ಸಂಪನ್ನಾಂ ಶ್ರೀರಿವಾಯತಲೋಚನಾಂ ।
ಕರ ಸಂಮಿತ ಮಧ್ಯಾಂಗೀಂ ಪಂಚಸ್ನಿಗ್ಧಾಂ ಶುಭಾನನಾಂ ॥೮೫॥

ಸ್ತ್ರೀಭಿಃ ಪರಿವೃತಾಂ ದಿವ್ಯಾಂ ಶ್ರೀಮತೀಂ ಸಂಶ್ರಿತಾಂ ತದಾ ।
ಸಭಾ ಚ ಸಾ ಭೂಪಪತೇಸ್ಸಮೃದ್ಧಾ ।
ಮಣಿಪ್ರವೇಕೋತ್ತಮ ರತ್ನ ಚಿತ್ರಾ ॥
ನ್ಯಸ್ತಾ ಸನಾ ಮಾಲ್ಯವತೀ ಸುಬದ್ಧಾ
ತಾಮಾಯಯುಸ್ತೇ ನರರಾಜವರ್ಗಾಃ ॥೮೬॥

ಅಥಾಪರೋ ಬ್ರಹ್ಮವರಾತ್ಮಜೋ ಹಿ ।
ತ್ರೈವಿದ್ಯವಿದ್ಯೋ ಭಗವಾನ್ಮಹಾತ್ಮಾ ॥
ಸ ಸರ್ವತೋ ಬ್ರಹ್ಮವಿದಾಂ ವರಿಷ್ಠೋ ।
ಮಹಾಮುನಿ ರ್ನಾರದ ಆಜಗಾಮ ॥೮೭॥

---

ಶೋಭಿತವಾದ, ಅತ್ಯುತ್ತಮವಾದ ರತ್ನ ಕಂಬಳಿಗಳಿಂದಲೂ, ಶ್ರೇಷ್ಠವಾದ ಭದ್ರಾಸನಗಳಿಂದಲೂ, ಕೂಡಿದ ಸ್ವಯಂವರ ಸಭೆಯನ್ನು ರಚಿಸಿ, ರಾಜನು ಸಕಲಾಭರಣಗಳಿಂದಲೂ ಭೂಷಿತೆಯಾದ, ಲಕ್ಷ್ಮಿಯಂತೆ ನೀಳವಾದ ಕಣ್ಣುಗಳುಳ್ಳ ಮಗಳೊಡನೆ ಪ್ರವೇಶಿಸಿದನು.

೮೫. ರಾಜನು ರೂಪವತಿಯೂ, ತಲೋದರಿಯೂ, ಸ್ತ್ರೀಯರುಗಳಿಂದ ಪರಿವೃತಳೂ. ಮನೋಹರಳೂ, ಆದ ಶ್ರೀಮತಿಯನ್ನು ಸಭಾ ಪ್ರವೇಶಮಾಡಿಸಿದನು.

೮೬. ರಾಜನ ಆ ಸಭೆಯೂ ಕೂಡ ಶ್ರೇಷ್ಠವಾದ ವಜ್ರವೈಡೂರ್ಯಗಳಿಂದ ಕೆತ್ತಲ್ಪಟ್ಟದ್ದೂ, ಆಸನಗಳಿಂದ ಭರಿತವೂ, ತಳಿರು ತೋರಣಗಳಿಂದ ಅಲಂಕೃತವೂ ಆದ ಸಭೆಯನ್ನು ರಾಜಸಮೂಹವು ಬಂದು ತಲಪಿತು.

೮೭. ಅನಂತರದಲ್ಲಿ ಬ್ರಹ್ಮನ ಮಾನಸ ಪುತ್ರನಾದ, ಪೂಜ್ಯನಾದ, ಮಹಾತ್ಮನೂ, ವೇದವಿದ್ಯಾಪಾರಂಗತನೂ ಆದ ನಾರದನೂ, ಬ್ರಹ್ಮಜ್ಞಾನಿಗಳೊಳಗೆ ಶ್ರೇಷ್ಠನಾದ ಪರ್ವತ ಮುನಿಯೊಡನೆ ಬಂದನು.

ತಾವಾಗತೌ ಸಮೀಕ್ಷ್ಯಾಥ ರಾಜಾ ಸಂಭ್ರಾಂತ ಮಾನಸಃ ॥೮೮॥
ದಿವ್ಯಾಸನಂ ಸಮಾದಾಯ ಪೂಜಯಾಮಾಸ ತಾವುಭೌ ।
ಉಭೌ ದೇವರ್ಷಿಸಿದ್ಧೌ ತಾವುಭೌ ಜ್ಞಾನವಿದಾಂ ವರೌ ॥೮೯॥
ಸಮಾಸೀನೌ ಮಹಾತ್ಮಾನೌ ಕನ್ಯಾರ್ಥಂ ಮುನಿಸತ್ತಮೌ ।
ತಾವುಭೌ ಪ್ರಣಿಪತ್ಯಾಗ್ರೇ ಕನ್ಯಾಂ ತಾಂ ಶ್ರೀಮತೀಂ ಶುಭಾಂ ॥
ಸುತಾಂ ಕಮಲ ಪತ್ರಾಕ್ಷೀಂ ಪ್ರಾಹ ರಾಜಾ ಯಶಸ್ವಿನೀಂ ।
ಅನಯೋರ್ಯಂ ವರಂ ಭದ್ರೇ ಮನಸಾ ತ್ವಮಿಹೇಚ್ಛಸಿ ॥೯೦॥
ತಸ್ಮೈ ಮಾಲಾ ಮಿಮಾಂ ದೇಹಿ ಪ್ರಣಿಪತ್ಯ ಯಥಾವಿಧಿ ।
ಏವ ಮುಕ್ತ್ವಾ ತು ಸಾ ಕನ್ಯಾ ಸ್ತ್ರೀ ಭಿಃ ಪರಿವೃತಾ ತದಾ ॥೯೨॥
ಮಾಲಾಂ ಹಿರಣ್ಮಯೀಂ ದಿವ್ಯಾಂ ಆದಾಯ ಶುಭ ಲೋಚನಾ ।
ಯತ್ರಾ ಸೀನೌ ಮಹಾತ್ಮಾನೌ ತತ್ರಾಗಮ್ಯ ಸ್ಥಿತಾ ತದಾ ॥೯೩॥

---

೮೮. ಬಂದ ಆ ಋಷಿಗಳನ್ನು ನೋಡಿ, ರಾಜನು ಸಂಭ್ರಾಂತಿಯಿಂದ ಶ್ರೇಷ್ಠವಾದ ಆಸನವನ್ನು ಕೊಟ್ಟು, ಇಬ್ಬರನ್ನೂ ಪೂಜಿಸಿದನು.

೮೯. ಜ್ಞಾನಿಗಳೊಳಗೆ ಶ್ರೇಷ್ಠರೂ, ಮಹಾತ್ಮರೂ, ದೇವರ್ಷಿಗಳೂ ಆದ ಆ ಇಬ್ಬರು ಮುನಿಶ್ರೇಷ್ಠರೂ, ಕನ್ಯಾರ್ಥಿಗಳಾಗಿ ಕುಳಿತುಕೊಂಡರು

೯೦. ರಾಜನು ಆ ಇಬ್ಬರಿಗೂಕೂಡ ನಮಸ್ಕರಿಸಿ ಅವರೆದುರಿಗೆ ಶೋಭನಳೂ, ಕಮಲ ಪತ್ರದಂತೆ ಕಣ್ಣುಳ್ಳವಳೂ, ಕನ್ಯೆಯೂ ಆದ ತನ್ನ ಮಗಳನ್ನು ಕುರಿತು ಹೀಗೆ ಹೇಳಿದನು.

೯೧. ಎಲೌ ಮಂಗಳಾಗಿಯೇ, ಈ ಇಬ್ಬರಲ್ಲಿ ಯಾರನ್ನು ನೀನು ಇಚ್ಛಿಸುವೆಯೋ ಅವರಿಗೆ ನಮಸ್ಕಾರ ಪೂರ್ವಕವಾಗಿ ಈ ಮಾಲೆಯನ್ನು ಹಾಕುವವಳಾಗು.

೯೨-೯೩. ಹೀಗೆಂದು ರಾಜನು ಹೇಳಿದ ಅನಂತರದಲ್ಲಿ ಮನೋಹರವಾದ ನೇತ್ರವುಳ್ಳ, ಆ ಶ್ರೀಮತಿಯು ದಿವ್ಯವಾದ ಮಾಲೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಸ್ತ್ರೀಯರುಗಳಿಂದ ಪರಿವೃತಳಾಗಿ ಆ ಮಹಾತ್ಮರುಗಳು ಕುಳಿತುಕೊಂಡಿದ್ದ ಸ್ಥಳಕ್ಕೆ ಬಂದು ನಿಂತಳು.

ವೀಕ್ಷ್ಯ (ಕ್ಷ್ಯ) ಮಾಹಾ ಮುನಿಶ್ರೇಷ್ಠೌ ನಾರದಂ ಪರ್ವತಂ ತಥಾ ।
ಶಾಖಾಮೃಗಾನನಂ ದೃಷ್ಟ್ವಾ ನಾರದಂ ಪರ್ವತಂ ತಥಾ ॥೯೪॥
ಗೋಲಾಂಗೂಲ ಮುಖಂ ಕನ್ಯಾ ಕಿಂಚಿತ್ ತ್ರಾಸ ಸಮನ್ವಿತಾ ।
ಸಂಭ್ರಾಂತ ಮನಸಾ ತತ್ರ ಪ್ರವಾತ ಕದಲೀ ಯಥಾ ॥೯೫॥
ತಸ್ಥೌ ತಾಮಾಹ ರಾಜಾಽಸೌ ವತ್ಸೇ ಕಿಂ ತ್ವಂ ಕರಿಷ್ಯಸಿ ।
ಅನಯೋ ರೇಕ ಮುದ್ದಿಶ್ಯ ದೇಹಿ ಮಾಲಾ ಮಿಮಾಂ ಶುಭೇ ॥೯೬॥
ಸಾ ಪ್ರಾಹ ಪಿತರಂ ತ್ರಸ್ತಾ ಇಮೌ ತೌ ನರವಾನರೌ ।
ಮುನಿಶ್ರೇಷ್ಠಂ ನ ಪಶ್ಯಾಮಿ ನಾರದಂ ಪರ್ವತಂ ತಥಾ ॥೯೭॥
ಅನಯೋ ರ್ಮಧ್ಯತಸ್ತ್ವೇಕ ಮೂನ ಷೋಡಷ ವಾರ್ಷಿಕಂ ।
ಸರ್ವಾಭರಣ ಸಂಪನ್ನಂ ಅತಸೀ ಪುಷ್ಪ ಸನ್ನಿಭಂ ॥೯೮॥

---

೯೪–೯೫. ಶ್ರೀಮತಿಯು ಮುನಿಶ್ರೇಷ್ಠರಾದ ನಾರದನನ್ನೂ, ಪರ್ವತನನ್ನೂ ನೋಡಿದಳು. ಶಾಖಾಮೃಗದಂತೆ ಮುಖವುಳ್ಳ ನಾರದನನ್ನೂ ಗೋಲಾಂಗೂಲದಂತೆ ಮುಖವುಳ್ಳ ಪರ್ವತನನ್ನೂ, ನೋಡಿ, ಆಶ್ಚರ್ಯದಿಂದ ಸಂಭ್ರಾಂತ (ಗಾಬರಿಗೊಂಡ) ಮನಸ್ಕಳಾಗಿ ಬಿರುಗಾಳಿಯಲ್ಲಿ ನಡುಗುವ ಬಾಳೆಯಂತೆ, ನಡುಗುತ್ತಾ ನಿಂತಳು!

೯೬. ಆಗ ರಾಜನು ಎಲೌ ಮಗಳೇ, ಇದೇನನ್ನು ಮಾಡುತ್ತಿರುವೆ? ಇವರಲ್ಲೊಬ್ಬರಿಗೆ ಮಾಲೆಯನ್ನು ಹಾಕುವವಳಾಗು. ಎಂದನು.

೯೭. ಆ ಶ್ರೀಮತಿಯು ಭ್ರಾಂತಳಾಗಿ, ತಂದೆಯನ್ನು ಕುರಿತು, ಇವರಾದರೋ ಮನುಜರೂಪರಾದ ಕಪಿಗಳು. ಇಲ್ಲಿ ಮುನಿಶ್ರೇಷ್ಠರಾದ ನಾರದನಾಗಲೀ, ಪರ್ವತನಾಗಲೀ ಇಲ್ಲವು. ಅಲ್ಲದೆ,

೯೮–೯೯. ಇವರ ಮಧ್ಯದಲ್ಲಿ ಊನವಾದ ಹದಿನಾರು ವರ್ಷವಯಸ್ಕನೂ, ಸಕಲಾಭರಣಗಳಿಂದ ಅಲಂಕೃತನೂ, ಅಗಸೇ ಹುವ್ವಿನಂತೆ ಕಾಂತಿಯುಳ್ಳವನೂ, ನೀಳವಾದ ಕೈಗಳುಳ್ಳವನೂ, ಅಗಲವಾದ ಕಣ್ಣುಗಳುಳ್ಳವನೂ, ಉಬ್ಬಿದ ಎದೆಯುಳ್ಳವನೂ, ರೇಖೆಯಿಂದ ಅಂಕಿತವಾದ



10

ದೀರ್ಘಬಾಹುಂ ವಿಶಾಲಾಕ್ಷಂ ತುಂಗೋರುಸ್ಥಲ ಮುತ್ತಮಂ।
ರೇಖಾಂಕಿತ ಕಟಿ ಗ್ರೀವಂ ರಕ್ತಾಂ ತಾಯತ ಲೋಚನಂ ॥೯೯॥

ನಮ್ರ ಚಾಪಾನು ಕರಣ ಪಟು ಭ್ರೂ ಯುಗ ಶೋಭಿತಂ।
ವಿಭಕ್ತ ತ್ರಿವಲೀವ್ಯಕ್ತಂ ನಾಭಿ ವ್ಯಕ್ತ ಶುಭೋದರಂ ॥೧೦೦॥

ಹಿರಣ್ಯಾಂಬರ ಸಂವೀತಂ ತುಂಗ ರತ್ನ ನಖಂ ಶುಭಂ।
ಪದ್ಮಾ ಕಾರ ಕರಂ ತ್ವೇನಂ ಪದ್ಮಾಸ್ಯಂ ಪದ್ಮಲೋಚನಂ ॥೧೦೧॥

ಸುನಾಸಂ ಪದ್ಮ ಹೃದಯಂ ಪದ್ಮ ನಾಭಂ ಶ್ರಿಯಾ ವೃತಂ।
ದಂತ ಪಂಕ್ತಿ ಭಿರತ್ಯರ್ಥಂ ಕುಂದ ಕುಡ್ಮಲ ಸಂನಿಭೈಃ ॥೧೦೨॥

ಹಸಂತಂ ಮಾಂ ಸಮಾಲೋಕ್ಯ ದಕ್ಷಿಣಂ ಚ ಪ್ರಸಾರ್ಯ ವೈ।
ಪಾಣಿಂ ಸ್ಥಿತ ಮಮುಂ ತತ್ರ ಪಶ್ಯಾಮಿ ಶುಭ ಮೂರ್ಧಜಂ ॥

ಸಂಭ್ರಾಂತ ಮಾನಸಾಂ ತತ್ರ ವೇಪ(ಂ)ತೀಂ ಕದಲೀ ಮಿವ।
ಸ್ಥಿತಾಂ ತಾಮಾಹ ರಾಜಾಽಸೌ ವತ್ಸೇ ಕಿಂ ತ್ವಂ ಕರಿಷ್ಯಸಿ ॥೧೦೪॥

---

ಕತ್ತುಳ್ಳವನೂ, ಕೆಂಪಗೂ, ವಿಶಾಲವೂ, ಆದ ಕಣ್ಣುಳ್ಳವನೂ, ಬಗ್ಗಿಸಿದ ಬಿಲ್ಲನ್ನು ಅನುಕರಿಸುವ ಹುಬ್ಬುಗಳಿಂದ ಶೋಭಿತನೂ,

೧೦೦–೧೦೧. ವಿಭಕ್ತವಾದ ತ್ರಿವಲಿಯಿಂದ ಸ್ಫುಟವಾದ, ನಾಭಿವ್ಯಕ್ತವಾದ ಉದರವುಳ್ಳ, ಪೀತಾಂಬರವನ್ನು ಧರಿಸಿರುವ, ಎತ್ತರವಾದ, ರತ್ನಸದೃಶವಾದ ಉಗುರುಳ್ಳ, ಕಮಲ ಸದೃಶವಾದ ಕೈಯುಳ್ಳ, ಕಮಲ ಮುಖನಾದ, ಕಮಲನೇತ್ರನಾದ,

೧೦೨–೧೦೩. ಮನೋಹರವಾದ ಮೂಗುಳ್ಳ, ಪದ್ಮಹೃದಯನೂ, ಪದ್ಮನಾಭನೂ, ಕಾಂತಿವಿಶಿಷ್ಟನೂ, ಮಲ್ಲಿಗೇ ಮೊಗ್ಗಿನಂತಿರುವ ಹಲ್ಲುಗಳ ಸಾಲುಗಳಿಂದ ಶೋಭಿಸುತ್ತಿರುವವನೂ, ಬಹಳವಾಗಿ ನಗುತ್ತಾ ನನ್ನನ್ನು ನೋಡಿ ಬಲಗೈಯನ್ನ ಮುಂಬಕ್ಕೆ ನೀಡಿ ನಿಂತಿರುವ ಈ ಒಬ್ಬನನ್ನು ನೋಡುತ್ತಿರುತ್ತೇನೆ! ಎಂದು ಹೇಳಿದಳು.

೧೦೪. ಭ್ರಾಂತಳಾಗಿ ಬಾಳೆಯಂತೆ ನಡುಗುತ್ತಿರುವ ಅವಳನ್ನು ನೋಡಿ ರಾಜನು, ಎಲೌ ವತ್ಸಳೇ, ನೀನು ಏನನ್ನು ಮಾಡುತ್ತಿರುವೆ?

ಏವ ಮುಕ್ತೇ ಮುನಿಃ ಪ್ರಾಹ ನಾರದ ಸ್ಸಂಶಯಂ ಗತಃ ।
ಕಿಯಂತೋ ಬಾಹವಸ್ತಸ್ಯ ಕನ್ಯೇ ಬ್ರೂಹಿ ಯಥಾ ತಥಂ ॥೧೦೫॥

ಬಾಹು ದ್ವಯಂ ಚ ಪಶ್ಯಾಮೀ ತ್ಯಾಹ ಕನ್ಯಾ ಶುಚಿಸ್ಮಿತಾ ।
ಪ್ರಾಹ ತಾಂ ಪರ್ವತಸ್ತತ್ರ ತಸ್ಯ ವಕ್ಷಸ್ಥಲೇ ಶುಭೇ ॥೧೦೬॥

ಕಿಂ ಪಶ್ಯಸಿ ಚ ಮೇ ಬ್ರೂಹಿ ಕರೇ ಕಿಂ ವಾಽಸ್ಯ ಪಶ್ಯಸಿ ।
ಕನ್ಯಾ ತಮಾಹ ಮಾಲಾಂ ವೈ ಪಂಚರೂಪಾ ಮನುತ್ತಮಾಂ ॥

ವಕ್ಷಸ್ಥಲೇಽಸ್ಯ ಪಶ್ಯಾಮಿ ಕರೇ ಕಾರ್ಮುಕ ಸಾಯ ಕೌ ।
ಏವ ಮುಕ್ತೌ ಮುನಿಶ್ರೇಷ್ಠೌ ಪರಸ್ಪರ ಮನುತ್ತಮೌ ॥೧೦೮॥

---

೧೦೫. ಹೀಗೆ ರಾಜನು ಹೇಳಲು, ನಾರದನು ಸಂಶಯದಿಂದ ಶ್ರೀಮತಿಯನ್ನು ಕುರಿತು, ಎಲೌ ಕನ್ಯೆಯೇ, ನೀನು ಹೇಳಿದವನಿಗೆ ಕೈಗಳು ಎಷ್ಟಿರುತ್ತವೆ? ನಿಜವಾಗಿ ಹೇಳುವವಳಾಗು. ಎಂದನು.

ಕನ್ಯೆಯು ಮುಗುಳು ನಗೆಯನ್ನು ನಗುತ್ತಾ ಎರಡು ಕೈಗಳನ್ನು ನೋಡುತ್ತೇನೆ, ಎಂದಳು.

೧೦೬. ಆಗ ಪರ್ವತಮುನಿಯು ಅವಳನ್ನು ನೋಡಿ, ಎಲೌ ಶುಭಕರಳೇ, ಅವನ ಎದೆಯ ಪ್ರದೇಶದಲ್ಲಿ ಏನನ್ನು ನೋಡುವೆ? ಅವನ ಕೈಯಲ್ಲಿ ಏನನ್ನು ನೋಡುವೆ? ಹೇಳು, ಎಂದನು.

೧೦೭. ಶ್ರೀಮತಿಯು ಪರ್ವತನನ್ನು ಕುರಿತು, ಎದೆಯ ಪ್ರದೇಶದಲ್ಲಿ ಶ್ರೇಷ್ಠವಾದ ಹಾರವನ್ನೂ, ಕೈಯಲ್ಲಿ ಬಿಲ್ಲು ಬಾಣಗಳನ್ನೂ, ನೋಡುತ್ತೇನೆಂದು ಹೇಳಿದಳು.

೧೦೮. ಹೀಗೆ ಶ್ರೀಮತಿಯು ಹೇಳಲು, ಆ ಮುನಿವರರು ತಮ್ಮ ತಮ್ಮಲ್ಲೇ ಇದೇನು? ಯಾರದೀಮಾಯೆ? ಎಂದು ಚಿಂತಿಸ ತೊಡಗಿದರು.

ಮನಸಾ ಚಿಂತಯಂತೌ ತೌ ಮಾಯೇಯಂ ಕಸ್ಯಚಿದ್ಭವೇತ್ ।
ಮಾಯಾವೀ ತಸ್ಕರೋ ನೂನಂ ಸ್ವಯಮೇವ ಜನಾರ್ದನಃ ॥೧೦೯॥
ಆಗತೋ ನ ಯಥಾ ಕುರ್ಯಾತ್ಕಥಮಸ್ಮನ್ಮುಖಂ ತ್ವಿದಂ ।
ಗೋಲಾಂಗೂಲತ್ವಮಿತ್ಯೇವಂ ಚಿಂತಯಾಮಾಸ ನಾರದಃ ॥೧೧೦॥
ಪರ್ವತೋಽಪಿ ಯಥಾನ್ಯಾಯಂ ವಾನರತ್ವಂ ಕಥಂ ಮಮ ।
ಪ್ರಾಪ್ತ ಮಿತ್ಯೇವ ಮನಸಾ ಚಿಂತಾಮಾಪೇದಿವಾಂ ಸ್ತಥಾ ॥೧೧೧॥
ತತೋ ರಾಜಾ ಪ್ರಣಮ್ಯಾಸೌ ನಾರದಂ ಪರ್ವತಂ ತಥಾ ।
ಭವದ್ಭ್ಯಾಂ ಕಿಮಿದಂ ತತ್ರ ಕೃತಂ ಬುದ್ಧಿವಿಮೋಹಜಂ ॥೧೧೨॥
ಸ್ವಸ್ಥೌಭವಂತೌ ತಿಷ್ಠೇತಾಂ ಯಥಾ ಕನ್ಯಾಽರ್ಥಮುದ್ಯತೌ ।
ಏವ ಮುಕ್ತೌ ಮುನಿಶ್ರೇಷ್ಠೌ ನೃಪ ಮೂಚತುರುಲ್ಬಣೌ ॥೧೧೩॥

---

೧೦೯–೧೧೦. ಮಾಯಾವಿಯೂ, ಕಳ್ಳನೂ, ಆದ, ಜನಾರ್ದನನೇ ನಿಶ್ಚಯವಾಗಿಯೂ, ಕನ್ಯೆಯನ್ನು ಅಪಹರಿಸಲು ಬಂದಿರುತ್ತಾನೆ! ನನ್ನ ಮುಖವು ಗೋಲಾಂಗೂಲದಂತೆ ಹೇಗಾಯಿತು? ಎಂದು ನಾರದನು ಚಿಂತಾ ಕ್ರಾಂತನಾದನು.

೧೧೧. ನಾರದನಂತೆ ಪರ್ವತನೂಕೂಡ ಇದೇನಾಶ್ಚರ್ಯ? ನನ್ನ ಮುಖವೇತಕ್ಕೆ ಕಪಿ ಮುಖದಂತಾಯಿತು? ಎಂದು ಯೋಚಿಸ ತೊಡಗಿದನು.

೧೧೨. ಅನಂತರದಲ್ಲಿ ರಾಜನು ನಾರದ, ಮತ್ತು ಪರ್ವತ ಇಬ್ಬರಿಗೂ ನಮಸ್ಕರಿಸಿ, ಬುದ್ಧಿವಿಮೋಹದಿಂದ ಇದೇಕೆ ವಿಪರೀತವನ್ನು ಮಾಡಿ ಕೊಂಡಿರುತ್ತೀರಿ? ನೀವಿಬ್ಬರೂ ಕನ್ಯಾಪೇಕ್ಷೆಯಿಂದ ವಿರಾಮವನ್ನು ಹೊಂದಿದವರಾಗಿರಿ, ಎಂದು ಹೇಳಿದನು.

೧೧೩–೧೧೪. ಹೀಗೆ ರಾಜನು ಹೇಳಲು, ಕೋಪಗೊಂಡವರಾಗಿ, ಆ ಋಷಿವರರು,ಎಲೈ ರಾಜನೇ, ನೀನೇ ಭ್ರಾಂತಿಪಡುತ್ತಿರುವವನು. ನಾವುಗಳು

ತ್ವಮೇವ ಮೋಹಂ ಕುರುಷೇ ನಾವಾಮಿಹ ಕಥಂಚನ ।
ಅವಯೋರೇಕಮೇಷಾ ತೇ ವರಯತ್ವೇವ ಮಾ ಚಿರಂ ॥೧೧೪॥

ತತಃ ಸಾ ಕನ್ಯಕಾ ಭೂಯಃ ಪ್ರಣಿಪತ್ಯೇಷ್ಟ ದೇವತಾಂ ।
ಮಾಯಾ ಮಾದಾಯ ತಿಷ್ಠಂತಂ ತಯೋರ್ಮಧ್ಯೇ ಸಮಾಹಿತಂ ॥

ಸರ್ವಾಭರಣ ಸಂಯುಕ್ತ ಮತಸೀ ಪುಷ್ಪಸನ್ನಿಭಂ ।
ದೀರ್ಘಬಾಹುಂ ಸುಪುಷ್ಟಾಂಗಂ ಕರ್ಣಾಂತಾಯತಲೋಚನಂ ॥

ಪೂರ್ವವತ್ಪುರುಷಂ ದೃಷ್ಟ್ವಾ ಮಾಲಾಂ ತಸ್ಮೈ ದದೌ ಹಿ ಸಾ ।
ಅನಂತರಂ ಹಿ ಸಾ ಕನ್ಯಾ ನ ದೃಷ್ಟಾ ಮನುಜೈಃ ಪುನಃ ॥೧೧೭॥

ತತೋ ನಾದ ಸ್ಸ ಮಭವತ್ ಕಿಮೇತದಿತಿ ವಿಸ್ಮಿತೌ ।
ತಾಮಾದಾಯ ಗತೋ ವಿಷ್ಣು ಸ್ಸ್ವಸ್ಥಾನಂ ಪುರುಷೋತ್ತಮಃ ॥

---

ಖಂಡಿತವಾಗಿಯೂ ಭ್ರಾಂತರಲ್ಲವು. ನಿನ್ನ ಈ ಕನ್ಯೆಯು ಜಾಗ್ರತೆಯಾಗಿ ನಮ್ಮಿಬ್ಬರಲ್ಲಿ ಒಬ್ಬನನ್ನು ವರಿಸಿಯೇ ವರಿಸಬೇಕು. ಎಂದು ಹೇಳಿದರು.

೧೧೫. ಅನಂತರದಲ್ಲಿ ಆ ಕನ್ಯೆಯು ಮತ್ತೆ ತನ್ನ ಇಷ್ಟ ದೇವರಿಗೆ ನಮಸ್ಕರಿಸಿ, ಅವರಿಬ್ಬರ ಮಧ್ಯದಲ್ಲಿ ಮಾಯಾರೂಪವನ್ನು ಧರಿಸಿ ನಿಂತಿರುವ,

೧೧೬. ಸಕಲ ಆಭರಣಗಳಿಂದ ಕೂಡಿದವನೂ, ಅಗಸೇ ಹುವ್ವಿನಂತೆ ಕಾಂತಿಯುಳ್ಳವನೂ, ಆಜಾನು ಬಾಹುವೂ, ಪುಷ್ಟವಾದ ಅಂಗಗಳಿಂದ ಕೂಡಿರುವವನೂ,ಕಿವಿಯವರೆಗೂ ವಿಶಾಲವಾದ ಕಣ್ಣುಗಳುಳ್ಳವನೂ ಆದ

೧೧೭. ಪುರುಷನನ್ನು ಮೊದಲಿನಂತೆ ನೋಡಿ ಅವನಿಗೆ ಮಾಲೆಯನ್ನು ಅರ್ಪಿಸಿದಳು. ಅನಂತರದಲ್ಲಿ ಆ ಕನ್ಯೆಯನ್ನು ಯಾವ ಮನುಷ್ಯನೂ ಕಾಣಲಿಲ್ಲವು. ಆಗ ಇದೇನು ವಿಚಿತ್ರವು? ಎಂಬ ಧ್ವನಿಯು ಮಾತ್ರ ಎಲ್ಲೆಲ್ಲಿಯೂ ವ್ಯಾಪಿಸಿತು!

೧೧೮–೧೧೯. ಪುರುಷ ಶ್ರೇಷ್ಠನಾದ ವಿಷ್ಣುವು ಶ್ರೀಮತಿಯನ್ನು ಜೊತೆಯಲ್ಲಿ ಕರೆದುಕೊಂಡು ತನ್ನ ಲೋಕಕ್ಕೆ ಹೋದನು. ಹಿಂದೆ ಆಕೆಯು

ಪುರಾ ತೀರ್ಥಮನಿಶಂ ತಪಸ್ತಪ್ತ್ವಾವರಾಂಗನಾ ।
ಶ್ರೀಮತೀ ಸಾ ಸಮುತ್ಪನ್ನಾ ಸಾ ಗತಾ ಚ ತಥಾ ಹರಿಂ ॥೧೧೯॥
ತಾವುಭೌ ಮುನಿಶಾರ್ದೂಲೌ ಧಿಕ್ಕೃತಾವತಿ ದುಃಖಿತೌ ।
ವಾಸುದೇವಂ ಪ್ರತಿ ತದಾ ಜಗ್ಮತುರ್ಭವನಂ ಹರೇಃ ॥೧೨೦॥
ತಾವಾಗತೌ ಸಮೀಕ್ಷ್ಯಾಹ ಶ್ರೀಮತೀಂ ಭಗವಾನ್ಹರಿಃ ।
ಮುನಿಶ್ರೇಷ್ಠೌ ಸಮಾಯಾತೌ ಗೂಹಸ್ವಾತ್ಮಾನಮತ್ರ ವೈ ॥
ತಥೇತ್ಯುಕ್ತ್ವಾ ಚ ಸಾ ದೇವೀ ಪ್ರಹಸಂತೀ ಚಕಾರ ಹ ।
ನಾರದಃ ಪ್ರಣಿಪತ್ಯಾಗ್ರೇ ಪ್ರಾಹ ದಾಮೋದರಂ ಹರಿಂ ॥೧೨೨॥
ಪ್ರಿಯಂ ಹಿ ಕೃತವಾನದ್ಯ ಮಮ ತ್ವಂ ಪರ್ವತಸ್ಯ ಹಿ ।
ತ್ವಮೇವ ನೂನಂ ಗೋವಿಂದ ಕನ್ಯಾಂ ತಾಂ ಹೃತವಾನಸಿ ॥೧೨೩॥

---

ವಿಷ್ಣುವನ್ನು ಪತಿಯಾಗಿ ಪಡೆಯಬೇಕೆಂದು, ಯಾವಾಗಲೂ ತಪಸ್ಸನ್ನು ಮಾಡಿದ್ದು ಈಗ ಶ್ರೀಮತಿಯಾಗಿ ಹುಟ್ಟಿದ್ದಳು. ಅಂತೆಯೇ ಶ್ರೀ ವಿಷ್ಣುವನ್ನೇ ಪಡೆದಳು.

೧೨೦. ಆ ಮುನಿಪ್ರವರರು ತಿರಸ್ಕೃತರಾದ ಪ್ರಯುಕ್ತ ಅತಿದುಃಖಗೊಂಡವರಾಗಿ, ವೈಕುಂಠಲೋಕಕ್ಕೆ ವಾಸುದೇವನನ್ನು ನೋಡಲು ಹೋದರು.

೧೨೧. ಅವರಿಬ್ಬರೂ ಬರುತ್ತಿರುವುದನ್ನು ತಿಳಿದು ವಿಷ್ಣುವು ಶ್ರೀಮತಿಯನ್ನು ಮರೆಯಾಗುವಂತೆ ಹೇಳಿದನು. ಅದೇಪ್ರಕಾರ ಒಪ್ಪಿ ಆದೇವಿಯು ನಗುತ್ತಾ ಮರೆಯಾದಳು.

೧೨೨–೧೨೩. ಅಷ್ಟರಲ್ಲಿ ನಾರದನು ಬಂದನು. ಬಂದ ಕೂಡಲೆ ಹರಿಗೆ ನಮಸ್ಕರಿಸಿ, ಪರಮಾತ್ಮನೇ, ನಮ್ಮಿಬ್ಬರಿಗೂ ಒಳ್ಳೆಯದನ್ನೇ ಮಾಡಿರುವೆ ! ಓ ಗೋವಿಂದ, ನಮ್ಮಿಬ್ಬರಿಗೂ ಮೋಸಪಡಿಸಿ, ನಿಜವಾಗಿಯೂ ನೀನೇ ಆ ಕನ್ಯಾಽಪಹಾರಕನಾಗಿರುವೆ !

ವಿನೋದ ಹ್ಯಾವಾಂ ಸ್ವಯಂ ಬುದ್ಧ್ಯಾ ಪ್ರತಾರ್ಯ ಸುರಸತ್ತಮ ।
ಇತ್ಯುಕ್ತಃ ಪುರುಷೋ ವಿಷ್ಣುಃ ಪಿಧಾಯ ಶ್ರೋತ್ರಮಚ್ಯುತಃ ॥
ಪಾಣಿಭ್ಯಾಂ ಪ್ರಾಹ ಭಗವಾನ್ ಭವದ್ಭ್ಯಾಂ ಕಿಮುದೀರಿತಂ ।
ಕಾಮುವಾನಪಿ ಭಾವೋಽಯಂ ಮುನಿವೃತ್ತಿರಹೋ ಕಿಲ ॥೧೨೫॥

ಏವ ಮುಕ್ತೋ ಮುನಿಃ ಪ್ರಾಹ ವಾಸುದೇವಂ ಸ ನಾರದಃ ।
ಕರ್ಣಮೂಲೇ ಮಮ ಕಥಂ ಗೋಲಾಂಗೂಲ ಮುಖಂ ತ್ವಿತಿ ॥
ಕರ್ಣಮೂಲೇ ತಮಾಹೇದಂ ವಾನರತ್ವಂ ಕೃತಂ ಮಯಾ ।
ಪರ್ವತಸ್ಯ ಮಯಾ ವಿದ್ವಾನ್ ಗೋಲಾಂಗೂಲ ಮುಖಂ ತವ ॥
ಮಯಾ ತವ ಕೃತಂ ತತ್ರ ಪ್ರಿಯಾರ್ಥಂ ನಾನ್ಯಥಾ ಮುನೇ ।
ಪರ್ವತೋಽಪಿ ತಥಾ ಪ್ರಾಹ ತಸ್ಯಾಪ್ಯೇವಂ ಜಗಾದ ಸಃ ॥೧೨೮॥

---

೧೨೪-೧೨೫. ಹೀಗೆ ಹೇಳಿದ ನಾರದನ ಮಾತನ್ನು ಕೇಳಿ, ವಿಷ್ಣುವು ಕೈಗಳಿಂದ ಕಿವಿಯನ್ನು ಮುಚ್ಚಿಕೊಂಡು, ನೀವು ಏನನ್ನು ಹೇಳುತ್ತಿರುವಿರಿ? ಈ ನಿಮ್ಮ ಮುನಿವೃತ್ತಿ ಏನು? ಈ ಕಾಮುಕತನವೇನು? ಎಂದನು.

೧೨೬. ಹೀಗೆ ಹೇಳಲ್ಪಟ್ಟ ನಾರದನು ವಾಸುದೇವನನ್ನು ಕುರಿತು, ನಾನು ಪರ್ವತಮುನಿಗೆ ವಾನರಮುಖವುಂಟಾಗಲೆಂದು ಅಪೇಕ್ಷಿಸಿದೆ. ಅದರಂತೆಯೇ ಮಾಡಲ್ಪಟ್ಟಿತು. ಆದರೆ ನನಗೆ ಹೇಗೆ ಗೋಲಾಂಗೂಲ ಮುಖವಾಯಿತು? ಎಂದು ಕೇಳಲು,

೧೨೭. ಎಲೈ ವಿದ್ವಾಂಸನೇ, ನಿನಗೆ ಗೋಲಾಂಗೂಲದಂತೆ ಮುಖವು ಪರ್ವತಮುನಿಯ ಅಪೇಕ್ಷೆಯಂತೆ ಮಾಡಲ್ಪಟ್ಟಿತು. ಬೇರೆ ವಿಧದಲ್ಲಿ ಮಾಡಲ್ಪಡಲಿಲ್ಲ.

೧೨೮. ಪರ್ವತಮುನಿಯೂ ಕೂಡ ಹೀಗೆಯೇ ಕೇಳಲು, ಅವನಿಗೂ ಸಹ ಅದೇ ರೀತಿಯಲ್ಲಿ ಉತ್ತರವನ್ನು ಕೊಟ್ಟನು.

ಶೃಣ್ವತೋರುಭಯೋಸ್ತತ್ರ ಪ್ರಾಹ ದಾಮೋದರೋ ವಚಃ ।
ಪ್ರಿಯಂ ಭವದ್ಭ್ಯಾಂ ಕೃತವಾನ್ ಸತ್ಯೇನಾತ್ಮಾಸಮಾಲಭೇ ॥೧೨೯॥
ನಾರದಃ ಪ್ರಾಹ ಧರ್ಮಾತ್ಮಾ ಆವಯೋಃ ಮಧ್ಯತಃ ಸ್ಥಿತಃ ।
ಧನುಷ್ಮಾನ್ಪುರುಷಃ ಕೋಽತ್ರ ತಾಂ ಹೃತ್ವಾ ಗತವಾನ್ಕಿಲ ॥೧೩೦॥
ತಚ್ಛ್ರುತ್ವಾ ವಾಸುದೇವೋಽಸೌ ಪ್ರಾಹ ತೌ ಮುನಿಸತ್ತಮೌ ।
ತತ್ರ ಸಾ ಶ್ರೀಮತೀ ನೂನ ಮದೃಷ್ಟ್ವಾ ಮುನಿಸತ್ತಮೌ ॥೧೩೧॥
ಮಾಯಾವಿನೋ ಮಹಾತ್ಮಾನೋ ಬಹವಸ್ಸಂತಿ ಸತ್ತಮಾಃ ।
ಚಕ್ರಪಾಣಿರಹಂ ನಿತ್ಯಂ ಚತುರ್ಬಾಹು ರಿತಿ ಸ್ಥಿತಃ ॥೧೩೨॥
ತಾಂ ತಥಾ ನಾಹ ಮೈಚ್ಛಂ ವೈ ಭವದ್ಭ್ಯಾಂ ವಿದಿತಂ ಹಿತತ್ ।
ಇತ್ಯುಕ್ತೌ ಪ್ರಣಿಪತ್ಯೈನ ಮೂಚತುಃ ಪ್ರೀತಿ ಮಾನಸೌ ॥೧೩೩॥

---

೧೨೯. ಪರಮಾತ್ಮನು ಅವರಿಬ್ಬರೂ, ಕೇಳುತ್ತಿರುವಂತೆಯೇ ಹೀಗೆ ಹೇಳಿದನು. ಎಲೈ ಮುನಿ ಸತ್ತಮರೇ, ನಿಜವಾಗಿಯೂ ನಿಮಗೆ ಪ್ರಿಯ ವನ್ನೇ ಮಾಡಿರುತ್ತೇನೆ. ಸಂದೇಹ ಪಡಬೇಡಿ. ತೃಪ್ತಿಪಟ್ಟುಕೊಳ್ಳಿರಿ.

೧೩೦. ಆಗ ನಾರದನು ಹಾಗಾದರೆ ನಮ್ಮಿಬ್ಬರಮಧ್ಯದಲ್ಲಿ, ಧನುಷ್ಪಾಣಿಯಾಗಿ ನಿಂತು ಶ್ರೀಮತಿಯನ್ನು ಅಪಹರಿಸಿಕೊಂಡು ಹೋದ ನಲ್ಲವೇ? ಅವನ್ಯಾರು? ಎಂದನು.

೧೩೧–೧೩೨. ಆಗ ವಾಸುದೇವನು ಮುನಿಶ್ರೇಷ್ಠರನ್ನು ಕುರಿತು, ಅನೇಕ ಮಾಯಾವಿಗಳು ನಿಜವಾಗಿಯೂ, ಅಪಹರಿಸಲ್ಪಟ್ಟವರಾಗಿರುತ್ತಾರೆ! ನಾನು ನಾಲ್ಕು ಕೈಗಳುಳ್ಳವನೆಂದು ಪ್ರಸಿದ್ಧನಾಗಿರುತ್ತೇನೆ. (ಯಾವಾಗಲೂ) ನಾನು ಅವಳನ್ನು ಅಪೇಕ್ಷಿಸಲಿಲ್ಲವೆಂಬುದು ನಿಮಗೂ ತಿಳಿದುದೇ ಅಲ್ಲದೇ ಮತ್ತೇನೂ ಬೇರೆ ಅಲ್ಲ. ಎಂದು ಹೇಳಿದನು.

೧೩೩–೧೩೪. ನಾರಾಯಣನ ಮಾತನ್ನು ಕೇಳಿ ನಾರದ ಪರ್ವತರಿಬ್ಬರೂ, ಸಂತೋಷದಿಂದ, ಓ ವಿಭುವಾದ ಜಗದೀಶನೇ, ನಿನ್ನದೇನು

ಕೋಽತ್ರ ದೋಷ ಸ್ತ್ವವ ವಿಭೋ ನಾರಾಯಣ ಜಗತ್ಪತೇ ।
ದೌರಾತ್ಮ್ಯಂ ತನ್ನೃಪಸ್ಯೈವ ಮಾಯಾಂ ಹಿ ಕೃತವಾನಸೌ ॥೧೩೪॥
ಇತ್ಯುಕ್ತ್ವಾ ಜಗ್ಮತುಸ್ತಸ್ಮಾನ್ಮುನೀ ನಾರದ ಪರ್ವತೌ ।
ಅಂಬರೀಷಂ ಸಮಾಸಾದ್ಯ ಶಾಪೇನೈವ ಮಯೋ ಜಯತ್ ॥೧೩೫॥
ನಾರದಃ ಪರ್ವತಶ್ಚೈವ ಯಸ್ಮಾದಾ ವಾ ಮಿಹಾಗತೌ ।
ಆಹೂಯ ಪಶ್ಚಾದನ್ಯಸ್ಮೈ ಕನ್ಯಾಂ ತ್ವಂ ದತ್ತವಾನಸಿ ॥೧೩೬॥
ಮಾಯಾ ಯೋಗೇನ ತಸ್ಮಾತ್ ತ್ವಂ ತಮೋ ಹ್ಯಭಿ ಭವಿಷ್ಯತಿ ।
ತೇನ ಚಾತ್ಮಾನ ಮತ್ಯರ್ಥಂ ಯಥಾವತ್ತ್ವಂ ನ ವೇತ್ಸ್ಯಸಿ ॥೧೩೭॥
ಏವಂ ಶಾಪೇ ಪ್ರದತ್ತೇ ತು ತಮೋ ರಾಶಿ ರಥೋತ್ಥಿತಃ ।
ನೃಪಂ ಪ್ರತಿ ತತ ಶ್ಚಕ್ರಂ ವಿಷ್ಣೋಃ ಪ್ರಾದುರ ಭೂತ್ ಕ್ಷಣಾತ್ ॥
ಚಕ್ರ ವಿತ್ರಾಸಿತಂ ಘೋರಂ ತಾವುಭೌ ತಮ ಅಭ್ಯಗಾತ್ ।
ತತ ಸ್ಸಂತ್ರಸ್ತ ಸರ್ವಾಂಗೌ ಧಾವ ಮಾನೌ ಮಹಾಮುನೀ ॥೧೩೯॥

---

ತಪ್ಪು? ಈ ಕೆಲಸವು ಆ ರಾಜನದೇ. ಅವನೇ ಈ ಮಾಯೆಯನ್ನು ಕಲ್ಪಿಸಿರುವವನು. ಎಂದು ಹೇಳಿ ಇಬ್ಬರೂ, ಅಲ್ಲಿಂದ ತೆರಳಿದರು.

೧೩೫–೧೩೭. ಅಲ್ಲಿಂದ ಅವರಿಬ್ಬರೂ ಅಂಬರೀಷನಲ್ಲಿಗೆ ಹೋಗಿ, ಅವನಿಗೆ ಎಲೈ ರಾಜನೇ, ಯಾವುದರಿಂದ ನಾವಿಲ್ಲಿಗೆ ಬಂದೆವೋ, ನೀನು ಯಾವುದರಿಂದ ನಮ್ಮನ್ನು ಆಹ್ವಾನಿಸಿದೆಯೋ, ಆ ಉದ್ದೇಶವನ್ನು ಬಿಟ್ಟು, ಮಾಯೆಯಿಂದ ಬೇರೊಬ್ಬರಿಗೆ ನಿನ್ನ ಕನ್ಯೆಯನ್ನು ಕೊಟ್ಟೆ. ಆದ್ದರಿಂದ ನೀನೂ ಸಹ ತಮೋಽಭಿ ಭೂತನಾಗು. ಅದರಿಂದಯಥಾವತ್ತಾದ ಆತ್ಮಜ್ಞಾನ ವಿಲ್ಲದೇ ಹೋಗಲಿ, ಎಂದು ಶಾಪವನ್ನು ಕೊಟ್ಟರು.

೧೩೮. ಹೀಗೆ ಶಾಪವು ಕೊಡಲ್ಪಡಲು ಆತಮೋರಾಶಿಯು ಎದ್ದಿತು. ತತ್ಕ್ಷಣವೇ ನೃಪಸಂರಕ್ಷಣೆಗಾಗಿ ವಿಷ್ಣುಚಕ್ರವೂ ಉದ್ಭವಿಸಿತು.

೧೩೯. ಚಕ್ರದಿಂದ ತ್ರಾಸಗೊಳಿಸಲ್ಪಟ್ಟ ತಮಸ್ಸು, ಆ ಋಷಿಗಳನ್ನೇ ಕುರಿತು ಬಂದಿತು. ಅದರಿಂದ ತೊಂದರೆಗೊಳಿಸಲ್ಪಟ್ಟ ಸಕಲಾಂಗಗಳುಳ್ಳವರಾಗಿ, ಋಷಿಗಳಿಬ್ಬರೂ ಓಡುತ್ತಾ, ಹಿಂದುಗಡೇ ಚಕ್ರವನ್ನೂ, ನಿವಾರಿಸಲಾಗದ ತಮೋ ರಾಶಿಯನ್ನೂ ನೋಡಿ,

ಪೃಷ್ಟ್ವ ತಚ್ಚಕ್ರ ಮಾಲೋಕ್ಯ ತಮೋ ರಾಶಿಂ ದುರಾಸದಂ ।
ಕನ್ಯಾ ಸಿದ್ಧಿ ರಹೋ ಪ್ರಾಪ್ತಾ ಹ್ಯಾವಯೋರಿತಿ ವೇಗಿತೌ ॥೧೪೦॥

ಲೋಕಾಃ ಲೋಕಾಂತ ಮನಿಶಂ ಧಾವಮಾನೌ ಭಯಾರ್ದಿತೌ ।
ತ್ರಾಹಿ ತ್ರಾಹೀತಿ ಗೋವಿಂದಂ ಭಾಷಮಾಣೌ ಭಯಾರ್ದಿತೌ ॥೧೪೧॥

ವಿಷ್ಣುಲೋಕಂ ತತೋ ಗತ್ವಾ ನಾರಾಯಣ ಜಗತ್ಪತೇ ।
ವಾಸುದೇವ ಹೃಷೀಕೇಶ ಪದ್ಮನಾಭ ಜನಾರ್ದನ ॥೧೪೨॥

ತ್ರಾಹ್ಯಾ ವಾಂ ಪುಂಡರೀಕಾಕ್ಷ ನಾಥೋಽಸಿ ಪುರುಷೋತ್ತಮ ।
ತತೋ ನಾರಾಯಣಶ್ಚಿಂತ್ಯ ಶ್ರೀಮಾನ್ ಶ್ರೀವತ್ಸಲಾಂಛನಃ ॥೧೪೩॥

ನಿವಾರ್ಯ ಚಕ್ರಂ ಧ್ವಾಂತಂ ಚ ಭಕ್ತಾನುಗ್ರಹ ಕಾಮ್ಯಯಾ ।
ಅಂಬರೀಷಶ್ಚ ಮದ್ಭಕ್ತ ಸ್ತಥೈತೌ ಮುನಿಸತ್ತಮೌ ॥೧೪೪॥

---

೧೪೦–೧೪೧. ಕನ್ಯೆಯನ್ನು ಅಪೇಕ್ಷಿಸಿದುದಕ್ಕೆ ನಮ್ಮಗಳಿಗೆ ತಕ್ಕುದು ಪ್ರಾಪ್ತವಾಯಿತೆಂದು, ಲೋಕಾ ಲೋಕ ಪರ್ವತದ ಕೊನೆಯಲ್ಲಿ ಭಯದಿಂದ ವೇಗವಾಗಿ ಓಡುತ್ತಾ, ಹೇ ಗೋವಿಂದ, ರಕ್ಷಿಸು, ರಕ್ಷಿಸೆಂದು ಮೊರೆಯಿಡುತ್ತಾ. ವಿಷ್ಣುಲೋಕಕ್ಕೆ ಹೋಗಿ, ಹೇ ನಾರಾಯಣ, ಲೋಕ ಪಾಲಕ,

೧೪೨. ಹೇ ವಸುದೇವ ಪುತ್ರ, ಹೃಷೀಕೇಶ, ಕಮಲನಾಭ, ಜನಾರ್ದನ, ನಮ್ಮನ್ನು ರಕ್ಷಿಸುವವನಾಗು. ಓ ಕಮಲನೇತ್ರನೇ, ಅನಾಥರಿಗೆ ನೀನೇ ನಾಥನು. ಪುರುಷೋತ್ತಮ,ರಕ್ಷಿಸು. ಎಂದು ಮೊರೆಯಿಟ್ಟರು.

೧೪೩–೧೪೪. ಅನಂತರದಲ್ಲಿ ಭಕ್ತವತ್ಸಲನಾದ ನಾರಾಯಣನು ತನ್ನ ಭಕ್ತರಿಗೆ ಒಳ್ಳೆಯದನ್ನು ಮಾಡಬೇಕೆಂಬ ಉದ್ದಿಶ್ಯದಿಂದ ಅಂಬರೀಷ ಮತ್ತು ಈ ಇಬ್ಬರು ಋಷಿವರರೂ ನನ್ನ ಭಕ್ತರು. ಇವರಿಗೂ, ಮತ್ತು ಅಂಬರೀಷನಿಗೂ, ಒಳ್ಳೆಯದನ್ನು ಮಾಡಬೇಕಾದುದು ನನ್ನ ಕೆಲಸವೆಂದು ಯೋಚಿಸಿದವನಾಗಿ, ತಮಸ್ಸನ್ನೂ ಮತ್ತು ಚಕ್ರವನ್ನೂ, ಅವರಿಬ್ಬರಿಗೂ ತೊಂದರೆ ಕೊಡದಂತೆ ಮಾಡಿ,

ಅನಯೋ ರಸ್ಯ ಚ ತಥಾ ಹಿತಂ ಕಾರ್ಯಂ ಮಯಾಽಧುನಾ ।
ಆಹೂಯ ತತ್ತ್ವಮ ಶ್ರೀಮಾನ್ಗಿರಾ ಪ್ರಹ್ಲಾದಯನ್ ಹರಿಃ ॥೧೪೫॥
ಪ್ರೋವಾಚ ಭಗವಾನ್ ವಿಷ್ಣುಃ ಶೃಣುತಾಂ ಮ ಇದಂ ವಚಃ ।
ಋಷಿ ಶಾಪೋ ನ ಚೈವಾಸೀ ದನ್ಯಥಾ ಚ ವರೋ ಮಮ ॥೧೪೬॥
ದತ್ತೋ ನೃಪಾಯ ರಕ್ಷಾಽರ್ಥಂ ನಾಸ್ತಿ ತಸ್ಯಾನ್ಯಥಾ ಪುನಃ ।
ಅಂಬರೀಷಸ್ಯ ಪುತ್ರಸ್ಯ ನಪ್ತುಃ ಪುತ್ರೋ ಮಹಾಯಶಾಃ ॥೧೪೭॥
ಶ್ರೀಮಾನ್ ದಶರಥೋ ನಾಮ ರಾಜಾ ಭವತಿ ಧಾರ್ಮಿಕಃ ।
ತಸ್ಯಾಹ ಮಗ್ರಜಃ ಪುತ್ರೋ ರಾಮ ನಾಮಾ ಭವಾಮ್ಯಹಂ ॥೧೪೮॥
ತತ್ರ ಮೇ ದಕ್ಷಿಣೋ ಬಾಹುರ್ಭರತೋ ನಾಮ ವೈ ಭವೇತ್ ।
ಶತ್ರುಘ್ನೋ ನಾಮ ಸವ್ಯಶ್ಚ ಶೇಷೋಽಸೌ ಲಕ್ಷ್ಮಣಃ ಸ್ಮೃತಃ ॥

---

೧೪೫. ಶ್ರೀಯುಕ್ತನಾದ ಹರಿಯು ತಮ್ಮನ್ನು ಸಮೀಪಕ್ಕೆ ಬರ ಮಾಡಿಕೊಂಡು, ಮಧುರವಾದ ವಾಣಿಯಿಂದ ಹೀಗೆ ಹೇಳಿದನು. ನನ್ನ ಮಾತನ್ನು ಕೇಳುವವನಾಗು.

೧೪೬. ಋಷಿಶಾಪವು ನಿರರ್ಥಕವಾಗಲಾರದು. ಅಂತೆಯೇ ರಾಜನ ರಕ್ಷಾರ್ಥವಾಗಿ ಕೊಟ್ಟಿರುವ ನನ್ನ ವರವೂ ಕೂಡ ಅನ್ಯಥಾ ಆಗಲಾರದು

೧೪೭. ನೀನು ಅಂಬರೀಷನ ಮಗನ ಮರಿಮಗ (ಮೊಮ್ಮಗನ ಮಗ) ನಿಗೆ ಮಗನಾಗಿ ಭಾಗ್ಯಶಾಲಿಯೂ, ಧಾರ್ಮಿಕನೂ ಆದ ದಶರಥನೆಂದು ಪ್ರಸಿದ್ಧನಾದ ರಾಜನು ಹುಟ್ಟುತ್ತಾನೆ.

೧೪೮–೧೪೯. ಆ ದಶರಥನಿಗೆ ರಾಮನೆಂದು ಹಿರಿಯಮಗನಾಗಿ ನಾನು ಹುಟ್ಟುತ್ತೇನೆ. ನನ್ನ ಬಲತೋಳು ಭರತನೆಂದೂ, ಎಡತೋಳು ಶತ್ರುಘ್ನನೆಂದೂ, ಆದಿಶೇಷನು ಲಕ್ಷ್ಮಣನೆಂದೂ, ಅವನಿಗೆ ಮಕ್ಕಳಾಗಿ ಹುಟ್ಟುತ್ತಾರೆ.

ತತ್ರ ಮಾಂ ಸಮುಪಾಗಚ್ಛ ಗಚ್ಛೇ ದಾನೀಂ ನೃಪಂ ವಿನಾ ।
ಮುನಿಶ್ರೇಷ್ಠೌಚ ಹಿತ್ವಾ ತ್ವಂ ಇತಿ ಸ್ಮಾಹ ಚ ಮಾಧವಃ ॥೧೫೦॥
ಏವ ಮುಕ್ತಂ ತಮಃ ನಾಶಂ ತತ್ಕ್ಷಣಾಚ್ಚ ಜಗಾಮ ವೈ ।
ನಿವಾರಿತಂ ಹರೇಶ್ಚಕ್ರಂ ಯಥಾ ಪೂರ್ವ ಮತಿಷ್ಠತ ॥೧೫೧॥
ಮುನಿಶ್ರೇಷ್ಠೌ ಭಯಾನ್ಮುಕ್ತೌ ಪ್ರಣಿಪತ್ಯ ಜನಾರ್ದನಂ ।
ನಿರ್ಗತೌ ಶೋಕ ಸಂತಪ್ತೌ ಊಚತುಸ್ತೌ ಪರಸ್ಪರಂ ॥೧೫೨॥
ಅದ್ಯ ಪ್ರಭೃತಿ ದೇಹಾಂತ ಮಾವಾಂ ಕನ್ಯಾ ಪರಿಗ್ರಹಂ ।
ನ ಕರಿಷ್ಯಾವ ಇತ್ಯುಕ್ತ್ವಾ ಪ್ರತಿಜ್ಞಾಯ ಚ ತಾವೃಷೀ ॥೧೫೩॥
ಯೋಗಧ್ಯಾನ ಪರೌ ಶುದ್ಧೌ ಯಥಾ ಪೂರ್ವಂ ವ್ಯವಸ್ಥಿತೌ ।
ಅಂಬರೀಶಶ್ಚ ರಾಜಾಽಸೌ ಪರಿಪಾಲ್ಯ ಚ ಮೇದಿನೀಂ ॥೧೫೪॥

---

೧೫೦. ಆವಾಗ ನನ್ನನ್ನು ಹೊಂದುವನಾಗು. ಆದಕಾರಣ ಈಗ ಈ ಅಂಬರೀಷನನ್ನೂ, ನಾರದ ಪರ್ವತನನ್ನೂ, ಬಿಟ್ಟು ಹೊರಟುಹೋಗು ಎಂದು ಹೇಳಿದನು.

೧೫೧. ಹೀಗೆ ಮಾಧವನಿಂದ ಹೇಳಲ್ಪಟ್ಟ ತಮಸ್ಸು ಆ ಕೂಡಲೇ ನಷ್ಟವಾಯಿತು. ಅನಂತರದಲ್ಲಿ ಚಕ್ರವೂ ಸಹ ತನ್ನ ಜಾಗಕ್ಕೆ ಮುಂಚಿನಂತೆ ಹೊರಟುಹೋಯಿತು.

೧೫೨. ಭಯದಿಂದ ಬಿಡಲ್ಪಟ್ಟ ನಾರದ ಪರ್ವತರು ಜನಾರ್ದನನಿಗೆ ನಮಸ್ಕರಿಸಿ ದುಃಖದಿಂದ ಕೂಡಿ ಹೊರಟು, ತಮ್ಮತಮ್ಮಲ್ಲೇ ಹೇಳಿಕೊಂಡರು.

೧೫೩. ಇಲ್ಲಿಂದ ಮುಂದೆ ನಾವು ಅವಸಾನ ಪರ್ಯಂತವಾಗಿ ಕನ್ಯಾ ಪರಿಗ್ರಹವನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿ, ಹಿಂದಿನಂತೆ ಪರಿಶುದ್ಧರಾಗಿ, ಯೋಗ ಮತ್ತು ಧ್ಯಾನಗಳಲ್ಲಿ ನಿರತರಾಗಿದ್ದರು.

೧೫೪. ಅಂಬರೀಷನೂ ಸಹ ರಾಜ್ಯ ಪರಿಪಾಲನೆ ಮಾಡಿ. ಅಂತಿಮದಲ್ಲಿ ಭೃತ್ಯ, ಜ್ಞಾತಿ, ಮೊದಲಾದ ಪರಿಜನ ಸಮೇತನಾಗಿ ವಿಷ್ಣುಲೋಕವನ್ನು ಪಡೆದನು.

ಸಭೃತ್ಯ ಜ್ಞಾತಿ ಸಂಪನ್ನೋ ವಿಷ್ಣು ಲೋಕಂ ಜಗಾಮ ವೈ ।
ಮಾನಾರ್ಥ ಮಂಬರೀಷಸ್ಯ ತಥೈವ ಮುನಿ ಸಿಂಹಯೋಃ ॥೧೫೫॥

ರಾಮೋ ದಾಶರಥಿರ್ಭೂತ್ವಾ ನಾತ್ಮ ವೇದೀಶ್ವರೋಽ ಭವತ್ ।
ಮುನಯಶ್ಚ ತಥಾ ಸರ್ವೇ ಭೃಗ್ವಾದ್ಯಾ ಮುನಿಸತ್ತಮಾಃ ॥೧೫೬॥

ಮಾಯಾ ನ ಕಾರ್ಯಾ ವಿದ್ವದ್ಭಿರಿತ್ಯಾಹುಃ ಪ್ರೇಕ್ಷ್ಯ ತಂ ಹರಿಂ ।
ನಾರದಃ ಪರ್ವತಶ್ಚೈವ ಚಿರಂ ಜ್ಞಾತ್ವಾ ವಿಚೇಷ್ಟಿತಂ ॥೧೫೭॥

ಮಾಯಾಂ ವಿಷ್ಣೋಃ ವಿನಿಂದ್ಯೈವ ರುದ್ರಭಕ್ತೌ ಬಭೂವತುಃ ।
ಏತದ್ಧಿ ಕಥಿತಂ ಸರ್ವಂ ಮಯಾ ಯುಷ್ಮಾಕ ಮದ್ಯ ವೈ ॥೧೫೮॥

ಅಂಬರೀಷಸ್ಯ ಮಾಹಾತ್ಮ್ಯಂ ಮಾಯಾವಿ ತ್ವಂ ಚ ವೈ ಹರೇಃ ।
ಯಃ ಪಠೇಚ್ಛೃಣುಯಾದ್ವಾಪಿ ಶ್ರಾವಯೇದ್ವಾಪಿ ಮಾನವಃ॥೧೫೯॥

---

೧೫೫. ಅಂಬರೀಷ, ಮತ್ತು ಪರ್ವತ, ನಾರದರ ಗೌರವಕ್ಕೋಸ್ಕರ ಪರಮಾತ್ಮನು ದಶರಥ ಪುತ್ರನಾದ ರಾಮನಾಗಿ ಅವತರಿಸಿ ಆತ್ಮಜ್ಞಾನ ವಿಲ್ಲದೇ ಇದ್ದನು

೧೫೬. ಭೃಗುವೇ ಮೊದಲಾದ ಋಷಿಗಳೂ ವಿಷ್ಣುವನ್ನು ನೋಡಿ ವಿದ್ವಾಂಸರಿಂದ ಮಾಯೆಯು (ಮೋಸವು) ಮಾಡಲ್ಪಡಬಾರದೆಂದು ಹೇಳಿದರು.

೧೫೭. ಬಹಳ ಕಾಲದ ನಂತರ ನಾರದನೂ, ಪರ್ವತಮುನಿಯೂ ನಡೆದುದನ್ನು ತಿಳಿದವರಾಗಿ, ವಿಷ್ಣುವಿನ ಮಾಯೆಯನ್ನು ನಿಂದಿಸಿ, ರುದ್ರ ಭಕ್ತರಾದರು.

೧೫೮. ಈ ಅಂಬರೀಷನ ಮಾಹಾತ್ಮ್ಯವೂ, ವಿಷ್ಣುವಿನ ಮಾಯಾ ವಿತನವೂ ಕೂಡ ನಿಮ್ಮಗಳಿಗೆ ನನ್ನಿಂದ (ಸೂತನಿಂದ) ಹೇಳಲ್ಪಟ್ಟಿತು.

೧೫೯. ಯಾರು ಇದನ್ನು ಓದುತ್ತಾರೋ, ಕೇಳುತ್ತಾರೋ, ಇನ್ನೊಬ್ಬರಿಗೆ ಇದನ್ನು ಹೇಳುತ್ತಾರೋ ಮತ್ತು ಕೇಳುವಂತೆ ಮಾಡುತ್ತಾರೋ ಅವರು ಮಾಯೆಯನ್ನು ತ್ಯಜಿಸಿ, ಪುಣ್ಯವಂತರಾಗಿ ರುದ್ರಲೋಕವನ್ನು ಪಡೆಯುತ್ತಾರೆ.

ಮಾಯಾಂ ವಿಸೃಜ್ಯ ಪುಣ್ಯಾತ್ಮಾ ರುದ್ರಲೋಕಂ ಸ ಗಚ್ಛತಿ ।
ಇದಂ ಪವಿತ್ರಂ ಪರಮಂ ಪುಣ್ಯಂ ವೇದೈರುದೀರಿತಂ ॥೧೬೦॥
ಸಾಯಂ ಪ್ರಾತಃ ಪಠೇನ್ನಿತ್ಯಂ ವಿಷ್ಣೋಸ್ಸಾಯುಜ್ಯಮಾಪ್ನುಯಾತ್ ।

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಶ್ರೀ ಮತೀ ಆಖ್ಯಾನಂ
ನಾಮ ಪಂಚಮೋಽಧ್ಯಾಯಃ

---

೧೬೦. ಪವಿತ್ರವೂ, ಪುಣ್ಯಕರವೂ, ಶ್ರೇಷ್ಠವೂ ಮತ್ತು ವೇದದಲ್ಲಿ ಹೇಳಲ್ಪಟ್ಟಿರುವುದೂ, ಆದ ಈ ಅಂಬರೀಷೋಪಾಖ್ಯಾನವನ್ನು ಯಾರು ನಿತ್ಯವೂ, ಸಾಯಂಕಾಲ ಮತ್ತು ಬೆಳಿಗ್ಗೆ ಓದುವರೋ ಅವರು ವಿಷ್ಣು ಸಾಯುಜ್ಯವನ್ನು ಪಡೆಯುತ್ತಾರೆ. ಎಂಬುವುದರಲ್ಲಿ ಸ್ವಲ್ಪವೂ ಸಂದೇಹ ವಿರುವುದಿಲ್ಲವು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಶ್ರೀ ಮತೀ ಆಖ್ಯಾನವೆಂಬ
ಐದನೆಯ ಅಧ್ಯಾಯವು ಮುಗಿದುದು

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಷಷ್ಠೋಽಧ್ಯಾಯಃ

॥ ಋಷಯ ಊಚುಃ ॥

**ಮಾಯಾವಿ ತ್ವಂ ಶ್ರುತಂ ವಿಷ್ಣೋ ರ್ದೇವದೇವಸ್ಯ ಧೀಮತಃ ।**
**ಕಥಂ ಜ್ಯೇಷ್ಠಾಸಮುತ್ಪತ್ತಿಃ ದೇವದೇವಾಜ್ಜನಾರ್ದನಾತ್ ॥ ೧ ॥**
**ವಕ್ತು ಮರ್ಹಸಿ ಚಾಸ್ಮಾಕಂ ಲೋಮಹರ್ಷಣ ತತ್ವತಃ ।**

॥ ಸೂತ ಉವಾಚ ॥

**ಅನಾದಿ ನಿಧನಃ ಶ್ರೀಮಾನ್ ಧಾತಾ ನಾರಾಯಣಃ ಪ್ರಭುಃ ॥ ೨ ॥**
**ಜಗತ್ ದ್ವೈಧ ಮಿದಂ ಚಕ್ರೇ ಮೋಹನಾಯ ಜಗತ್ಪತಿಃ ।**
**ವಿಷ್ಣು ರ್ವಿಪ್ರಾನ್ ಬ್ರಾಹ್ಮಣಾನ್ ವೇದಾ ನ್ವೇದ ಧರ್ಮಾನ್ಸನಾತನಾನ್ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಆರನೆಯ ಅಧ್ಯಾಯವು.

೧. ಓ ಸೂತಮಹರ್ಷಿಯೇ, ಮಹಾಬುದ್ಧಿಶಾಲಿಯಾದ ಶ್ರೇಷ್ಠ ಪ್ರಭುವಾದ ನಾರಾಯಣನ ಮಾಯಾವಿತನವನ್ನು ಕೇಳಿದೆವು. ಆ ಪ್ರಭುವಾದ ಜನಾರ್ದನನಿಂದ ಜೇಷ್ಠಾದೇವಿಯ ಉತ್ಪತ್ತಿಯು ಹೇಗೆ ಆಯಿತು ?

೨. ಓ ಸೂತಮುನಿಯೇ, ಯಥಾವತ್ತಾಗಿ ಎಲ್ಲವನ್ನೂ ನಮಗೆ ಹೇಳುವವನಾಗು. ಸೂತನು ಹೇಳಿದನು. ಕಾಂತಿಯುಕ್ತನಾದ ಆದಿ ಅಂತ್ಯಶೂನ್ಯನಾದ, ಪ್ರಭುವಾದ ಜಗದೊಡೆಯನಾದ, ನಾರಾಯಣನು ಈ ಪ್ರಪಂಚವನ್ನು ಅಜ್ಞಾನವನ್ನುಂಟುಮಾಡುವುದಕ್ಕೋಸ್ಕರ ಎರಡು ಭಾಗವಾಗಿ ಮಾಡಿದನು.

೩. ಆ ನಾರಾಯಣನೇ ಪುರಾತನಗಳಾದ ವೇದಗಳನ್ನೂ ಮತ್ತು ಧರ್ಮಗಳನ್ನೂ ಪುರಾತನಳಾದ ಲಕ್ಷ್ಮಿಯನ್ನೂ ಐದು ಭಾಗವನ್ನಾಗಿ ಮಾಡಿದನು.

ಶ್ರಿಯಂ ಪದ್ಮಾಂ ತಥಾ ಶ್ರೇಷ್ಠಾಂ ಭಾಗಮೇಕ ಮಕಾರಯೇತ್ ।
ಜೇಷ್ಠಾಂ ಅಲಕ್ಷ್ಮೀಮಶುಭಾಂ ವೇದಬಾಹ್ಯಾನ್ನರಾಧಮಾನ್ ॥
ಅಥರ್ವಣಂ ಚ ಮಹಾತೇಜಾ ಭಾಗಮೇಕ ಮಕಲ್ಪಯತ್ ।
ಅಲಕ್ಷ್ಮೀ ಮಗ್ರತ ಸ್ಸೃಷ್ಟ್ವಾ ಪಶ್ಚಾತ್ಪದ್ಮಾಂ ಜನಾರ್ದನಃ ॥ ೫ ॥
ಜ್ಯೇಷ್ಠಾತೇನ ಸಮಾಖ್ಯಾತಾ ಅಲಕ್ಷ್ಮೀಃ ದ್ವಿಜಸತ್ತಮಾಃ ।
ಅಮೃತೋದ್ಭವ ವೇಲಾಯಾಂ ವಿಷಾನಂತರ ಮುಲ್ಬಣಾತ್ ॥ ೬ ॥
ಅಶುಭಾ ಸಾ ತಥೋತ್ಪನ್ನಾ ಜೇಷ್ಠಾ ಇತಿ ಚ ವೈ ಶ್ರುತಂ ।
ತತಃ ಶ್ರೀಶ್ಚ ಸಮುತ್ಪನ್ನಾ ಪದ್ಮಾ ವಿಷ್ಣು ಪರಿಗ್ರಹಃ ॥ ೭ ॥
ದುಃಸಹೋ ನಾಮ ವಿಪ್ರರ್ಷಿ ರುಪಯೇಮೇಽಶುಭಾಂ ತದಾ ।
ಜ್ಯೇಷ್ಠಾಂ ತಾಂ ಪರಿಪೂರ್ಣೋಽಸೌ ಮನಸಾ ವೀಕ್ಷ್ಯ ಧಿಷ್ಠಿತಾಂ ॥

---

೪. ಅಶುಭಳೂ ಜ್ಯೇಷ್ಠಳೂ ಆದ ಆ ಲಕ್ಷ್ಮಿಯನ್ನೂ ವೇದ ಬಾಹಿರೂ ನೀಚರೂ ಆದ ಮನುಷ್ಯರನ್ನೂ ಮತ್ತು ಅಥರ್ವಣವನ್ನೂ ಮಹಾ ತೇಜಸ್ವಿಯಾದ ಪರಮಾತ್ಮನು ಒಂದು ಭಾಗವನ್ನಾಗಿ ಮಾಡಿದನು.

೫. ಪ್ರಥಮದಲ್ಲಿ ಆ ಅಲಕ್ಷ್ಮಿಯನ್ನೂ ಅನಂತರದಲ್ಲಿ ದುಷ್ಟಶಿಕ್ಷಕ ನಾದ ಪರಮಾತ್ಮನು ಪದ್ಮೆಯನ್ನೂ ಸೃಷ್ಟಿಸಿದನು.

೬–೭. ಎಲೈ ದ್ವಿಜಶ್ರೇಷ್ಠರೇ, ಆದ್ದರಿಂದ ಆ ಅಲಕ್ಷ್ಮಿಯು ಜ್ಯೇಷ್ಠೆ ಎಂಬುದಾಗಿ ಪ್ರಸಿದ್ಧಳಾದಳು. ಅತಿಯಾಗಿ ಎದ್ದ ಹಾಲಾಹಲ ವೆಂಬ ವಿಷದ ಅನಂತರದಲ್ಲಿ ಅಮೃತ ಬರುವುದಕ್ಕೆ ಮೊದಲು ಅಶುಭೆಯಾದ ಆ ಅಲಕ್ಷ್ಮಿಯು ಉತ್ಪನ್ನಳಾದಳು. ಅವಳಿಗೇ ಜ್ಯೇಷ್ಠೆಯೆಂಬುದಾಗಿ ಹೆಸರಾಯಿತು. ವಿಷ್ಣು ಪತ್ನಿಯಾದ ಲಕ್ಷ್ಮಿಯು ಅನಂತರದಲ್ಲಿ ಉದ್ಭವಿಸಿದಳು.

೮. ಆಗ ತೃಪ್ತಿಗೊಂಡ ಮನಸ್ಸುಳ್ಳ ದುಸ್ಸಹನೆಂಬ ಋಷಿಯು ಆ ಜ್ಯೇಷ್ಠೆಯನ್ನು ನೋಡಿ ಮದುವೆಯಾದನು.

ಲೋಕಂ ಚಚಾರ ಹೃಷ್ಟಾತ್ಮಾ ತಯಾ ಸಹ ಮುನಿಸ್ತದಾ ।
ಯಸ್ಮಿನ್ ಘೋಷೋ ಹರೇ ಶ್ಚೈವ ಹರಸ್ಯ ಚ ಮಹಾತ್ಮನಃ ॥ ೯ ॥
ವೇದ ಘೋಷಸ್ತಥಾ ವಿಪ್ರಾ ಹೋಮಧೂಮಸ್ತಥೈ ವ ಚ ।
ಭಸ್ಮಾಂಗಿನೋ ವಾ ಯತ್ರಾಸಂ ಸ್ತತ್ರ ತತ್ರ ಭಯಾರ್ದಿತಾ ॥೧೦॥
ಪಿಧಾಯ ಕರ್ಣೌ ಸಂಯಾತಿ ಧಾವಮಾನಾ ಇತಸ್ತತಃ ।
ಜ್ಯೇಷ್ಠಾ ಮೇವಂ ವಿಧಾಂ ದೃಷ್ಟ್ವಾ ದುಸ್ಸಹೋ ಮೋಹಮಾಗತಃ ॥
ತಯಾ ಸಹ ವನಂ ಗತ್ವಾ ಚಚಾರ ಸ ಮಹಾಮುನಿಃ ।
ತಪೋ ಮಹದ್ವನೇ ಘೋರೇ ಯಾತಿ ಕನ್ಯಾ ಪ್ರತಿಗೃಹಂ ॥೧೨॥

---

೯. ಸಕಲ ಲೋಕಗಳನ್ನೂ ಸಂತೋಷಗೊಳಿಸಿದ ಆ ಋಷಿಯು ಅವಳೊಡನೆ ಕೂಡಿ ಸಂಚರಿಸುವಾಗ ಹರಿಯ ಮತ್ತು ಹರನ ನಾಮ ಘೋಷಗಳು ಎಲ್ಲೆಲ್ಲಿ ಕೇಳಿಬರುತ್ತಿದ್ದುವೋ,

೧೦. ಯಾವ ಪ್ರದೇಶದಲ್ಲಿ ವೇದಘೋಷವೂ ಹೋಮಾದಿಗಳ ಹೊಗೆಯೂ, ಬ್ರಾಹ್ಮಣರೂ ಭಸ್ಮದಿಂದ ಲೇಪಿತವಾದ ಶರೀರವುಳ್ಳವರಾಗಿ ಇರುತ್ತಿದ್ದರೋ, ಅಲ್ಲೆಲ್ಲಾ ಭಯಗೊಂಡವಳಾಗಿ ಕಿವಿಗಳನ್ನು ಮುಚ್ಚಿಕೊಂಡು ಜ್ಯೇಷ್ಠಾದೇವಿಯು ಅಲ್ಲಲ್ಲಿ ಓಡಾಡುತ್ತಿದ್ದಳು.

೧೧. ಈ ರೀತಿಯಾದ ಜ್ಯೇಷ್ಠಾದೇವಿಯನ್ನು ನೋಡಿದ ದುಸ್ಸಹನು ಅಜ್ಞಾನವನ್ನು ಹೊಂದಿದನು.

೧೨. ಘೋರವಾದ ಆ ದೊಡ್ಡ ಅರಣ್ಯದಲ್ಲಿ ಎಲ್ಲೆಲ್ಲೂ ತಪಸ್ಸೇ ಆಗುತ್ತಿರುವುದರಿಂದ, ಭೀತಿಗೊಂಡ ಅವಳೊಡನೆ ತಪಸ್ಸನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿ ಕಾಡಿನಲ್ಲೆಲ್ಲಾ ಋಷಿಯು ಸಂಚರಿಸಿದನು.

ನ ಕರಿಷ್ಯಾಮಿ ಚೇತ್ಯುಕ್ತ್ವಾ ಪ್ರತಿಜ್ಞಾಯ ಚ ತಾ ಮೃಷಿಃ ।
ಯೋಗಜ್ಞಾನ ಪರಃ ಶುದ್ಧೋ ಯತ್ರ ಯೋಗೇಶ್ವರೋ ಮುನಿಃ ॥

ತತ್ರಾಯಾಂತಂ ಮಹಾತ್ಮಾನಂ ಮಾರ್ಕಂಡೇಯ ಮುಪಶ್ಯತ ।
ಪ್ರಣಿಪತ್ಯ ಮಹಾತ್ಮಾನಂ ದುಸ್ಸಹೋ ಮುನಿ ಮಬ್ರವೀತ್ ॥೧೪॥

ಭಾರ್ಯೇಯಂ ಭಗವನ್ ಮಹ್ಯಂ ನ ಸ್ಥಾಸ್ಯತಿ ಕಥಂಚನ ।
ಕಿಂ ಕರೋಮೀತಿ ವಿಪ್ರರ್ಷೇ ಹ್ಯನಯಾ ಸಹ ಭಾರ್ಯಯಾ ॥೧೫॥

ಪ್ರವಿಶಾಮಿ ತಥಾ ಕುತ್ರ ಕುತೋ ನ ಪ್ರವಿಶಾಮ್ಯಹಂ ।

॥ ಮಾರ್ಕಂಡೇಯ ಉವಾಚ ॥

ಶೃಣು ದುಸ್ಸಹ ಸರ್ವತ್ರ ಅಕೀರ್ತಿ ರಶುಭಾನ್ವಿತಾ ॥೧೬॥

ಅಲಕ್ಷ್ಮೀರತುಲಾ ಚೇಯಂ ಜ್ಯೇಷ್ಠಾ ಇತ್ಯಭಿ ಶಬ್ದಿತಾ ।
ನಾರಾಯಣ ಪರಾ ಯತ್ರ ವೇದಮಾರ್ಗಾನು ಸಾರಿಣಃ ॥೧೭॥

---

೧೩-೧೪. ಯೋಗಜ್ಞಾನದಲ್ಲೇ ಆಸಕ್ತನಾಗಿ ಯೋಗಿಗಳೊಳಗೆ ಉತ್ತಮನಾದ ದುಸ್ಸಹನು ಆ ಸಮಯದಲ್ಲಿ ಬರುತ್ತಿರುವ ಮಹಾತ್ಮನಾದ ಮಾರ್ಕಂಡೇಯನನ್ನು ನೋಡಿದನು. ಆ ಮಹಾಮಹಿಮನಾದ ಮಾರ್ಕಂಡೇಯನನ್ನು ದುಸ್ಸಹನು ನಮಸ್ಕರಿಸಿ ಹೀಗೆ ಹೇಳಿದನು.

೧೫. ಈ ನನ್ನ ಹೆಂಡಿತಿಯು ಹೇಗೋ ನನಗಾಗಿ ನಿಲ್ಲುವುದಿಲ್ಲ. ಓ ಪೂಜ್ಯನೇ, ಏನನ್ನು ಮಾಡಲಿ? ಈ ಹೆಂಡತಿಯೊಡನೆ ಎಲ್ಲಿ ಹೋಗಲಿ? ಎಲ್ಲೂ ಹೋಗದಿರಲೇ?

೧೬. ಮಾರ್ಕಂಡೇಯನು ಹೇಳಿದನು: ಎಲೈ ದುಸ್ಸಹನೇ, ಕೇಳು. ಅಮಂಗಳಯುಕ್ತಳೂ, ಅಕೀರ್ತಿಕರಳೂ, ಅತುಲವಾದ ಅಲಕ್ಷ್ಮೀ ಸ್ವರೂಪಳೂ ಆಗಿರುವ ಇವಳು ಜ್ಯೇಷ್ಠಾ ಎಂಬುದಾಗಿ ಕರೆಯಲ್ಪಟ್ಟಳು.

೧೭-೧೮. ನಾರಾಯಣನ ಭಕ್ತರೂ ವೇದೋಕ್ತವಾದ ಆಚರಣಾದಿಗಳನ್ನುಳ್ಳವರೂ, ರುದ್ರಭಕ್ತರೂ, ಭಸ್ಮದಿಂದ ಅನುಲೇಪಿತವಾದ ಶರೀರ

**ರುದ್ರ ಭಕ್ತಾ ಮಹಾತ್ಮಾನೋ ಭಸ್ಮೋದ್ಧೂಲಿತ ವಿಗ್ರಹಾಃ ।**
**ಸ್ಥಿತಾ ಯತ್ರ ಜನಾ ನಿತ್ಯಂ ಮಾವಿಶೇಥಾಃ ಕಥಂಚನ ॥೧೮॥**

**ನಾರಾಯಣ ಹೃಷೀಕೇಶ ಪುಂಡರೀಕಾಕ್ಷ ಮಾಧವ ।**
**ಅಚ್ಯುತಾನಂದ ಗೋವಿಂದ ವಾಸುದೇವ ಜನಾರ್ದನ ॥೧೯॥**

**ರುದ್ರರುದ್ರೇತಿ ರುದ್ರೇತಿ ಶಿವಾಯ ಚ ನಮೋನಮಃ ।**
**ನಮಃ ಶಿವತರಾಯೇತಿ ಶಂಕರಾಯೇತಿ ಸರ್ವದಾ ॥೨೦॥**

**ಮಹಾದೇವ ಮಹಾದೇವ ಮಹಾದೇವೇತಿ ಕೀರ್ತಯೇತ್ ।**
**ಉಮಾಯಾಃ ಪತಯೇ ಚೈವ ಹಿರಣ್ಯ ಪತಯೇ ಸದಾ ॥೨೧॥**

**ಹಿರಣ್ಯ ಬಾಹವೇ ತುಭ್ಯಂ ವೃಷಾಂಕಾಯ ನಮೋನಮಃ ।**
**ನೃಸಿಂಹ ವಾಮನಾ ಚಿಂತ್ಯ ಮಾಧವೇತಿ ಚ ಯೇ ಜನಾಃ ॥೨೨॥**

---

ಉಳ್ಳ ಮಹಾತ್ಮರಾದ ಜನರು ಎಲ್ಲಿರುತ್ತಾರೋ ಅಲ್ಲಿಗೆ ಇವಳು ಪ್ರವೇಶಿಸುವುದಿಲ್ಲ.

೧೯. ನಾರಾಯಣನೇ, ಹೃಷೀಕೇಶನೇ, ಪುಂಡರೀಕಾಕ್ಷನೇ, ಮಾಧವನೇ, ನಾರಸಿಂಹನೇ, ಅಂತಶೂನ್ಯನೇ, ಗೋವಿಂದನೇ, ವಾಸುದೇವನೇ, ದುಷ್ಟಶಿಕ್ಷಕನೇ, ನಿನಗೆ ನಮಸ್ಕಾರವು. ರುದ್ರ ರುದ್ರ ರುದ್ರ ಶಿವನೇ, ನಿನಗೆ ನಮಸ್ಕಾರವು.

೨೦. ಯಾವಾಗಲೂ ಮಂಗಳವನ್ನುಂಟುಮಾಡುವ ಶಂಕರನೇ, ನಿನಗೆ ನಮಸ್ಕಾರವು. ಎಲ್ಲಿ ಮಹಾದೇವ, ಮಹಾದೇವ, ಮಹಾದೇವ, ಎಂಬುದಾಗಿ ಜಪಿಸಲ್ಪಡುತ್ತದೆಯೋ ಅಲ್ಲಿ ಮೈದೋರುವ,

೨೧. ಉಮಾಪತಿಯಾದ ಈಶ್ವರನೇ, ನಿನಗೆ ನಮಸ್ಕಾರವು. ಲಕ್ಷ್ಮೀಪತಿಯಾದ ಓ ಸ್ವಾಮಿಯೇ, ವೃಷಾಂಕನಾದ ಓ ದೇವನೇ, ಯಾವಾಗಲೂ ನಿನಗೆ ನಮಸ್ಕಾರವು.

೨೨–೨೩ ನೃಸಿಂಹನೇ, ವಾಮನನೇ, ಯೋಚನೆಗೆ ನಿಲುಕದವನೇ,

ವಕ್ಷ್ಯಂತಿ ಸತತಂ ಹೃಷ್ಟಾ ಬ್ರಾಹ್ಮಣಾಃ ಕ್ಷತ್ರಿಯಾಸ್ತಥಾ ।
ವೈಶ್ಯಾಃ ಶೂದ್ರಾಶ್ಚ ಯೇ ನಿತ್ಯಂ ತೇಷಾಂ ಧನ ಗೃಹಾದಿಷು ॥೨೩॥
ಆರಾಮೇ ಚೈವ ಗೋಷ್ಠೇಷು ನ ವಿಶೇಥಾಃ ಕಥಂಚನ ।
ಜ್ವಾಲಾಮಾಲಾ ಕರಾಲಂ ಚ ಸಹಸ್ರಾದಿತ್ಯಸನ್ನಿಭಂ ॥೨೪॥
ಚಕ್ರಂ ವಿಷ್ಣೋ ರತೀವೋಗ್ರಂ ತೇಷಾಂ ಹಂತಿ ಸದಾ ಶುಭಂ ।
ಸ್ವಾಹಾಕಾರೋ ವಷಟ್ಕಾರೋ ಗೃಹೇ ಯಸ್ಮಿನ್ನ ವರ್ತತೇ ॥೨೫॥
ತದ್ಧಿತ್ವಾ ಚಾನ್ಯ ಮಾಗಚ್ಛ ಸಾಮಘೋಷೋಽಥ ಯತ್ರ ವಾ ।
ವೇದಾಭ್ಯಾಸ ರತಾ ನಿತ್ಯಂ ನಿತ್ಯಕರ್ಮ ಪರಾಯಣಾಃ ॥೨೬॥

---

ಮಾಧವನೇ, ನಿನಗೆನಮಸ್ಕಾರವು. ಎಂಬುದಾಗಿ ಸಂತೋಷಗೊಂಡ ಯಾವ ಬ್ರಾಹ್ಮಣ, ಕ್ಷತ್ರಿಯ ವೈಶ್ಯ, ಶೂದ್ರರು ಯಾವಾಗಲೂ ಹೇಳುತ್ತಾರೋ

೨೪. ಅವರ ಮನೆಯೇ ಮೊದಲಾದುವುಗಳಲ್ಲೂ, ತೋಟದಲ್ಲೂ, ದನದ ಕೊಟ್ಟಿಗೆಯಲ್ಲೂ ಸಹ ಇವಳು ಪ್ರವೇಶಿಸುವುದಿಲ್ಲ. ಸಾವಿರ ಸಂಖ್ಯೆಯುಳ್ಳ ಸೂರ್ಯರ ತೇಜಸ್ಸಿಗೆ ಸಮಾನವಾದ ಬಹಳ ಉಗ್ರವಾದ ಜ್ವಾಲಾಸಮೂಹದಿಂದ ಯುಕ್ತವಾದ ವಿಷ್ಣುಚಕ್ರವು ಅಂತಹವರ ಅಶುಭ ವನ್ನು ಯಾವಾಗಲೂ ನಾಶಪಡಿಸುತ್ತದೆ.

೨೫. ಸ್ವಾಹಾಕಾರ, ವಷಟ್ಕಾರಗಳು ಯಾವಮನೆಯಲ್ಲಿ ಕೇಳಿಬರು ತ್ತವೋ, ಸಾಮ ವೇದವು ಯಾವ ಸ್ಥಳದಲ್ಲಿ ಪಠಿಸಲ್ಪಡುತ್ತದೋ, ಅಂತಹ ಸ್ಥಳವನ್ನು ಬಿಟ್ಟು ಬೇರೆ ಕಡೆ ಬಂದುಬಿಡು.

೨೬. ಯಾವಾಗಲೂ ವೇದವನ್ನು ಕಲಿಯುವುದರಲ್ಲಿ ಆಸಕ್ತರೂ, ಶ್ರೌತಸ್ಮಾರ್ತಕರ್ಮಗಳ ಆಚರಣೆ ಮಾಡುವವರೂ, ಮತ್ತು ಪರಮಾತ್ಮನ ಸೇವೆಯಲ್ಲಿ ನಿರತರೂ, ಆದವರು ಯಾರುಂಟೋ ಅವರನ್ನು ದೂರದಿಂದಲೇ ತ್ಯಜಿಸಬೇಕು.

ವಾಸುದೇವಾರ್ಚನ ರತಾ ದೂರತಸ್ತಾನ್ವಿಸರ್ಜಯೇತ್ ।
ಅಗ್ನಿಹೋತ್ರಂ ಗೃಹೇ ಯೇಷಾಂ ಲಿಂಗಾರ್ಚಾ ವಾ ಗೃಹೇಷು ಚ ॥
ವಾಸುದೇವ ತನುರ್ವಾಽಪಿ ಚಂಡಿಕಾ ಯತ್ರ ತಿಷ್ಠತಿ ।
ದೂರತೋ ವ್ರಜ ತಾನ್ಹಿತ್ವಾ ಸರ್ವ ಪಾಪ ವಿವರ್ಜಿತಾನ್ ॥೨೮॥
ನಿತ್ಯ ನೈಮಿತ್ತಿಕೈರ್ಯಜ್ಞೈಃಯಜಂತಿ ಚ ಮಹೇಶ್ವರಂ ।
ತಾನ್ಹಿತ್ವಾ ವ್ರಜ ಚಾನ್ಯತ್ರ ದುಸ್ಸಹ ತ್ವಂ ಸಹಾನಯಾ ॥೨೯॥
ಶ್ರೋತ್ರಿಯಾ ಬ್ರಾಹ್ಮಣಾ ಗಾವೋ ಗುರವೋಽತಿಥಯಸ್ಸದಾ ।
ರುದ್ರಭಕ್ತಾಶ್ಚ ಪೂಜ್ಯಂತೇ ಯೈರ್ನಿತ್ಯಂ ತಾನ್ವಿವರ್ಜಯೇತ್ ॥೩೦॥

॥ ದುಸ್ಸಹ ಉವಾಚ ॥

ಯಸ್ಮಿನ್ಪ್ರವೇಶೋ ಯೋಗ್ಯೋ ಮೇ ತದ್ಬ್ರೂಹಿ ಮುನಿಸತ್ತಮ ।
ತ್ವದ್ವಾಕ್ಯಾದ್ಭಯ ನಿರ್ಮುಕ್ತೋ ವಿಶಾಮ್ಯೇಷಾಂ ಗೃಹೇ ಸದಾ ॥

---

೨೭. ಯಾರ ಮನೆಯಲ್ಲಿ ಅಗ್ನಿಹೋತ್ರ ವಿರುವುದೋ, ಯಾರ ಮನೆಯಲ್ಲಿ ಲಿಂಗದ ಪೂಜೆಯು ಸಾರ್ವಕಾಲದಲ್ಲೂ ನಡೆಯುತ್ತಿರುವುದೋ ಎಲ್ಲಿ ವಾಸುದೇವನ ಪ್ರತಿಮೆಯೂ, ಚಂಡಿಕಾ ವಿಗ್ರಹವೂ, ಇರುವುದೋ,

೨೮. ಸಕಲ ಪಾಪ ಮುಕ್ತರೂ ಆದ ಆ ಭಕ್ತರನ್ನು ಬಿಟ್ಟು ದೂರ ದಿಂದಲೇ ಹೊರಟುಹೋಗು.

೨೯. ಯಾವಾಗಲೂ ಆಚರಿಸುವ ಮತ್ತು ನೈಮಿತ್ತಿಕವಾದ ಯಜ್ಞ ಗಳಿಂದ ಮಹೇಶ್ವರನನ್ನು ಯಾರು ಪೂಜಿಸುತ್ತಾರೋ ಅಂತಪವರನ್ನು ಎಲೈ ದುಸ್ಸಹನೇ, ಈ ಜ್ಯೇಷ್ಠಾ ದೇವಿಯೊಡನೆ ಪ್ರವೇಶಿಸಬೇಡ. ಬೇರೆಯ ಕಡೆಗೆ ಹೊರಟುಹೋಗುವವನಾಗು.

೩೦. ಯಾವಾಗಲೂ ಬ್ರಾಹ್ಮಣರೂ, ಗೋವುಗಳೂ, ಗುರುಗಳೂ, ಅತಿಥಿಗಳೂ, ಶ್ರೋತ್ರಿಯರೂ ವಾಸಿಸುವ ಸ್ಥಳವನ್ನು ಬಿಟ್ಟು ಬಿಡಬೇಕು. ಹಾಗೆಯೇ ಯಾರು ಈಶ್ವರ ಭಕ್ತರನ್ನು ಯಾವಾಗಲೂ ಸತ್ಕರಿಸುತ್ತಾರೋ ಅಂತಹವರನ್ನೂ ಸಹ ಬಿಡಬೇಕು.

೩೧. ದುಸ್ಸಹನು ಹೇಳಿದನು : ಓ ಮುನಿಶ್ರೇಷ್ಠನೇ, ಎಲ್ಲಿ ನನಗೆ ಪ್ರವೇಶವು ಯೋಗ್ಯವು? ಅದನ್ನು ಹೇಳುವವನಾಗು. ಭಯದಿಂದ

॥ ಮಾರ್ಕಂಡೇಯ ಉವಾಚ ॥

ನ ಶ್ರೋತ್ರಿಯಾ ದ್ವಿಜಾ ಗಾವೋ ಗುರವೋಽತಿಥಯಸ್ಸದಾ ।
ಯತ್ರ ಭರ್ತಾ ಚ ಭಾರ್ಯಾ ಚ ಪರಸ್ಪರ ವಿರೋಧಿನೌ ॥೩೨॥

ಸ ಭಾರ್ಯಸ್ತ್ವಂ ಗೃಹಂ ತಸ್ಯ ವಿಶೇಥಾ ಭಯವರ್ಜಿತಃ ।
ದೇವದೇವೋ ಮಹಾದೇವೋ ರುದ್ರ ಸ್ತ್ರಿಭುವನೇಶ್ವರಃ ॥೩೩॥

ವಿನಿಂದ್ಯೋ ಯತ್ರ ಭಗವಾನ್ ವಿಶಸ್ವ ಭಯ ವರ್ಜಿತಃ ।
ವಾಸುದೇವ ರತಿರ್ನಾಸ್ತಿ ಯತ್ರ ನಾಸ್ತಿಸದಾಶಿವಃ ॥೩೪॥

ಜಪಹೋಮಾದಿಕಂ ನಾಸ್ತಿ ಭಸ್ಮ ನಾಸ್ತಿ ಗೃಹೇ ನೃಣಾಮ್ ।
ಪರ್ವಣ್ಯಭ್ಯರ್ಚನಂ ನಾಸ್ತಿ ಚತುರ್ದಶ್ಯಾಂ ವಿಶೇಷತಃ ॥೩೫॥

---

ಬಿಡಲ್ಪಟ್ಟವನಾಗಿ ನಿನ್ನಮಾತಿನಂತೆ ಯಾರಮನೆಯಲ್ಲಿ ಯಾವಾಗಲೂ ವಾಸಮಾಡಲಿ?

೩೨. ಶ್ರೋತ್ರಿಯರೂ, ಬ್ರಾಹ್ಮಣರೂ, ಗೋವುಗಳೂ, ಅತಿಥಿಗಳು, ಎಲ್ಲಿಲ್ಲವೋ, ಎಲ್ಲಿ ಗಂಡ ಹೆಂಡಿರು ಪರಸ್ಪರ ದ್ವೇಷಿಗಳೋ ಅಂತಹ ಮನೆಯಲ್ಲಿ ಭಾರ್ಯಾಯುಕ್ತನಾಗಿ ಭಯವರ್ಜಿತನಾಗಿ ವಾಸಿಸು.

೩೩. ಸಕಲ ದೇವತೆಗಳಿಗೂ ಸ್ವಾಮಿಯೂ, ಮೂರು ಲೋಕಗಳಿಗೂ ಒಡೆಯನೂ, ಭಗವಂತನೂ ಆದ ರುದ್ರನು ಎಲ್ಲಿ ನಿಂದಿಸಲ್ಪಡುತ್ತಾನೋ ಅಲ್ಲಿ ಭಯವಿಲ್ಲದೆ ಪ್ರವೇಶಿಸು.

೩೪. ಎಲ್ಲಿ ವಾಸುದೇವನ ಪೂಜೆ ಇಲ್ಲವೋ, ಎಲ್ಲಿ ಸದಾ ಶಿವನ ಅರ್ಚನೆ ಇಲ್ಲವೋ, ಯಾವ ಮನುಷ್ಯನ ಮನೆಯಲ್ಲಿ ಜಪ ಹೋಮಾದಿಗಳಿಲ್ಲವೋ, ಎಲ್ಲಿ ಭಸ್ಮಧಾರಣವಿಲ್ಲವೋ,

೩೫–೩೬. ಪರ್ವತಿಥಿಗಳಲ್ಲಿ ಮಹಾದೇವನ ಅರ್ಚನೆಯು ಎಲ್ಲಿ ಇಲ್ಲವೋ, ಚತುರ್ದಶಿಯಲ್ಲಿ ವಿಶೇಷವಾಗಿ ದೇವನ ಅರ್ಚನೆಯಿಲ್ಲವೋ, ಕೃಷ್ಣಪಕ್ಷದ ಅಷ್ಟಮಿಯಲ್ಲಿ ರುದ್ರನ ಪೂಜೆಯಿಲ್ಲವೋ, ಸಂಧ್ಯಾಕಾಲದಲ್ಲಿ

ಕೃಷ್ಣಾಷ್ಟಮ್ಯಾಂ ಚ ರುದ್ರಸ್ಯ ಸಂಧ್ಯಾಯಾಂ ಭಸ್ಮವರ್ಜಿತಾಃ ।
ಚತುರ್ದಶ್ಯಾಂ ಮಹಾದೇವಂ ನ ಯಜಂತಿ ಚ ಯತ್ರ ವೈ ॥೩೬॥

ವಿಷ್ಣೋರ್ನಾಮ ವಿಹೀನಾ ಯೇ ಸಂಗತಾಶ್ಚ ದುರಾತ್ಮಭಿಃ ।
ನಮಃ ಕೃಷ್ಣಾಯ ಶರ್ವಾಯ ಶಿವಾಯ ಪರಮೇಷ್ಠಿನೇ ॥೩೭॥

ಬ್ರಾಹ್ಮಣಾಶ್ಚ ನರಾ ಮೂಢಾ ನ ವದಂತಿ ದುರಾತ್ಮಕಾಃ ।
ತತ್ರೈವ ಸತತಂ ಪತ್ನ ಸಭಾರ್ಯಸ್ತ್ವಂ ಸಮಾವಿಶ ॥೩೮॥

ವೇದಘೋಷೋ ನ ಯತ್ರಾಸ್ತಿ ಗುರುಪೂಜಾದಯೋ ನ ಚ ।
ಪಿತೃಕರ್ಮ ವಿಹೀನಾಸ್ತು ಸಭಾರ್ಯಸ್ತ್ವಂ ಸಮಾವಿಶ ॥೩೯॥

ರಾತ್ರೌ ರಾತ್ರೌ ಗೃಹೇ ಯಸ್ಮಿನ್ಕಲಹೋ ವರ್ತತೇ ಮಿಥಃ ।
ಅನಯಾ ಸಾರ್ಧಮನಿಶಂ ವಿಶ ತ್ವಂ ಭಯವರ್ಜಿತಃ ॥೪೦॥

---

ಯಾರು ಭಸ್ಮಾಂಕಿತರಲ್ಲವೋ, ಚತುರ್ದಶಿಯ ದಿನ ಯಾರು ಸ್ವಾಮಿಯ ಅರ್ಚನೆಯನ್ನು ಮಾಡುವುದಿಲ್ಲವೋ,

೩೭. ಯಾರು ವಿಷ್ಣುನಾಮವನ್ನು ಜಪಿಸುವುದಿಲ್ಲವೋ, ಮಹಾತ್ಮರ ಸಹವಾಸವನ್ನು ಯಾರು ಮಾಡದಿರುತ್ತಾರೋ, ದುಷ್ಟ ಮನಸ್ಸುಳ್ಳ ಯಾವ ಮೂಢನಾದ ಮನುಷ್ಯನೂ ಮತ್ತು ಯಾವ ಬ್ರಾಹ್ಮಣರೂ, ಕೃಷ್ಣನೇ, ನಿನಗೆ ನಮಸ್ಕಾರವು. ಶಿವನೇ, ನಿನಗೆ ನಮಸ್ಕಾರವು. ಎಂದು ಹೇಳುವುದಿಲ್ಲವೋ,

೩೮. ಅಂತಹವರ ಮನೆಯಲ್ಲಿ ಯಾವಾಗಲೂ ಭಾರ್ಯಾಯುಕ್ತನಾದವನಾಗಿ ವಾಸಿಸುವವನಾಗು.

೩೯. ಎಲ್ಲಿ ವೇದಘೋಷವಿಲ್ಲವೋ, ಎಲ್ಲಿ ಗುರುಪೂಜೆಇಲ್ಲವೋ, ಅಂತಹ ಮತ್ತು ಪಿತೃಕರ್ಮವನ್ನು ಬಿಟ್ಟವರ ಮನೆಯನ್ನು ನೀನು ಭಾರ್ಯಾಸಮೇತನಾಗಿ ಪ್ರವೇಶಿಸು.

೪೦. ಪ್ರತಿದಿನವೂ ರಾತ್ರಿಯಲ್ಲಿಯೂ ಯಾರಮನೆಯಲ್ಲಿ ಗುಟ್ಟಾಗಿ ಕಲಹನಡೆಯುತ್ತದೋ ಅಲ್ಲಿ ಭಯವಿಲ್ಲದವನಾಗಿ ಭಾರ್ಯೆಯೊಡನೆ ನೀನು ಯಾವಾಗಲೂ ಪ್ರವೇಶಿಸು.

ಲಿಂಗಾರ್ಚನಂ ಯಸ್ಯ ನಾಸ್ತಿ ಯಸ್ಯ ನಾಸ್ತಿ ಜಪಾದಿಕಂ ।
ರುದ್ರಭಕ್ತಿರ್ವಿನಿಂದಾ ಚ ತತ್ರೈವ ವಿಶ ನಿರ್ಭಯಃ ॥೪೧॥

ಅತಿಥಿಃ ಶ್ರೋತ್ರಿಯೋ ವಾಽಪಿ ಗುರುರ್ವಾ ವೈಷ್ಣವೋಽಪಿ ವಾ ।
ನ ಸಂತಿ ಯದ್ಗೃಹೇ ಗಾವಃ ಸ ಭಾರ್ಯಸ್ತ್ವಂ ಸಮಾವಿಶ ॥೪೨॥

ಬಾಲಾನಾಂ ಪ್ರೇಕ್ಷಮಾಣಾನಾಂ ಯತ್ರಾ ದತ್ವಾ ತ್ವಭಕ್ಷ್ಯಯನ್ ।
ಭಕ್ಷ್ಯಾಣಿ ತತ್ರ ಸಂಹೃಷ್ಟಃ ಸಭಾರ್ಯಸ್ತ್ವಂ ಸಮಾವಿಶ ॥೪೩॥

ಅನಭ್ಯರ್ಚ್ಯ ಮಹಾದೇವಂ ವಾಸುದೇವಮಥಾಪಿವಾ ।
ಅಹುತ್ವಾ ವಿಧಿವದ್ಯತ್ರ ತತ್ರ ನಿತ್ಯಂ ಸಮಾವಿಶ ॥೪೪॥

ಕದಂಬಃ ಖಾದಿರಂ ವಾಽಪಿ ಸಭಾರ್ಯಸ್ತ್ವಂ ಸಮಾವಿಶ ।
ನ್ಯಗ್ರೋಧಂ ವಾ ಗೃಹೇ ಯೇಷಾಂ ಅಶ್ವತ್ಥಂ ಚೂತಮೇವ ವಾ ॥

---

೪೧. ಎಲ್ಲಿ ಲಿಂಗಾರ್ಚನೆಯನ್ನು ಮಾಡುವುದಿಲ್ಲವೋ, ಎಲ್ಲಿ ಜಪಾದಿಗಳಿಲ್ಲವೋ, ಎಲ್ಲಿ ಈಶ್ವರ ಭಕ್ತಿಯು ಅವಹೇಳನವಾಗುವುದೋ, ಅಲ್ಲಿ ಭಯಶೂನ್ಯನಾಗಿ ಪ್ರವೇಶಿಸು.

೪೨. ಯಾರಮನೆಯಲ್ಲಿ ಅತಿಥಿಯೂ, ಶ್ರೋತ್ರಿಯನೂ, ಗುರುವೂ ವಿಷ್ಣುಭಕ್ತನೂ, ಮತ್ತು ಗೋವುಗಳೂ ಇರುವುದಿಲ್ಲವೋ, ಅಲ್ಲಿ ಭಾರ್ಯಾ ಸಮೇತನಾಗಿ ಪ್ರವೇಶಿಸು.

೪೩. ಎಲ್ಲಿ ಹುಡುಗರಿಗೂ, ಎದುರಿಗಿರುವವರಿಗೂ ಕೊಡದೆ ಭಕ್ಷ್ಯಗಳು ತಿನ್ನಲ್ಪಡುತ್ತವೆಯೋ ಅಲ್ಲಿ ಸಂತೋಷದಿಂದ ಭಾರ್ಯಾ ಸಮೇತನಾಗಿ ಪ್ರವೇಶಿಸು.

೪೪. ಎಲ್ಲಿ ಪರಮೇಶ್ವರನನ್ನು ಅರ್ಚಿಸುವುದಿಲ್ಲವೋ, ಹಾಗೆಯೇ ವಾಸುದೇವನನ್ನೂ ಅರ್ಚಿಸುವುದಿಲ್ಲವೋ, ಹೋಮ ಹವನಗಳನ್ನು ವಿಧಿ ಪೂರ್ವಕವಾಗಿ ಮಾಡುವುದಿಲ್ಲವೋ ಅಲ್ಲಿ ಪ್ರವೇಶಿಸು.

ಪಾಪಕರ್ಮ ರತೌಮೂಢೌ ದಯಾ ಹೀನೌ ಪರಸ್ಪರಮ್ ।
ಗೃಹೇ ಯಸ್ಮಿನ್ನಮಾಸಂತೇ ದೇಶೇ ವಾ ತತ್ರ ಸಂವಿಶ ॥೪೫॥

ಪ್ರಾಕಾರಾಗಾರವಿಧ್ವಂಸಾ ನ ಚೈವೇಡ್ಯಾ ಕುಟುಂಬಿನೀ ।
ತದ್ಗೃಹಂ ತು ಸಮಾಸಾದ್ಯ ವಸ ನಿತ್ಯಂ ಹಿ ಹೃಷ್ಟಧೀಃ ॥೪೬॥

ಯತ್ರ ಕಂಟಕಿನೋ ವೃಕ್ಷಾ ಯತ್ರ ನಿಷ್ಪಾವವಲ್ಲರೀ ।
ಬ್ರಹ್ಮವೃಕ್ಷಶ್ಚ ಯತ್ರಾಸ್ತಿ ಸಭಾರ್ಯಸ್ತ್ವ ಸಮಾವಿಶ ॥೪೭॥

ಅಗಸ್ತ್ಯಾರ್ಕಾದಯೋ ವಾಽಪಿ ಬಂಧುಜೀವೋ ಗೃಹೇಷು ವೈ ।
ಕರವೀರೋ ವಿಶೇಷೇಣ ನಂದ್ಯಾವರ್ತ ಮಥಾಪಿ ವಾ ॥೪೮॥

ಕನ್ಯಾ ಚ ಯತ್ರ ವೈ ವಲ್ಲೀ ದ್ರೋಹೀ ವಾ ಚ ಜಟೀ ಗೃಹೇ ॥೪೯॥

---

೪೫. ದಂಪತಿಗಳು ಮೂಢರಾಗಿಯೂ ಪಾಪಕರ್ಮಗಳನ್ನು ಮಾಡುವವರಾಗಿಯೂ, ಪರಸ್ಪರ ದಯಾಶೂನ್ಯರಾಗಿ ಯಾವ ಮನೆಯಲ್ಲಾಗಲೀ ಯಾವ ದೇಶದಲ್ಲಾಗಲೀ ವಾಸಮಾಡುತ್ತಾರೋ ಅಲ್ಲಿ ಯಾವಾಗಲೂ ಪ್ರವೇಶಿಸು.

೪೬. ಪ್ರಾಕಾರ ಮತ್ತು ಮನೆಗಳನ್ನು ನಾಶಪಡಿಸುವ, ಕೆಟ್ಟಸ್ವಭಾವದಿಂದ ಯಾರ ಪ್ರಶಂಸೆಗೂ ಪಾತ್ರಳಾಗದ ಗೃಹಿಣಿಯು ಎಲ್ಲಿರುವಳೋ, ಅಂತಹ ಮನೆಯನ್ನು ಸೇರಿ ಸಂತೋಷದಿಂದ ವಾಸಿಸುವವನಾಗು.

೪೭. ಎಲ್ಲಿ ಮುಳ್ಳುಗಿಡಗಳಿರುತ್ತವೆಯೋ, ಎಲ್ಲಿ ಅವರೆಯ ಬಳ್ಳಿಯಿರುವುದೋ, ಎಲ್ಲಿ ಪಾಲಾಶ (ಮುತ್ತುಗ) ವೃಕ್ಷವಿರುವುದೋ, ಅಲ್ಲಿ ಪತ್ನೀ ಸಮೇತನಾಗಿ ಪ್ರವೇಶಿಸು.

೪೮. ಯಾವ ಮನೆಯಲ್ಲಿ ಅಗಸ್ತ್ಯ ಮತ್ತು ಯಕ್ಕದಗಿಡಗಳೂ, ಕೆಂಪುದಾಸವಾಳದಗಿಡವೂ, ಕರವೀರ ಪುಷ್ಪದಗಿಡವೂ ತಗರಮರವೂ, ಮಲ್ಲಿಗೆ ಗಿಡವೂ ಇರುವುದೋ ಅಲ್ಲಿ ಪತ್ನೀಸಮೇತನಾಗಿ ಪ್ರವೇಶಿಸು.

೪೯–೫೦. ವಿಷ್ಣುಕ್ರಾಂತಗಿಡವೂ, ವಲ್ಲೀಗಿಡವೂ, ನಿಂಬವೃಕ್ಷವೂ, ಜುಲ್ಲೀಗಿಡವೂ, ಹೆಚ್ಚಾದ ಕದಲೀ ವೃಕ್ಷವೂ ತಾಲವೃಕ್ಷವೂ, ತಮಾಲ

ಬಹುಲಾ ಕದಲೀ ಯತ್ರ ಸಭಾರ್ಯಸ್ತ್ವಂ ಸಮಾವಿಶ ।
ತಾಲಂ ತಮಾಲಂ ಭಲ್ಲಾತಂ ತಿಂತ್ರಿಡೀಖಂಡಮೇವ ಚ ॥೫೦॥
ಕದಂಬಃ ಖಾದಿರಂ ವಾಽಪಿ ಸಭಾರ್ಯಸ್ತ್ವಂ ಸಮಾವಿಶ ।
ನ್ಯಗ್ರೋಧಂ ವಾ ಗೃಹೇ ಯೇಷಾಂ ಅಶ್ವತ್ಥಂ ಚೂತಮೇವ ವಾ ॥
ಉದುಂಬರಂ ವಾ ಪನಸಂ ಸಭಾರ್ಯಸ್ತ್ವಂ ಸಮಾವಿಶ ।
ಯಸ್ಯಕಾಕ ಗೃಹಂ ನಿಂಬೇ ಆರಾಮೇ ವಾ ಗೃಹೇಽಪಿ ವಾ ॥೫೨॥
ದಂಡಿನೀ ಮುಂಡಿನೀ ವಾಽಪಿ ಸಭಾರ್ಯಸ್ತ್ವಂ ಸಮಾವಿಶ ।
ಏಕಾ ದಾಸೀ ಗೃಹೇ ಯತ್ರ ತ್ರಿಗವಂ ಪಂಚಮಾಹಿಷಂ ॥೫೩॥
ಷಡಶ್ವಂ ಸಪ್ತಮಾತಂಗಂ ಸಭಾರ್ಯಸ್ತ್ವಂ ಸಮಾವಿಶ ।
ಯಸ್ಯ ಕಾಲೀ ಗೃಹೇ ದೇವೀ ಪ್ರೇತರೂಪಾ ಚ ಡಾಕಿನೀ ॥೫೪॥

---

ವೃಕ್ಷವೂ, ಗೇರುಮರವೂ ಮತ್ತು ತಿಂತ್ರಿಡೀಮರವೂ, ಎಲ್ಲಿರುತ್ತದೋ, ಅಲ್ಲಿ ಭಾರ್ಯಾಸಮೇತನಾಗಿ ವಾಸಿಸು.

೫೧. ಈಚಲಗಿಡ, ಕಗ್ಗಲಿಗಿಡ, ವಟವೃಕ್ಷ ಮತ್ತು ಅಶ್ವತ್ಥವೃಕ್ಷ ಎಲ್ಲಿರುತ್ತದೋ ಅಲ್ಲಿ ಪತ್ನಿಯೊಡನೆ ವಾಸಿಸು.

೫೨. ಉದುಂಬರವೃಕ್ಷ, ಹಲಸಿನಮರ ಎಲ್ಲಿದೆಯೋ ಅಲ್ಲಿಯೂ ಮತ್ತು ಯಾರ ಮನೆಯ ತೋಟದಲ್ಲಿ ನಿಂಬವೃಕ್ಷದಲ್ಲೇ ಆಗಲೀ ಕಾಕ ಗೃಹ ವಿದ್ದರೆ ಅಲ್ಲಿಯೂ ವಾಸಿಸು.

೫೩. ದಂಡಯುಕ್ತರಾದವರ, ನರಮುಂಡ ಯುಕ್ತರಾದವರ ಮನೆಯನ್ನು ಪ್ರವೇಶಿಸು. ಯಾರಮನೆಯಲ್ಲಿ ಒಬ್ಬಳೇ ದಾಸಿಯೂ, ಮೂರು ಹಸುಗಳೂ, ಐದು ಎಮ್ಮೆಗಳೂ ಆರು ಕುದುರೆಗಳೂ, ಏಳು ಗಜಗಳೂ ಇರುವುವೋ, ಅಲ್ಲಿ ಪತ್ನಿಸಮೇತನಾಗಿ ಪ್ರವೇಶಿಸು.

೫೪. ಯಾವ ಮನೆಯಲ್ಲಿ ಕಾಳೀ ವಿಗ್ರಹವೂ, ಪ್ರೇತಸ್ವರೂಪಳಾದ (ಸದೃಶಳಾದ)ಡಾಕಿನೀ ಶಾಕಿನೀ ಮೊದಲಾದ ದೇವತೆಗಳೂ ಇರುತ್ತಾರೋ, ಎಲ್ಲಿ ಭೈರವನು ಇರುವನೋ ಅಲ್ಲಿ ಭಾರ್ಯಾಸಮೇತನಾಗಿ ಪ್ರವೇಶಿಸು.

ಕ್ಷೇತ್ರಪಾಲೋಽಥ ವಾ ಯತ್ರ ಸಭಾರ್ಯಸ್ತ್ವಂ ಸಮಾವಿಶ ।
ಭಿಕ್ಷುಬಿಂಬಂ ಚ ವೈ ಯಸ್ಯ ಗೃಹೇ ಕ್ಷಪಣಕಂ ತಥಾ ॥೫೫॥
ಬೌದ್ಧಂ ವಾ ಬಿಂಬಮಾಸಾದ್ಯ ತತ್ರ ಪೂರ್ಣಂ ಸಮಾವಿಶ ।
ಶಯನಾಸನ ಕಾಲೇಷು ಭೋಜನಾಟನವೃತ್ತಿಷು ॥೫೬॥
ಯೇಷಾಂ ವದತಿ ನೋ ವಾಣೀ ನಾಮಾನಿ ಚ ಹರೇಸ್ಸದಾ ।
ತದ್ಗೃಹಂ ತೇ ಸಮಾಖ್ಯಾತಂ ಸಭಾರ್ಯಸ್ಯ ನಿವೇಶಿತುಮ್ ॥೫೭॥
ಪಾಪಕರ್ಮರತಾ ಮೂಢಾ ದಯಾ ಹೀನಾಃ ಪರಸ್ಪರಮ್ ।
ಗೃಹೇ ಯಸ್ಮಿನ್ ಸಮಾಸಂತೇ ದೇಶೇ ವಾ ತತ್ರ ಸಂವಿಶ ॥
ಪಾಷಂಡಾಚಾರನಿರತಾಃ ಶ್ರೌತಸ್ಮಾರ್ತಬಹಿಷ್ಕೃತಾಃ ।
ವಿಷ್ಣುಭಕ್ತಿವಿನಿರ್ಮುಕ್ತಾಃ ಮಹಾದೇವ ವಿನಿಂದಕಾಃ ॥೫೮॥
ನಾಸ್ತಿಕಾಶ್ಚ ಶಠಾ ಯತ್ರ ಸಭಾರ್ಯಸ್ತ್ವಂ ಸಮಾವಿಶ ।
ಸರ್ವಸ್ಮಾದಧಿಕ ತ್ವಂ ಯೇ ನ ವದಂತಿ ಪಿನಾಕಿನಃ ॥೫೯॥

---

೫೫. ಯಾವನ ಮನೆಯಲ್ಲಿ ಸನ್ಯಾಸಿಯ ಮತ್ತು ಕ್ಷಪಣಕನ ಪ್ರತಿಬಿಂಬಗಳಿರುವುವೋ, ಎಲ್ಲಿ ಬುದ್ಧನ ಪ್ರತಿಬಿಂಬವಿರುವುದೋ, ಅಂತಹ ಪ್ರದೇಶಗಳನ್ನು ಪ್ರವೇಶಿಸು.

೫೬–೫೭. ಮಲಗಿಕೊಳ್ಳುವಾಗ, ಕುಳಿತಿರುವಾಗ, ಭೋಜನಕಾಲದಲ್ಲೂ, ತಿರುಗಾಡುವಾಗ ಯಾರವಾತು ಹರಿನಾಮಗಳನ್ನು ಹೇಳುವುದಿಲ್ಲವೋ, ಎಂದರೆ ಯಾರು ಹರಿಸ್ಮರಣೆಮಾಡುವುದಿಲ್ಲವೋ, ಅಂತಹವರ ಮನೆಯು ನಿನಗೆ ಭಾರ್ಯಾಯುಕ್ತನಾಗಿ ವಾಸಿಸಲು ನಿಯೋಜಿಸಲ್ಪಟ್ಟಿರುತ್ತೆ.

೫೮. ಶ್ರೌತಸ್ಮಾರ್ತ ಕರ್ಮಗಳಿಂದ ಬಾಹಿರರೂ,ವೇದಕ್ಕೆ ಅನುಮತವಲ್ಲದ ಆಚಾರದಲ್ಲಿ ಆಸಕ್ತರೂ, ವಿಷ್ಣುವಿನಲ್ಲಿ ಭಕ್ತಿಯಿಲ್ಲದವರೂ, ಮಹಾದೇವನನ್ನು ನಿಂದಿಸುವರೂ,ಆದ ಮೂರ್ಖರೂ ಮತ್ತು ನಾಸ್ತಿಕರೂ ಎಲ್ಲೆಲ್ಲಿರುವರೋ ಅಲ್ಲಿ ಪತ್ನೀಸಹಿತನಾಗಿ ಪ್ರವೇಶಿಸು.

೫೯. ಈಶ್ವರನನ್ನು ಎಲ್ಲ ದೇವತೆಗಳಿಗಿಂತಲೂ ಅಧಿಕನನ್ನಾಗಿ ಯಾರು ತಿಳಿಯುವುದಿಲ್ಲವೋ, ಈಶ್ವರನನ್ನು ಯಾರು ಸಾಮಾನ್ಯನೆಂದೂ

ಸಾಧಾರಣಂ ಸ್ಮರಂತ್ಯೇನಂ ಸಭಾರ್ಯಸ್ತ್ವಂ ಸಮಾವಿಶ ।
ಬ್ರಹ್ಮಾ ಚ ಭಗವಾನ್ ವಿಷ್ಣುಃ ಶಕ್ರಸ್ಸರ್ವಸುರೇಶ್ವರಃ ॥೬೦॥
ರುದ್ರಪ್ರಸಾದಜಾಶ್ಚೇತಿ ನ ವದಂತಿ ದುರಾತ್ಮಕಾಃ ।
ಬ್ರಹ್ಮಾ ಚ ಭಗವಾನ್ ವಿಷ್ಣುಃ ಶಕ್ರಶ್ಚ ಸಮ ಏವಚ ॥೬೧॥
ವದಂತಿ ಮೂಢಾಃ ಖದ್ಯೋತಂ ಭಾನುಂ ವಾ ಮೂಢಚೇತಸಃ ।
ತೇಷಾಂ ಗೃಹೇ ತಥಾಕ್ಷೇತ್ರ ಆವಾಸೇ ವಾ ಸದಾಽನಯಾ ॥೬೨॥
ವಿಶ ಭುಂಕ್ಷ್ವ ಗೃಹಂ ತೇಷಾಂ ಅಪಿ ಪೂರ್ಣಮನನ್ಯಧೀಃ ।
ಯೋಽಶ್ನಂತಿ ಕೇವಲಂ ಮೂಢಾಃ ಪಕ್ವಮನ್ನಂ ವಿಚೇತಸಃ ॥೬೩॥

---

ತಿಳಿಯುತ್ತಾರೋ ಅಂತಹವರ ಮನೆಯನ್ನು ಪತ್ನೀ ಸಮೇತನಾಗಿ ಪ್ರವೇಶಿಸು.

೬೦. ಬ್ರಹ್ಮನೂ, ಭಗವಂತನಾದ ವಿಷ್ಣುವೂ, ಸಕಲ ದೇವತೆಗಳಿಗೂ ಒಡೆಯನಾದ ಇಂದ್ರನೂ. ಈಶ್ವರನ ಅನುಗ್ರಹದಿಂದಲೇ ಉತ್ಪನ್ನರು ಎಂದು ಯಾವ ದುರಾತ್ಮರು ಹೇಳುವುದಿಲ್ಲವೋ,

೬೧–೬೨. ಯಾವ ಮೂಢರು ತಮ್ಮ ದುಷ್ಟ ಬುದ್ಧಿಯಿಂದ ಬ್ರಹ್ಮನೂ, ಭಗವಂತನಾದ ವಿಷ್ಣುವೂ, ಇಂದ್ರನೂ ಮತ್ತು ಸೂರ್ಯನೂ ಸಮಾನರು ಎಂಬುದಾಗಿ ಹೇಳುತ್ತಾರೋ, ಅಂತಹವರ ಮನೆಯಲ್ಲೂ, ಸ್ಥಳದಲ್ಲೂ, ಅಂತಹ ಜನರು ವಾಸಮಾಡುವ ಪ್ರದೇಶದಲ್ಲೂ ಕೂಡ ಈ ಜ್ಯೇಷ್ಠಾದೇವಿಯೊಡನೆ ಕೂಡಿ ನೀನು ಯಾವಾಗಲೂ ನಿಶ್ಚಿಂತೆಯಿಂದ ಪ್ರವೇಶಿಸು ಮತ್ತು ಅಂತಹವರ ಮನೆಯನ್ನು ನಿನ್ನದಾಗಿ ತಿಳಿದು ಅನುಭವಿಸು.

೬೩. ಯಾರು ಸ್ನಾನಾದಿ ಮಂಗಲ ಕಾರ್ಯಗಳನ್ನು ಬಿಟ್ಟು ಅಜ್ಞಾನದಿಂದ ಬೇಯಿಸಿದ ಅನ್ನವನ್ನು ಭುಂಜಿಸುತ್ತಾರೋ, ಅಂತಹವರ ಮನೆಯನ್ನು ಪ್ರವೇಶಿಸು.

ಸ್ನಾನಮಂಗಲಹೀನಾಶ್ಚ ತೇಷಾಂ ತ್ವಂ ಗೃಹಮಾವಿಶ ।
ಯಾ ನಾರೀ ಶೌಚವಿಭ್ರಷ್ಟಾ ದೇಹಸಂಸ್ಕಾರವರ್ಜಿತಾ ॥೬೪॥

ಸರ್ವಭಕ್ಷರತಾ ನಿತ್ಯಂ ತಸ್ಯಾಸ್ಸ್ಥಾನೇ ಸಮಾವಿಶ ।
ಮಲಿನಾಸ್ಯಾಃ ಸ್ವಯಂ ಮರ್ತ್ಯಾ ಮಲಿನಾಂಬರಧಾರಿಣಃ ॥೬೫॥

ಮಲದಂತಾ ಗೃಹಸ್ಥಾಶ್ಚ ಗೃಹೇ ತೇಷಾಂ ಸಮಾವಿಶ ।
ಪಾದಶೌಚ ವಿನಿರ್ಮುಕ್ತಾಃ ಸಂಧ್ಯಾಕಾಲೇ ಚ ಶಾಯಿನಃ ॥೬೬॥

ಸಂಧ್ಯಾಯಾಮಶ್ನುತೇ ಯೇ ವೈ ಗೃಹಂ ತೇಷಾಂ ಸಮಾವಿಶ ।
ಅತ್ಯಾಶನರತಾ ಮರ್ತ್ಯಾ ಅತಿಪಾನರತಾ ನರಾಃ ॥೬೭॥

ದ್ಯೂತವಾದಪ್ರಿಯಾ ಮೂಢಾಃ ಗೃಹೇ ತೇಷಾಂ ಸಮಾವಿಶ ।
ಬ್ರಹ್ಮಸ್ವಹಾರಿಣೋ ಯೇ ಚಾಯೋಗ್ಯಾಂಶ್ಚೈವ ಯಜಂತಿ ವಾ ॥

---

೬೪. ಶೌಚಾದಿ ಕರ್ಮಗಳನ್ನು ಮಾಡದಿರುವ, ದೇಹಸಂಸ್ಕಾರಗಳನ್ನು ಬಿಟ್ಟು ಇರುವ, ಎಲ್ಲವನ್ನೂ ತಾನೇ ತಿನ್ನುವುದರಲ್ಲಿ ಆಸಕ್ತಳಾಗಿರುವ ಹೆಂಗಸು ಎಲ್ಲಿ ವಾಸಿಸುವಳೋ, ಅಲ್ಲಿ ನೀನು ಯಾವಾಗಲೂ ಪ್ರವೇಶಿಸು.

೬೫. ಮಲಿನವಾದ ಮುಖವುಳ್ಳವರೂ, ಕೊಳೆ ಬಟ್ಟೆಯನ್ನು ಧರಿಸಿದವರೂ ಆದ ಯಾವಮನುಷ್ಯರಿರುವರೋ, ಕೊಳೆಯಿರುವ ಹಲ್ಲುಳ್ಳ ಗೃಹಸ್ಥರೂ ಯಾರುಂಟೋ, ಅಂತಹವರ ಮನೆಯನ್ನು ಪ್ರವೇಶಿಸು.

೬೬. ಕಾಲನ್ನು ತೊಳೆಯದಿರುವವರ, ಸಂಧ್ಯಾಕಾಲದಲ್ಲಿ ಮಲಗಿರುವವರ, ಸಂಧ್ಯಾ ಸಮಯದಲ್ಲಿ ಊಟ ಮಾಡುವವರ ಮನೆಯನ್ನು ಪ್ರವೇಶಿಸು.

೬೭. ಹೆಚ್ಚು ತಿನ್ನುವುದರಲ್ಲಿ ಆಸಕ್ತರಾದವರೂ, ಅತಿ ಕುಡಿತದಲ್ಲಿ ಆಸಕ್ತರೂ, ಜೂಜು, ವ್ಯರ್ಥವಾದವಿವಾದದಿಂದ ಮೂಢರೂ, ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವವರೂ, ಪೂಜಾಯೋಗ್ಯವಲ್ಲದ ದೇವತೆಗಳನ್ನು ಆರಾಧಿಸುವವರೂ ಎಲ್ಲಿರುತ್ತಾರೋ, ಅಂತಹವರ ಮನೆಯಲ್ಲಿ ವಾಸಿಸು.

೬೮–೭೦. ಮದ್ಯಪಾನದಲ್ಲಿ ಆಸಕ್ತರೂ, ಮಾಂಸವನ್ನು ತಿನ್ನುವವರೂ, ಶೂದ್ರಾನ್ನವನ್ನು ತಿನ್ನುವವರೂ ಆದ ಪಾಪಿಷ್ಠರ ಮನೆಯನ್ನು ಸೇರು.

ಶೂದ್ರಾನ್ನ ಭೋಜಿನೋ ವಾಽಪಿ ಗೃಹೇ ತೇಷಾಂ ಸಮಾವಿಶ ।
ಮದ್ಯಪಾನರತಾಃ ಪಾಪಾ ಮಾಂಸಭಕ್ಷಣ ತತ್ಪರಾಃ ॥೬೯॥
ಪರದಾರರತಾ ಮರ್ತ್ಯಾ ಗೃಹಂ ತೇಷಾಂ ಸಮಾವಿಶ ।
ಪರ್ವಣ್ಯನರ್ಚಾಭಿರತಾ ಮೈಥುನೇ ವಾ ದಿವಾ ರತಾಃ ॥೭೦॥
ಸಂಧ್ಯಾಯಾಂ ಮೈಥುನಂ ಯೇಷಾಂ ಗೃಹೇ ತೇಷಾಂ ಸಮಾವಿಶ ।
ಪೃಷ್ಠತೋ ಮೈಥುನಂ ಯೇಷಾಂ ಶ್ವಾನವನ್ಮೃಗವಚ್ಚ ವಾ ॥೭೧॥
ಜಲೇ ವಾ ಮೈಥುನಂ ಕುರ್ಯಾತ್ಸಭಾರ್ಯಸ್ತ್ವಂ ಸಮಾವಿಶ ।
ರಜಸ್ವಲಾಂ ಸ್ತ್ರಿಯಂ ಗಚ್ಛೇಚ್ಚಾಂಡಾಲೀಂ ವಾ ನರಾಧಮಃ ॥೭೨॥
ಕನ್ಯಾಂ ವಾ ಗೋ ಗೃಹೇ ವಾಽಪಿ ಗೃಹಂ ತೇಷಾಂ ಸಮಾವಿಶ ।
ಬಹುನಾ ಕಿಂ ಪ್ರಲಾಪೇನ ನಿತ್ಯಕರ್ಮ ಬಹಿಷ್ಕೃತಾಃ ॥೭೩॥

---

ಯಾವ ಮನುಷ್ಯನು ಪರಸ್ತ್ರೀಯಲ್ಲಿ ಕಾಮಸುಖವನ್ನು ಅಪೇಕ್ಷಿಸುತ್ತಾನೋ, ಯಾವನು ಪರ್ವಕಾಲದಲ್ಲಿ ಯುಕ್ತವಾದ ಪೂಜಾಕಾರ್ಯಗಳನ್ನು ಮಾಡುವುದಿಲ್ಲವೋ, ಯಾವನು ಮೈಥುನವನ್ನು ಹಗಲಿನಲ್ಲೂ, ಸಂಧ್ಯಾ ಕಾಲದಲ್ಲೂ ಅಪೇಕ್ಷಿಸುತ್ತಾನೋ ಅಂತಹವನ ಮನೆಯನ್ನು ಪ್ರವೇಶಿಸು.

೭೧. ನಾಯಿಯಂತೆಯೂ ಮೃಗಾದಿಗಳಂತೆಯೂ ಯಾರು ಹಿಂಭಾಗದಿಂದ ಮೈಥುನವನ್ನು ಅಪೇಕ್ಷಿಸುವರೋ, ಯಾರು ನೀರಿನಲ್ಲಿ ಮೈಥುನವನ್ನು ಮಾಡುವರೋ ಅಂತಹವರು ವಾಸಿಸುವಸ್ಥಳದಲ್ಲಿ ಪತ್ನೀ ಸಮೇತನಾಗಿ ಪ್ರವೇಶಿಸು.

೭೨. ಯಾವ ನೀಚಮನುಷ್ಯನು ರಜಸ್ವಲೆಯಾದ ಸ್ತ್ರೀಯನ್ನೋ, ಕನ್ಯೆಯನ್ನೇ ಆಗಲೀ ಉಪಭೋಗಿಸುವನೋ ಮತ್ತು ಗೋಶಾಲೆಯಲ್ಲಿ ಸ್ತ್ರೀಸಹವಾಸ ಮಾಡುತ್ತಾನೋ, ಅಂತಹವನ ಮನೆಯನ್ನು ಪ್ರವೇಶಿಸು

೭೩. ಹೆಚ್ಚಿಗೆ ಹೇಳಿಏನು ಪ್ರಯೋಜನ? ಶ್ರೌತಸ್ಮಾರ್ತ ವಿಹಿತವಾದ ನಿತ್ಯಕರ್ಮಗಳನ್ನು ಯಾರು ಮಾಡುವುದಿಲ್ಲವೋ, ಯಾರಲ್ಲಿ ಈಶ್ವರ ಭಕ್ತಿ ಇರುವುದಿಲ್ಲವೋ ಅಂತಹವರ ಮನೆಯನ್ನು ಪ್ರವೇಶಿಸು.

ರುದ್ರಭಕ್ತಿವಿಹೀನಾ ಯೇ ಗೃಹಂ ತೇಷಾಂ ಸಮಾವಿಶ ।
ಶೃಂಗೈರ್ದಿವ್ಯೌಷಧೈಃ ಕ್ಷುದ್ರೈಃ ಶೇಫ ಆಲಿಪ್ಯ ಗಚ್ಛತಿ ॥೭೪॥
ಭಗದ್ರಾವಂ ಕರೋತ್ಯಸ್ಮಾತ್ಸಭಾರ್ಯಸ್ತ್ವಂ ಸಮಾವಿಶ ।

॥ ಸೂತ ಉವಾಚ ॥

ಇತ್ಯುಕ್ತ್ವಾ ಸ ಮುನಿಃ ಶ್ರೀಮಾನ್ಮಾರ್ಕಂಡೇಯೋ ಮಹಾತಪಾಃ ॥
ಬ್ರಹ್ಮರ್ಷಿರ್ಬ್ರಹ್ಮಸಂಕಾಶಸ್ತತ್ರೈವಾಂ ತರ್ಧಿಮಾತನೋತ್ ।
ದುಸ್ಸಹಶ್ಚ ತಥೋಕ್ತಾನಿ ಸ್ಥಾನಾನಿ ಚ ಸಮಾಯಯೌ ॥೭೬॥
ವಿಶೇಷಾದ್ದೇವ ದೇವಸ್ಯ ವಿಷ್ಣೋರ್ನಿಂದಾರತಾತ್ಮನಾಮ್ ।
ಸಭಾರ್ಯೋ ಮುನಿಶಾರ್ದೂಲಃ ಸೈಷಾ ಜ್ಯೇಷ್ಠಾ ಇತಿ ಸ್ಮೃತಾ ॥

---

೭೪. ಕೃತ್ರಿಮವಾದ ಪುರುಷ ಚಿನ್ಹೆಗಳಿಂದಲೂ, ಅನಂಗರಂಗಾದಿ ಗ್ರಂಥೋಕ್ತವಾದ ಔಷಧಗಳಿಂದಲೂ, ಮತ್ತೆ ಬೇರೆಯಾವುದರಿಂದಲೂ ಲಿಂಗವನ್ನು ಲೇಪನ ಮಾಡಿ ಯಾರು ಸ್ತ್ರೀಗಮನಮಾಡಿ ಭಗದ್ರಾವವನ್ನು ಮಾಡುತ್ತಾರೋ. ಅಂತಹ ಮನುಜರ ಮನೆಯನ್ನು ಪತ್ನಿಯಾದ ಈ ಜ್ಯೇಷ್ಠಾದೇವೀ ಸಹಿತನಾಗಿ ನೀನು ಪ್ರವೇಶಿಸು.

೭೫. ಸೂತನು ಹೇಳಿದನು: ಈ ಪ್ರಕಾರವಾಗಿ ಕಾಂತಿಯುಕ್ತ ನಾದ ಬ್ರಹ್ಮಸದೃಶನಾದ ಬ್ರಹ್ಮರ್ಷಿಯಾದ ಆ ಮಾರ್ಕಂಡೇಯನು ಹೇಳಿ, ಅಂತರ್ಧಾನವಾದನು.

೭೬–೭೭. ದುಸ್ಸಹನು ಮೇಲೆ ಹೇಳಿದ ಪ್ರದೇಶಗಳನ್ನು ಹೊಂದಿ ದನು. ಹೆಚ್ಚಾಗಿ ದೇವತೆಗಳಿಗೆಲ್ಲರಿಗೂ ಪ್ರಭುವಾದ ವಿಷ್ಣುವಿನ ನಿಂದೆಯಲ್ಲಿ ಆಸಕ್ತರಾದವರನ್ನು ಆ ಮುನಿಶ್ರೇಷ್ಠನಾದ ದುಸ್ಸಹನು ಜ್ಯೇಷ್ಠೆಯೆಂಬ ಹೆಸರುಳ್ಳ ಭಾರ್ಯೆಯೊಡನೆ ಹೊಂದಿದನು.

ದುಸ್ಸಹಸ್ತ್ವಾಮುವಾಚೇದಂ ತಡಾಗಾಶ್ರಮಮಂತರೇ ।
ಆಸ್ವ ತ್ವಮತ್ರ ಚಾಹಂ ವೈ ಪ್ರವೇಕ್ಷ್ಯಾಮಿ ರಸಾತಲಮ್ ॥೭೮॥
ಆವಯೋಸ್ಸ್ಥಾನಮಾಲೋಕ್ಯ ನಿವಾಸಾರ್ಥಂ ತತಃ ಪುನಃ ।
ಆಗಮಿಷ್ಯಾಮಿ ತೇ ಪಾರ್ಶ್ವಂ ಇತ್ಯುಕ್ತಾ ತಮುವಾ ಚ ಸಾ ॥೭೯॥
ಕಿಮಶ್ನಾಮಿ ಮಹಾಭಾಗ ಕೋ ಮೇ ದಾಸ್ಯತಿ ವೈ ಬಲಿಮ್ ।
ಇತ್ಯುಕ್ತಸ್ತಾಂ ಮುನಿಃ ಪ್ರಾಹ ಯಾಃಸ್ತ್ರಿಯಸ್ತ್ವಾಂ ಯಜಂತಿ ವೈ ॥
ಬಲಿಭಿಃ ಪುಷ್ಪಧೂಪೈಶ್ಚ ನ ತಾಸಾಂ ಚ ಗೃಹಂ ವಿಶ ।
ಇತ್ಯುಕ್ತ್ವಾ ತ್ವಾಽವಿಶತ್ತತ್ರ ಪಾತಾಲಂ ಬಿಲಯೋಗತಃ ॥೮೧॥
ಅದ್ಯಾಪಿ ಚ ವಿನಿರ್ಮಗ್ನೋ ಮುನಿಃ ಸ ಜಲಸಂಸ್ತರೇ ।
ಗ್ರಾಮಪರ್ವತ ಬಾಹ್ಯೇಷು ನಿತ್ಯಮಾಸ್ತೇಽಶುಭಾ ಪುನಃ ॥೮೨॥

---

೭೮. ದುಸ್ಸಹನು ಅವಳನ್ನು ಕುರಿತು, ಕೆರೆಗೂ ಆಶ್ರಮಕ್ಕೂ ಮಧ್ಯಭಾಗದಲ್ಲಿ ಕುಳಿತುಕೊ. ನಾನು ಪಾತಾಳಕ್ಕೆಹೋಗಿ ನಮಗೆ ವಾಸಿಸಲು ತಕ್ಕ ಸ್ಥಳವಾವುದೆಂಬುದನ್ನು ನೋಡಿ ನಿನ್ನಲ್ಲಿಗೆ ಬರುವೆನು. ಎಂದು ಹೇಳಿದನು.

೭೯. ಹೀಗೆಂದು ಹೇಳಲ್ಪಟ್ಟ ಅವಳು ಅವನನ್ನು ಕುರಿತುಹೇಳಿದಳು. ಓ ಭಾಗ್ಯ ಶಾಲಿಯೇ, ನಾನೇನನ್ನು ಊಟ ಮಾಡಲಿ? ನನಗೆ ಯಾರು ಅನ್ನವನ್ನು ಕೊಡುವವರು ? ”

೮೦–೮೧. ಹೀಗೆ ಹೇಳಲ್ಪಟ್ಟ ಆ ಋಷಿಯು ಅವಳನ್ನು ಕುರಿತು ಯಾವ ಹೆಂಗಸು ನಿನ್ನನ್ನು ಪುಷ್ಪ ಧೂಪಾದಿಗಳಿಂದ ಕೂಡಿದ ಬಲ್ಯನ್ನದಿಂದ ಪೂಜಿಸುವಳೋ ಅಂತಹ ಸ್ತ್ರೀಯು ವಾಸಿಸುವ ಮನೆಯನ್ನು ಪ್ರವೇಶಿಸಬೇಡ. ಎಂದು ಹೇಳಿ, ತಾನು ಬಿಲಮಾರ್ಗವಾಗಿ ಪಾತಾಲವನ್ನು ಪ್ರವೇಶಿಸಿದನು.

೮೨. ಈಗಲೂ ಸಹ ಆ ಋಷಿಯು ಜಲಮಧ್ಯದಲ್ಲಿ ಮುಳುಗಿರುತ್ತಾನೆ. ಗ್ರಾಮ ಮತ್ತು ಪರ್ವತಗಳಿಂದ ಬೇರೆಯಾದ ಪ್ರದೇಶಗಳಲ್ಲಿ ಅಶುಭೆಯು ಯಾವಾಗಲೂ ಇರುತ್ತಾಳೆ.

ಪ್ರಸಂಗಾದ್ದೇವ ದೇವೇಶೋ ವಿಷ್ಣುಸ್ತ್ರಿಭುವನೇಶ್ವರಃ ।
ಲಕ್ಷ್ಮ್ಯಾ ದೃಷ್ಟಸ್ತಯಾ ಲಕ್ಷ್ಮ್ಯಾ ಸಾ ತಮಾಹ ಜನಾರ್ದನಮ್ ॥
ಭರ್ತಾ ಗತೋ ಮಹಾಬಾಹೋ ಬಿಲಂ ತ್ಯಕ್ತ್ವಾ ಸ ಮಾಂ ಪ್ರಭೋ ।
ಅನಾಥಾಽಹಂ ಜಗನ್ನಾಥ ವೃತ್ತಿಂ ದೇಹಿ ನಮೋಽಸ್ತು ತೇ ॥೮೪॥

॥ ಸೂತ ಉವಾಚ ॥

ಇತ್ಯುಕ್ತೋ ಭಗವಾನ್ವಿಷ್ಣುಃ ಪ್ರಹಸ್ಯಾಹ ಜನಾರ್ದನಃ ।
ಜ್ಯೇಷ್ಠಾಮಲಕ್ಷ್ಮೀಂ ದೇವೇಶೋ ಮಾಧವೋ ಮಧುಸೂದನಃ ॥

॥ ಶ್ರೀ ವಿಷ್ಣುರುವಾಚ ॥

ಯೇ ರುದ್ರಮನಘಂ ಶರ್ವಂ ಶಂಕರಂ ನೀಲಲೋಹಿತಮ್ ।
ಅಂಬಾಂ ಹೈಮವತೀಂ ವಾಽಪಿ ಜನಿತ್ರೀಂ ಜಗತಾಮಪಿ ॥೮೬॥

---

೮೩. ಆ ಜ್ಯೇಷ್ಠಾದೇವಿಯು ಅಕಸ್ಮಾತ್ತಾಗಿ ದೇವತೆಗಳಿಗೆಲ್ಲರಿಗೂ ಪ್ರಭುವಾದ, ಮೂರು ಲೋಕಗಳಿಗೂ ಒಡೆಯನಾದ, ವಿಷ್ಣುವು ಲಕ್ಷ್ಮಿ ಯೊಡನೆ ಬರುತ್ತಿರುವುದನ್ನು ನೋಡಿದಳು. ಆಗ ಆ ಅಲಕ್ಷ್ಮಿಯು ವಿಷ್ಣುವನ್ನು ಕುರಿತು ಹೀಗೆ ಹೇಳಿದಳು.

೮೪. ಓ ಸ್ವಾಮಿಯೇ, ನನ್ನ ಪತಿಯು ನನ್ನನ್ನು ಇಲ್ಲಿ ಬಿಟ್ಟು ಬಿಲ (ಪಾತಾಳ) ವನ್ನು ಸೇರಿದನು. ಎಲ್ಲ ಲೋಕಗಳಿಗೂ ಪ್ರಭುವಾದ ದೇವನೇ, ನಾನು ದಿಕ್ಕಿಲ್ಲದವಳಾಗಿರುತ್ತೇನೆ. ನನಗೆ ಜೀವಿಕೆಯನ್ನು, ವೃತ್ತಿಯೊಂದನ್ನು ಅನುಗ್ರಹಿಸು. ನಿನಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತಿದೇನೆ.

೮೫. ಹೀಗೆ ಹೇಳಲ್ಪಟ್ಟ ಪೂಜ್ಯನಾದ, ದುಷ್ಟ ಶಿಕ್ಷಕನಾದ ಮಾಧವನೂ ಮಧುಸೂದನನೂ ಆದ ವಿಷ್ಣುವು ನಕ್ಕು ಜ್ಯೇಷ್ಠೆಯೆಂದು ಪ್ರಸಿದ್ಧಳಾದ ಆ ಅಲಕ್ಷ್ಮಿಯನ್ನು ಕುರಿತು ಹೇಳಿದನು.

೮೬. ಮಂಗಳಕರನೂ, ಪರಿಶುದ್ಧನೂ, ನೀಲಲೋಹಿತನೂ ಆದ ರುದ್ರನನ್ನೂ, ಹಿಮವತ್ಪುತ್ರಿಯಾದ, ಲೋಕಮಾತೆಯಾದ ಪಾರ್ವತಿ ಯನ್ನೂ ಮತ್ತು ನನ್ನ ಭಕ್ತರನ್ನೂ ಯಾರು ನಿಂದಿಸುತ್ತಾರೋ ಅವರುಗಳ ಧನವು ನಿನ್ನದೇ ಆಗಿರುತ್ತದೆ.

ಮದ್ಭಕ್ತಾನ್ನಿಂದಯಂ ತ್ಯತ್ರ ತೇಷಾಂ ವಿತ್ತಂ ತವೈವ ಹಿ ।
ಯೋಽಪಿ ಚೈವ ಮಹಾದೇವಂ ವಿನಿಂದ್ಯೈವ ಯಜಂತಿ ಮಾಮ್ ॥
ಮೂಢಾ ಹ್ಯ ಭಾಗ್ಯಾ ಮದ್ಭಕ್ತಾ ಅಪಿ ತೇಷಾಂ ಧನಂ ತವ ।
ಯಸ್ಯಾಜ್ಞಯಾ ಹ್ಯಹಂ ಬ್ರಹ್ಮಾ ಪ್ರಸಾದಾದ್ವರ್ತತೇ ಸದಾ ॥೮೮॥
ಯೇ ಯಜಂತಿ ವಿನಿಂದ್ಯೈವ ಮಮ ವಿದ್ವೇಷ ಕಾರಕಾಃ ।
ಮದ್ಭಕ್ತಾ ನೈವ ತೇ ಭಕ್ತಾ ಇವ ವರ್ತಂತಿ ದುರ್ಮದಾಃ ॥೮೯॥
ತೇಷಾಂ ಗೃಹಂ ಧನಂ ಕ್ಷೇತ್ರಮಿಷ್ಟಾಪೂರ್ತಂ ತವೈವ ಹಿ ।

॥ ಸೂತ ಉವಾಚ ॥

ಇತ್ಯುಕ್ತ್ವಾ ತಾಂ ಪರಿತ್ಯಜ್ಯ ಲಕ್ಷ್ಮ್ಯಾ ಲಕ್ಷ್ಮೀಂ ಜನಾರ್ದನಃ ॥
ಜಜಾಪ ಭಗವಾನ್ ರುದ್ರ ಮಲಕ್ಷ್ಮೀಕ್ಷಯ ಸಿದ್ಧಯೇ ।
ತಸ್ಮಾತ್ಪ್ರದೇಯ ಸ್ತಸ್ಯೈ ಚ ಬಲಿರ್ನಿತ್ಯಂ ಮುನೀಶ್ವರಾಃ ॥೯೧॥

---

೮೭. ಯಾರು ಮಹಾದೇವನನ್ನು ನಿಂದಿಸಿ ನನ್ನನ್ನು ಪೂಜಿಸುತ್ತಾರೋ. ಮೂರ್ಖರೂ ಭಾಗ್ಯರಹಿತರೂ ಆದ ಅವರು ನನ್ನ ಭಕ್ತರೇ ಆದರೂ ಅವರ ಧನವು ನಿನ್ನದು.

೮೮-೮೯. ರುದ್ರನ ಆಜ್ಞೆಯಿಂದಲೂ ಮತ್ತು ಅನುಗ್ರಹದಿಂದಲೂ ನಾನೂ ಬ್ರಹ್ಮನೂ, ಯಾವಾಗಲೂ ಇರುತ್ತೇವೆ. ಅಂತಹ ರುದ್ರನನ್ನೂ ತಿರಸ್ಕರಿಸಿ ಯಾರು ನನ್ನನ್ನು ಅರ್ಚಿಸುತ್ತಾರೋ, ಅವರು ನನಗೆ ದ್ವೇಷವನ್ನುಂಟು ಮಾಡತಕ್ಕವರು. ಅವರು ನನ್ನ ಭಕ್ತರಾದಾಗ್ಯೂ ಭಕ್ತರಲ್ಲ. ಕೊಬ್ಬಿದವರಾದ ಅವರು ಭಕ್ತರಂತೆ ಇರುತ್ತಾರೆ. ಅಂತಹವರ ಮನೆ, ಮಠ, ಧನಾದಿಗಳು ನಿನ್ನ ಇಷ್ಟವನ್ನು ಪೂರೈಸಲೋ ಸುಗವೇ ಇರುತ್ತವೆ!

೯೦. ಸೂತನು ಹೇಳಿದನು : ಈ ಪ್ರಕಾರವಾಗಿ ಹೇಳಿದ ಅನಂತರದಲ್ಲಿ ಆ ಅಲಕ್ಷ್ಮಿಯನ್ನು ಬಿಟ್ಟು ಲಕ್ಷ್ಮೀಸಮೇತನಾಗಿ ಆ ಅಲಕ್ಷ್ಮೀನಾಶಕರ್ತೃಶ್ವರ ರುದ್ರನನ್ನು ಕುರಿತು ಜಪಿಸಿದನು.

೯೧-೯೨. ಓ ಮುನಿಶ್ರೇಷ್ಠರೇ, ಆ ಅಲಕ್ಷ್ಮೀ ನಿವಾರಣೆಗಾಗಿ ಅವಳಿಗೆ ನಿತ್ಯವೂ ವಿಷ್ಣು ಭಕ್ತರುಗಳಿಂದಲೂ ಯಾವಾಗಲೂ ಸಕಲ ಯತ್ನ

ವಿಷ್ಣು ಭಕ್ತೈರ್ನ ಸಂದೇಹಃ ಸರ್ವಯತ್ನೇನ ಸರ್ವದಾ ।
ಅಂಗನಾಭಿಸ್ಸದಾ ಪೂಜ್ಯಾ ಬಲಿಭಿರ್ವಿವಿಧೈರ್ದ್ವಿಜಾಃ ॥೯೨॥
ಯಃ ಪಠೇಚ್ಛೃಣುಯಾದ್ವಾಽಪಿ ಶ್ರಾವಯೇದ್ವಾದ್ವಿಜೋತ್ತಮಾನ್।
ಅಲಕ್ಷ್ಮೀವೃತ್ತಮನಘೋ ಲಕ್ಷ್ಮೀವಾಂಲ್ಲಭತೇ ಗತಿಮ್ ॥೯೩॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಅಲಕ್ಷ್ಮೀ ವೃತ್ತ ಕಥನಂ ನಾಮ ಷಷ್ಠೋಽಧ್ಯಾಯಃ

---

ಗಳಿಂದಲೂ ಬಲಿಯು ಕೊಡಲ್ಪಡಬೇಕು. ಓ ದ್ವಿಜರೇ, ಸ್ತ್ರೀಯರುಗಳಿಂದ ನಾನಾ ಬಗೆಯಾದ ಉಪಾಹಾರಗಳಿಂದ ಆ ಅಲಕ್ಷ್ಮಿಯು ಪೂಜಿಸಲ್ಪಡಬೇಕು.

೯೩. ಯಾರು ಇದನ್ನು ಓದುತ್ತಾರೋ ಮತ್ತು ಕೇಳುತ್ತಾರೋ, ಯಾರು ಈ ಅಲಕ್ಷ್ಮೀ ಇತಿಹಾಸವನ್ನು ದ್ವಿಜ ಶ್ರೇಷ್ಠರಿಗೆ ಹೇಳಿ, ಕೇಳಿಸುತ್ತಾರೋ, ಅಂತವರು ಪರಿಶುದ್ಧರಾಗಿಯೂ ಸಂಪದ್ಯುಕ್ತರಾಗಿಯೂ ಶ್ರೇಷ್ಠವಾದ ಗತಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಅಲಕ್ಷ್ಮೀ ವೃತ್ತ ಕಥನವೆಂಬ ಆರನೆಯ ಅಧ್ಯಾಯವು ಮುಗಿದುದು.

---

अथ श्री लिंगमहापुराणे उत्तरभागे
सप्तमोऽध्यायः

ಕಿಂ ಜಪಾನ್ಮುಚ್ಯತೇ ಜಂತುಃ ಸರ್ವಲೋಕ ಭಯಾದಿಭಿಃ ।
ಸರ್ವಪಾಪವಿನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ॥ ೧ ॥

ಅಲಕ್ಷ್ಮೀಂ ವಾಽಥ ಸಂತ್ಯಜ್ಯ ಗಮಿಷ್ಯತಿ ಜಪೇನ ವೈ ।
ಲಕ್ಷ್ಮೀವಾಸೋ ಭವೇ ನ್ಮರ್ತ್ಯಃ ಸೂತ ವಕ್ತು ಮಿಹಾರ್ಹಸಿ ॥ ೨ ॥

॥ ಸೂತ ಉವಾಚ ॥

ಪುರಾ ಪಿತಾಮಹೇನೋಕ್ತಂ ವಸಿಷ್ಠಾಯ ಮಹಾತ್ಮನೇ ।
ವಕ್ಷ್ಯೇ ಸಂಕ್ಷೇಪತಸ್ಸರ್ವಂ ಸರ್ವಲೋಕಹಿತಾಯ ವೈ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಏಳನೆಯ ಅಧ್ಯಾಯವು.

೧. ಲೋಕದಲ್ಲಿ ಮನುಷ್ಯನು ಯಾವ ನಾಮ,ಮಂತ್ರ ಜಪವನ್ನು ಮಾಡುವುದರಿಂದ ಸಕಲವಾದ ಈ ಪ್ರಪಂಚದ ಭೀತಿಗಳಿಂದ ಬಿಡಲ್ಪಡುತ್ತಾನೆ? ಮತ್ತು ಸಕಲ ಪಾಪಗಳಿಂದಲೂ ಬಿಡಲ್ಪಟ್ಟು ಶ್ರೇಷ್ಠಗತಿಯನ್ನು ಹೊಂದುತ್ತಾನೆ.?

೨. ಅ ಲಕ್ಷ್ಮಿಯನ್ನೇ ಆಗಲಿ, ಬಿಟ್ಟು ಮನುಜನು ಯಾವ ಜಪದಿಂದ ಲಕ್ಷ್ಮಿಯನ್ನು ಹೊಂದುತ್ತಾನೆ? ಓ ಸೂತನೇ, ಅಂತಹ ಜಪವನ್ನು ಹೇಳುವವನಾಗು.

೩. ಸೂತನು ಹೇಳಿದನು : ಪೂರ್ವದಲ್ಲಿ ಮಹಾತ್ಮನಾದ ವಸಿಷ್ಠನಿಗೆ ಬ್ರಹ್ಮನಿಂದ ಈ ವಿಷಯದ ಸಾಧನವು ಹೇಳಲ್ಪಟ್ಟಿರುತ್ತದೆ. ಅದನ್ನೇ ನಾನು ಈಗ ಸಕಲ ಲೋಕಗಳ ಕ್ಷೇಮಕ್ಕಾಗಿ ಸಂಕ್ಷೇಪವಾಗಿ ಹೇಳುತ್ತೇನೆ.

ಶೃಣ್ವಂತು ವಚನಂ ಸರ್ವೇ ಪ್ರಣಿಪತ್ಯ ಜನಾರ್ದನಮ್ ।
ದೇವದೇವ ಮಜಂ ವಿಷ್ಣುಂ ಕೃಷ್ಣಮಚ್ಯುತಮವ್ಯಯಮ್ ॥ ೪ ॥
ಸರ್ವಪಾಪಹರಂ ಶುದ್ಧಂ ಮೋಕ್ಷದಂ ಬ್ರಹ್ಮವಾದಿನಾಮ್ ।
ಮನಸಾ ಕರ್ಮಣಾ ವಾಚಾಽಪ್ಯೇ ವಿದ್ವಾನ್ಪುಣ್ಯ ಕರ್ಮಕೃತ್ ॥
ನಾರಾಯಣಂ ಜಪೇನ್ನಿತ್ಯಂ ಪ್ರಣಮ್ಯ ಪುರುಷೋತ್ತಮಮ್ ।
ಸ್ವಪನ್ನಾರಾಯಣಂ ದೇವಂ ಗಚ್ಛನ್ನಾರಾಯಣಂ ತಥಾ ॥ ೬ ॥
ಭುಂಜನ್ನಾರಾಯಣಂ ವಿಪ್ರಾಸ್ತಿಷ್ಠನ್ ಜಾಗ್ರತ್ ಸನಾತನಮ್ ।
ಉನ್ಮಿಷನ್ನಿಮಿಷನ್ವಾಽಪಿ ನಮೋ ನಾರಾಯಣೇತಿ ವೈ ॥ ೭ ॥
ಭೋಜ್ಯಂ ಪೇಯಂ ಚ ಲೇಹ್ಯಂ ಚ ನಮೋ ನಾರಾಯಣೇತಿ ಚ ।
ಅಭಿಮಂತ್ರ್ಯ ಸ್ಪೃಶನ್ಭುಂಕ್ತೇ ಸ ಯಾತಿ ಪರಮಾಂ ಗತಿಮ್ ॥ ೮ ॥

---

೪. ದೇವ ದೇವನೂ, ಉತ್ಪತ್ತಿ ಶೂನ್ಯನೂ, ವಿಷ್ಣುವೂ, ನಾಶರಹಿತನೂ, ದುಷ್ಟ ಶಿಕ್ಷಕನೂ ಆದ ಸ್ವಾಮಿಯನ್ನು ಎಲ್ಲರೂ ನಮಸ್ಕರಿಸಿ ನನ್ನ ಮಾತನ್ನು ಕೇಳಿರಿ.

೫. ಸಕಲಪಾಪಗಳನ್ನೂ ನಾಶಮಾಡುವ ಪರಿಶುದ್ಧವಾದ, ವೇದಜ್ಞರಿಗೆ ಮೋಕ್ಷಫಲವನ್ನು ಕೊಡುವ ನಾರಾಯಣ ಮಂತ್ರವನ್ನು ಪುಣ್ಯಕರ್ಮಗಳನ್ನು ಮಾಡುವ ಯಾವ ವಿದ್ವಾಂಸನು, ಆ ಪುರುಷ ಶ್ರೇಷ್ಠನನ್ನು ನಮಸ್ಕರಿಸಿ ಮನಸ್ಸಿನಿಂದಲೂ, ಮಾತಿನಿಂದಲೂ, ಏಕರೀತಿಯಾಗಿ ಜಪಿಸುತ್ತಾನೋ,

೬–೮. ನಿದ್ರೆಮಾಡುವಾಗ, ನಡೆಯುವಾಗ, ಊಟಮಾಡುವಾಗ, ನಿಂತಿರುವಾಗಲೂ ಸಹ, ಎಲೈ ಬ್ರಾಹ್ಮಣರೇ, ಯಾರು ನಾರಾಯಣನನ್ನು ಜಪಿಸುತ್ತಾರೋ, ಕಣ್ಣುರೆಪ್ಪೆ ತೆಗೆಯುವಾಗಲೂ ಮುಚ್ಚುವಾಗಲೂ, ನಮೋ ನಾರಾಯಣಾಯ ಎಂದು ಜಪಿಸುತ್ತಿರುತ್ತಾರೋ, ಭೋಜ್ಯ ಪದಾರ್ಥವನ್ನೂ, ಪಾನೀಯವನ್ನೂ ಸಕಲ ಪದಾರ್ಥಗಳನ್ನೂ ನಮೋ ನಾರಾಣಾಯ ಎಂಬ ಮಂತ್ರದಿಂದ ಅಭಿಮಂತ್ರಿಸಿ ಯಾರು ತಿನ್ನುತ್ತಾರೋ, ಅವರು ಪರಮಗತಿಯನ್ನು ಹೊಂದುತ್ತಾರೆ.

**ಸರ್ವಪಾಪ ವಿನಿರ್ಮುಕ್ತಾಃ ಪ್ರಾಪ್ನೋತಿ ಚ ಸತಾಂ ಗತಿಮ್ ।**
**ಅಲಕ್ಷ್ಮೀಶ್ಚ ಮಯಾ ಪ್ರೋಕ್ತಾ ಪತ್ನೀ ಯಾ ದುಸ್ಸಹಸ್ಯ ಚ ॥ ೯ ॥**
**ನಾರಾಯಣ ಪದಂ ಶ್ರುತ್ವಾ ಗಚ್ಛತ್ಯೇವ ನ ಸಂಶಯಃ ।**
**ಯಾ ಲಕ್ಷ್ಮೀರ್ದೇವದೇವಸ್ಯ ಹರೇಃ ಕೃಷ್ಣಸ್ಯ ವಲ್ಲಭಾ ॥೧೦॥**
**ಗೃಹೇ ಕ್ಷೇತ್ರೇ ತಥಾ ವಾಸೇ ತನೌ ವಸತಿ ಸುವ್ರತಾಃ ।**
**ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ ॥೧೧॥**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ।**
**ಕಿಂ ತಸ್ಯ ಬಹುಭಿರ್ಮಂತ್ರೈಃ ಕಿಂ ತಸ್ಯ ಭಹುಭಿರ್ವ್ರತೈಃ ॥೧೨॥**

---

೯. ಅವರು ಸಕಲ ಪಾಪಗಳಿಂದಲೂ ಬಿಡಲ್ಪಟ್ಟವರಾಗಿ ಸದ್ಗತಿಯನ್ನು ಹೊಂದುತ್ತಾರೆ. ನನ್ನಿಂದ ಹೇಳಲ್ಪಟ್ಟಂತೆ ದುಸ್ಸಹನ ಪತ್ನಿಯಾದ ಆ ಅಲಕ್ಷ್ಮಿಯೂ ಕೂಡ ನಾರಾಯಣ ಶಬ್ದವನ್ನು ಕೇಳುವುದರಿಂದಲೇ ಹೊರಟು ಹೋಗುತ್ತಾಳೆ. ಇದರಲ್ಲಿ ಯಾವ ಸಂದೇಹವೂ ಇಲ್ಲ.

೧೦. ದೇವ ದೇವನಾದ ವಿಷ್ಣುವಿನ ಪತ್ನಿಯಾದ ಲಕ್ಷ್ಮಿಯು, ಎಲೈ ಸುವ್ರತರೇ, ಯಾರು ನಾರಾಯಣ ಮಂತ್ರವನ್ನು ಜಪಿಸುತ್ತಾರೋ, ಅಂತಹವರಿರುವ ಮನೆಯಲ್ಲಿಯೂ, ಆಸ್ತಿಗಳಲ್ಲಿಯೂ, ಸ್ಥಳದಲ್ಲೂ, ವಸದಲ್ಲೂ, ಶರೀರದಲ್ಲೂ ಸಹ ವಾಸಿಸುತ್ತಾಳೆ.

೧೧–೧೨. ಸಕಲ ಶಾಸ್ತ್ರಗಳನ್ನೂ ಮತ್ತೆ ಮತ್ತೆ ಪರ್ಯಾಲೋಚಿಸಿದುದರಿಂದ ಗೊತ್ತಾಗಿರುವುದೇನೆಂದರೆ, ಯಾನಾಗಲೂ ಇದೊಂದೇ ನಾರಾಯಣ ಮಂತ್ರವನ್ನು ಜಪಿಸ (ಧ್ಯಾನಿಸ) ಬೇಕು. ನಾರಾಯಣ ಮಂತ್ರವನ್ನು ಜಪಿಸುವವನಿಗೆ ಸಕಲಾರ್ಥಗಳನ್ನೂ ಪಡೆಯಲಾಗುವುದರಿಂದ ನಾರಾಯಣ ಮಂತ್ರಕ್ಕಿಂತಲೂ ಹೆಚ್ಚಾದ ಬೇರಾವ ಮಂತ್ರದಿಂದ ಏನು ಪ್ರಯೋಜನ? ನಾರಾಯಣ ಮಂತ್ರ ಜಪವಲ್ಲದೆ ಬೇರಾವವ್ರತದಿಂದ ಏನು ಪ್ರಯೋಜನ? ಸಕಲೇಚ್ಛೆಗಳನ್ನೂ ಪೂರೈಸುವುದಕ್ಕೆ ನಮೋ ನಾರಾಣಾಯ ಎಂಬ ಮಂತ್ರವೇ ಸಾಕಾಗಿರುತ್ತದೆ. ಆದ ಕಾರಣ ಎಲೈ ಬ್ರಾಹ್ಮಣವರ್ಯರೇ, ಎಲ್ಲ

ನಮೋ ನಾರಾಯಣಾಯೇತಿ ಮಂತ್ರಸ್ಸರ್ವಾರ್ಥಸಾಧಕಃ ।
ತಸ್ಮಾತ್ಸರ್ವೇಷು ಕಾಲೇಷು ನಮೋ ನಾರಾಯಣೇತಿ ಚ ॥೧೩॥
ಜಪೇತ್ಸ ಯಾತಿ ವಿಪ್ರೇಂದ್ರಾ ವಿಷ್ಣುಲೋಕಂ ಸಬಾಂಧವಃ ।
ಅನ್ಯಚ್ಚ ದೇವದೇವಸ್ಯ ಶೃಣ್ವಂತು ಮುನಿಸತ್ತಮಾಃ ॥೧೪॥
ಮಂತ್ರೋ ಮಯಾ ಪುರಾಽಭ್ಯಸ್ತಃ ಸರ್ವವೇದಾರ್ಥಸಾಧಕಃ ।
ದ್ವಾದಶಾಕ್ಷರಸಂಯುಕ್ತೋ ದ್ವಾದಶಾತ್ಮಾ ಪುರಾತನಃ ॥೧೫॥
ತಸ್ಯೈವೇ ಹ ಚ ಮಾಹಾತ್ಮ್ಯಂ ಸಂಕ್ಷೇಪಾತ್ಪ್ರವದಾಮಿ ವಃ ।
ಕಶ್ಚಿತ್ ದ್ವಿಜೋ ಮಹಾಪ್ರಾಜ್ಞ ಸ್ತಪಸ್ತಪ್ತ್ವಾ ಕಥಂಚನ ॥೧೬॥
ಪುತ್ರಮೇಕಂ ತಯೋತ್ಪಾದ್ಯ ಸಂಸ್ಕಾರೈಶ್ಚ ಯಥಾಕ್ರಮಮ್ ।
ಯೋಜಯಿತ್ವಾ ಯಥಾಕಾಲಂ ಕೃತೋಪನಯನಂ ಪುನಃ ॥೧೭॥

---

ಕಾಲದಲ್ಲಿ ಯಾರು ನಾರಾಯಣ ಮಂತ್ರವನ್ನೂ ಜಪಿಸುತ್ತಾರೋ ಅವರು ಇಷ್ಟ ಮಿತ್ರರೊಡನೆ ವಿಷ್ಣು ಲೋಕವನ್ನು ಸೇರುತ್ತಾರೆ.

೧೪. ಸಕಲ ದೇವತೆಗಳಿಗೂ ಪ್ರಭುವಾದ ಶ್ರೀ ನಾರಾಯಣನ ಮಂತ್ರ ಜಪದ ಮಹಿಮೆಯನ್ನು ಮುನಿಶ್ರೇಷ್ಠರೇ, ಕೇಳಿ.

೧೫. ಪೂರ್ವದಲ್ಲಿ ಸಕಲಾಭೀಷ್ಟಗಳನ್ನೂ ಸಾಧಿಸಿಕೊಡುವ ದ್ವಾದಶಾಕ್ಷರಗಳಿಂದ ಕೂಡಿದ ದ್ವಾದಶಾತ್ಮಕವಾದ, ಪುರಾತನವಾದ ಮಂತ್ರವನ್ನು ನಾನು ಅಭ್ಯಾಸ ಮಾಡಿದೆನು. ಆ ಮಂತ್ರದ ಮಹಿಮೆಯನ್ನು ಇಲ್ಲಿ ನಿಮ್ಮಗಳಿಗಾಗಿ ಸಂಕ್ಷೇಪದಿಂದ ಹೇಳುತ್ತೇನೆ.

೧೬-೧೭. ಮಹಾಬುದ್ಧಿಶಾಲಿಯಾದ ಒಬ್ಬ ಬ್ರಾಹ್ಮಣನು ತಪಸ್ಸನ್ನು ಮಾಡಿ ಹೇಗೋ ಒಬ್ಬ ಮಗನನ್ನು ಪತ್ನಿಯಲ್ಲಿ ಪಡೆದನು. ಪುತ್ರಜನನಾನಂತರದಲ್ಲಿ ವಿಹಿತವಾದ ಜಾತಕರ್ಮ ನಾಮಕರಣಾದಿ ಕರ್ಮಗಳನ್ನು ಆಯಾಕಾಲಗಳಲ್ಲಿ ಮಾಡಿದನು. ಹಾಗೆಯೇ ಉಪನಯನವನ್ನೂ ಆ ಪುತ್ರನಿಗೆ ಮಾಡಿದನು.

ಅಧ್ಯಾಪಯಾಮಾಸ ತದಾ ಸ ಚ ನೋವಾಚ ಕಿಂಚ ನ ।
ನ ಜಿಹ್ವಾ ಸ್ಪಂದತೇ ತಸ್ಯ ದುಃಖಿತೋಽಭೂದ್ವಿಜೋತ್ತಮಃ ॥೧೮॥
ವಾಸುದೇವೇತಿ ನಿಯತ ಮೈತರೇಯೋ ವದತ್ಯ ಸೌ ।
ಪಿತಾ ತಸ್ಯ ತಥಾ ಚಾನ್ಯಾಂ ಪರಿಣೀಯ ಯಥಾವಿಧಿ ॥೧೯॥
ಪುತ್ರಾನುತ್ಪಾದಯಾಮಾಸ ತಥೈವ ವಿಧಿಪೂರ್ವಕಮ್ ।
ವೇದಾ ನ ಧೀತ್ಯ ಸಂಪನ್ನಾ ಬಭೂವುಃ ಸರ್ವ ಸಂಮತಾಃ ॥೨೦॥
ಐತರೇಯಸ್ಯ ಸಾ ಮಾತಾ ದುಃಖಿತಾ ಶೋಕಮೂರ್ಛಿತಾ ।
ಉವಾಚ ಪುತ್ರಾಃ ಸಂಪನ್ನಾ ವೇದ ವೇದಾಂಗಪಾರಗಾಃ ॥೨೧॥
ಬ್ರಾಹ್ಮಣೈಃ ಪೂಜ್ಯಮಾನಾ ವೈ ನೋದಯಂತಿ ಚ ಮಾತರಮ್ ।
ಮಮ ತ್ವಂ ಭಾಗ್ಯಹೀನಾಯಾಃ ಪುತ್ರೋ ಜಾತೋ ನಿರಾಕೃತಿಃ ॥

---

೧೮. ಆ ಬ್ರಾಹ್ಮಣನು ಉಪನೀತನಾದ ಮಗನಿಗೆ ಅಧ್ಯಯನ ಮಾಡಿಸಲು ಉಪಕ್ರಮಿಸಿದನು. ಅವನ ಆ ಮಗನು ಯಾವಾಗಲೂ, ವಾಸುದೇವ ಎಂಬುದಾಗಿಮಾತ್ರ ಹೇಳುತ್ತಿದ್ದನು. ಬೇರೆಅಕ್ಷರಗಳನ್ನು ಉಚ್ಚರಿಸಲು ಅವನ ನಾಲಿಗೆ ಅಲುಗಾಡುತ್ತಿರಲಿಲ್ಲ. ಇದರಿಂದ ಆ ಬ್ರಾಹ್ಮಣ ಶ್ರೇಷ್ಠನು ಬಹುದುಃಖಗೊಂಡನು.

೧೯–೨೦. ಅವನತಂದೆಯು ವಿಧಿವತ್ತಾಗಿ ಬೇರೊಬ್ಬಳನ್ನು ವಿವಾಹ ಮಾಡಿಕೊಂಡು ಅವಳಲ್ಲಿ ಮಕ್ಕಳನ್ನು ಪಡೆದನು. ಅವರೂಕೂಡ ಉಪನೀತರಾದಕೂಡಲೇ ಯಥಾಕ್ರಮದಲ್ಲಿ ವೇದಾಧ್ಯಯನಮಾಡಿ ಎಲ್ಲರಿಗೂ ಮಾನ್ಯರಾಗಿ ಸಂಪದ್ಯುಕ್ತರಾದರು. ( ಕೀರ್ತಿಶಾಲಿಗಳಾದರು )

೨೧–೨೨. ಐತರೇಯನ ತಾಯಿಯು ದುಃಖಿತಳಾಗಿ ವ್ಯಸನದಿಂದ ಧೃತಿಗೆಟ್ಟು ಮಗನನ್ನು ಕುರಿತು ಹೇಳಿದಳು. ವೇದ ಮತ್ತು ವೇದಾಂಗಗಳನ್ನೂ ಸಕಲ ಶಾಸ್ತ್ರಗಳನ್ನೂ ಅಭ್ಯಾಸಮಾಡಿರುವ ಕೀರ್ತಿವಂತರಾದ ಮಕ್ಕಳು ಹುಟ್ಟಿ ಬ್ರಾಹ್ಮಣರಿಂದ ಪೂಜಿಸಲ್ಪಡುತ್ತಾ ತಾಯಿಯನ್ನು ಸಂತೋಷಗೊಳಿಸುತ್ತಿದಾರೆ. ಅದೃಷ್ಟಹೀನಳಾದ ನನಗಾದರೋ ಸ್ವರೂಪ ಜ್ಞಾನವಿಲ್ಲದ ನೀನು ಮಗನಾಗಿ ಜನಿಸಿದೆ.

ಮಮಾತ್ರ ನಿಧನಂ ಶ್ರೇಯೋ ನ ಕಥಂಚ ನ ಜೀವಿತಮ್ ।
ಇತ್ಯುಕ್ತಸ್ಸ ಚ ನಿರ್ಗಮ್ಯ ಯಜ್ಞವಾಟಂ ಜಗಾಮ ವೈ ॥೨೩॥
ತಸ್ಮಿನ್ಯಾತೇ ದ್ವಿಜಾನಾಂ ತು ನ ಮಂತ್ರಾಃ ಪ್ರತಿಪೇದಿರೇ ।
ಐತರೇಯೇ ಸ್ಥಿತೇ ತತ್ರ ಬ್ರಾಹ್ಮಣಾ ಮೋಹಿತಾಸ್ತದಾ ॥೨೪॥
ತತೋ ವಾಣೀ ಸಮುದ್ಭೂತಾ ವಾಸುದೇವೇತಿ ಕೀರ್ತನಾತ್ ।
ಐತರೇಯಸ್ಯ ತೇ ವಿಪ್ರಾಃ ಪ್ರಣಿಪತ್ಯ ಯಥಾತಥಂ ॥೨೫॥
ತತಸ್ಸಮಾಪ್ಯ ತಂ ಯಜ್ಞನ್ಯೈತರೇಯೋ ಧನಾದಿಭಿಃ ।
ಸರ್ವವೇದಾನ್ ಸದಸ್ಯಾಹ ಸಷಡಂ ಗಾನ್ಸಮಾಹಿತಃ ॥೨೬॥
ತುಷ್ಟುವುಶ್ಚ ತಥಾ ವಿಪ್ರಾ ಬ್ರಹ್ಮಾದ್ಯಾಶ್ಚ ತಥಾ ದ್ವಿಜಾಃ ॥೨೭॥

---

೨೩. ತಾಯಿಯ ಮಾತನ್ನು ಕೇಳಿದವನಾಗಿ ಐತರೇಯನು ನಾನು ಈ ಜನ್ಮದಲ್ಲಿ ಬದುಕಿರುವುದಕ್ಕಿಂತ ಸಾಯುವುದು ಯುಕ್ತವೆಂದು ಹೇಳಿ ಹೊರಟವನಾಗಿ ಯಜ್ಞಶಾಲೆಗೆ ಬಂದನು.

೨೪. ಐತರೇಯನು ಬರಲು ಬ್ರಾಹ್ಮಣರುಗಳಿಗೆ ಮಂತ್ರಗಳೇ ತಿಳಿಯದೇ ಹೋದುವು. ಅವನಲ್ಲಿರಲು ಎಲ್ಲ ವಿಪ್ರರೂ ಮೋಹಿತರಾದರು.

೨೫. ಅನಂತರದಲ್ಲಿ ವಾಸುದೇವ ಎಂದರೆ "ಓಂ ನಮೋ ಭಗವತೇವಾಸುದೇವಾಯ" ಎಂದು ಹೇಳಿದ್ದರಿಂದ ಆ ಕಾಲದಲ್ಲಿ ಐತರೇಯನ ಮಂತ್ರ ಸ್ವರೂಪವಾದ ಮಾತು ಉತ್ಪನ್ನವಾಯಿತು. ಆ ಬ್ರಾಹ್ಮಣರು ತಾನಾಗಿಯೇ ಯಜ್ಞಕ್ಕೆ ಬಂದ ಆ ಐತರೇಯನಿಗೆ ನಮಸ್ಕಾರದೊಡನೆ ಅರ್ಘ್ಯಾದಿಗಳನ್ನು ಕೊಟ್ಟು ಅರ್ಚಿಸಿದರು.

೨೬. ಐತರೇಯನು ಅನಂತರದಲ್ಲಿ ಧನಾದಿಗಳಿಂದ ಯಜ್ಞವನ್ನು ಮುಗಿಸಿ ಸಭೆಯಲ್ಲಿ ಜಿತೇಂದ್ರಿಯನಾಗಿ ಸಕಲ ವೇದಗಳನ್ನು ಷಡಂಗಗಳೊಡನೆ ಹೇಳಿದನು

೨೭. ಎಲ್ಲಾ ಬ್ರಾಹ್ಮಣರೂ ಐತರೇಯನು ಸಕಲ ವೇದ ವೇದಾಂಗಗಳನ್ನೂ ಹೇಳಿದುದನ್ನು ನೋಡಿ ಸಂತೋಷಪಟ್ಟರು. ಹಾಗೆಯೇ ಬ್ರಹ್ಮಾದಿ

**ಸಸರ್ಜುಃ ಪುಷ್ಪವರ್ಷಾಣಿ ಖೇಚರಾಃ ಸಿದ್ಧಚಾರಣಾಃ ।**
**ಏವಂ ಸಮಾಪ್ಯ ವೈ ಯಜ್ಞ ಮೈತರೇಯೋ ದ್ವಿಜೋತ್ತಮಾಃ ॥**
**ಮಾತರಂ ಪೂಜಯಿತ್ವಾ ತು ವಿಷ್ಣೋಃ ಸ್ಥಾನಂ ಜಗಾಮ ಹ ।**
**ಏತದ್ವೈಕಥಿತಂ ಸರ್ವಂ ದ್ವಾದಶಾಕ್ಷರ ವೈ ಭವಮ್ ॥೨೯॥**
**ಪಠತಾಂ ಶೃಣ್ವತಾಂ ನಿತ್ಯಂ ಮಹಾಪಾತಕ ನಾಶನಂ ।**
**ಜಪೇದ್ಯಃ ಪುರುಷೋ ನಿತ್ಯಂ ದ್ವಾದಶಾಕ್ಷರಮವ್ಯಯಮ್ ॥೩೦॥**
**ಸ ಯಾತಿ ದಿವ್ಯಮತುಲಂ ವಿಷ್ಣೋಸ್ತತ್ಪರಮಂ ಪದಂ ।**
**ಅಪಿ ಪಾಪ ಸಮಾಚಾರೋ ದ್ವಾದಶಾಕ್ಷರತತ್ಪರಃ ॥೩೧॥**

---

ದೇವತೆಗಳೂ ಸಂತೋಷಗೊಂಡರು. ಆಕಾಶಗಾಮಿಗಳಾದ ಗಂಧರ್ವರೂ ಸಿದ್ಧರೂ ಪುಷ್ಪವರ್ಷಗೈದರು.

೨೮. ಎಲೈ ಬ್ರಾಹ್ಮಣೋತ್ತಮರೇ, ಈ ಪ್ರಕಾರದಲ್ಲಿ ಐತರೇಯನು ಯಜ್ಞವನ್ನು ಮುಗಿಸಿ ತಾಯಿಯಲ್ಲಿಗೆ ಬಂದು ತಾಯಿಯನ್ನು ಪೂಜಿಸಿ ವೈಕುಂಠವನ್ನು ಸೇರಿದನು.

೨೯. ದ್ವಾದಶ ಅಕ್ಷರಾತ್ಮಕವಾದಂಥ ಈ ನಾರಾಯಣ ಮಂತ್ರದ ಪ್ರಭಾವವನ್ನು ಈವರೆಗೆ ಹೇಳಿದುದಾಯಿತು. ಯಾರು ಇದನ್ನು ಯಾವಾಗಲೂ ಜಪಿಸುತ್ತಾರೋ, ಓದುತ್ತಾರೆಯೋ ಅಥವಾ ಕೇಳುತ್ತಾರೆಯೋ, ಅಂತಹ ಮನುಜರ ಪಾಪವನ್ನು ಈ ಮಂತ್ರವು ನಾಶಮಾಡುತ್ತದೆ.

೩೦. ಯಾವ ಪುರುಷನು ನಾಶರಹಿತವಾದ ದ್ವಾದಶಾಕ್ಷರವುಳ್ಳ ಈ ಮಂತ್ರವನ್ನು ಪ್ರತಿದಿನವೂ ಜಪಿಸುತ್ತಾನೋ ಅಂತಹವನು ಅಪಾರವಾದ ಪವಿತ್ರವಾದ ವಿಷ್ಣು ಸಂಬಂಧವಾದ ಶ್ರೇಷ್ಠಸ್ಥಾನವನ್ನು (ವಿಷ್ಣುಲೋಕವನ್ನು) ಹೊಂದುತ್ತಾನೆ.

೩೧. ದುಷ್ಟಕಾರ್ಯವನ್ನು ಮಾಡಿದರೂ ಕೂಡ ಯಾವನು ನಾರಾಯಣ ಮಂತ್ರ ಜಪದಲ್ಲಿ ಆಸಕ್ತಿಯುಳ್ಳವನಾಗಿ ಜಪಿಸುತ್ತಿರುತ್ತಾನೋ ಅವನು ವಿಷ್ಣುಲೋಕವನ್ನು ಪಡೆಯುತ್ತಾನೆಂಬುದರಲ್ಲಿ ಸಂದೇಹದಿಂದ ವಿಮರ್ಶೆಮಾಡುವುದು ಬೇಕಿಲ್ಲ.

ಪ್ರಾಪ್ನೋತಿ ಪರಮಂ ಸ್ಥಾನಂ ನಾತ್ರ ಕಾರ್ಯಾ ವಿಚಾರಣಾ ।
ಕಿಂ ಪುನರ್ಯೇ ಸ್ವಧರ್ಮಸ್ಥಾ ವಾಸುದೇವಪರಾಯಣಾಃ ॥೩೨॥
ದಿವ್ಯಂ ಸ್ಥಾನಂ ಮಹಾತ್ಮಾನಃ ಪ್ರಾಪ್ನುವಂತೀ ತಿ ಸುವ್ರತಾಃ ॥೩೩॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದ್ವಾದಶಾಕ್ಷರ ಪ್ರಶಂಸಾ
ಕಥನಂ ನಾಮ ಸಪ್ತಮೋಽಧ್ಯಾಯಃ

---

೩೨–೩೩. ವೇದೋಕ್ತನಿಯಮಾನುಷ್ಠಾನ ಮಾಡುವವರೇ, ವಾಸುದೇವನಲ್ಲೇ ಯಾವಾಗಲೂ ಆಸಕ್ತರಾಗಿ ತಮ್ಮ ತಮ್ಮ ಧರ್ಮಾಚರಣೆಯನ್ನು ಮಾಡುತ್ತಿರುವ ಈ ಮಹಾತ್ಮರು ವಿಷ್ಣುಲೋಕವನ್ನು ಹೊಂದುತ್ತಾರೆಂಬುದರಲ್ಲಿ ಸಂದೇಹ ಪಡಲು ಕಾರಣವೇನಿರುತ್ತದೆ?

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ದ್ವಾದಶಾಕ್ಷರ ಪ್ರಶಂಸಾ
ಕಥನ ಎಂಬ ಏಳನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
अष्टमोऽध्यायः

॥ ಸೂತ ಉವಾಚ ॥

ಅಷ್ಟಾಕ್ಷರೋ ದ್ವಿಜಶ್ರೇಷ್ಠಾ ನಮೋನಾರಾಯಣೇತಿ ಚ ।
ದ್ವಾದಶಾಕ್ಷರ ಮಂತ್ರಶ್ಚ ಪರಮಃ ಪರಮಾತ್ಮನಃ ॥ ೧ ॥
ಮಂತ್ರಃ ಷಡಕ್ಷರೋಽಪಿ ಪ್ರಾಃ ಸರ್ವವೇದಾರ್ಥ ಸಂಚಯಃ ।
ಯಃ ಶ್ಚೋಂ ನಮಃ ಶಿವಾಯೇತಿ ಮಂತ್ರಸ್ಸರ್ವಾರ್ಥಸಾಧಕಃ ॥ ೨ ॥
ತಥಾ ಶಿವತರಾಯೇತಿ ದಿವ್ಯಃ ಪಂಚಾಕ್ಷರಃ ಶುಭಃ ।
ಮಯಸ್ಕರಾಯ ಚೇತ್ಯೇವಂ ನಮಸ್ತೇ ಶಂಕರಾಯ ಚ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಎಂಟನೆಯ ಅಧ್ಯಾಯವು.

೧. ಎಲೈ ದ್ವಿಜೋತ್ತಮರೇ, ಪರಮಾತ್ಮನಾದ ವಿಷ್ಣುವಿಗೆ ಸಂಬಂಧಪಟ್ಟ ಅಷ್ಟಾಕ್ಷರಾತ್ಮಕವಾದ, ಓಂ ನಮೋ ನಾರಾಯಣಾಯ ಎಂಬ ಮಂತ್ರವೂ. ಸಹ ಶ್ರೇಷ್ಠವಾದುದು.

೨. ಎಲೈ ಬ್ರಾಹ್ಮಣರೇ, ಸಕಲವೇದ ಮತ್ತು ವೇದಾರ್ಥಗಳ ಸಾರಭೂತವಾದ ಯಾವ ಓಂ ನಮಃ ಶಿವಾಯ ಎಂಬ ಆರು ಅಕ್ಷರದಿಂದ ಕೂಡಿರುವ ಮಂತ್ರವುಂಟೋ, ಅದು ಸಕಲಾಭೀಷ್ಟಗಳನ್ನೂ ಕೊಡ ತಕ್ಕದ್ದು.

೩. ಹಾಗೆಯೇ ಶಿವತರಾಯ ಎಂಬ ಐದು ಅಕ್ಷರಗಳುಳ್ಳ ಮಂತ್ರವು ಇನ್ನೂ ಶ್ರೇಷ್ಠವಾದುದು, ಸಕಲಾಭೀಷ್ಟಗಳನ್ನೂ ಉಂಟುಮಾಡಿ ಕೊಡತಕ್ಕುದು. ಮಯಸ್ಕರಾಯ ಎಂಬ ಮಂತ್ರವು ಮಂಗಳವನ್ನುಂಟು ಮಾಡ ತಕ್ಕುದು. ಏಳು ಅಕ್ಷರಗಳುಳ್ಳ ನಮಸ್ತೇ ಶಂಕರಾಯ ಎಂಬ ಪ್ರಕೃತಿ ಪುರುಷ ರೂಪವಾದ ರುದ್ರಸಂಬಂಧಿಯಾದ ಮಂತ್ರವು ಸಕಲಾಭೀಷ್ಟಗಳನ್ನೂ ನೆರವೇರಿಸಿ ಕೊಡತಕ್ಕುದಾಗಿದೆ.

ಸಪ್ತಾಕ್ಷರೋಽಯಂ ರುದ್ರಸ್ಯ ಪ್ರಧಾನ ಪುರುಷಸ್ಯ ವೈ ।
ಬ್ರಹ್ಮಾ ಚ ಭಗವಾನ್ವಿಷ್ಣುಃ ಸರ್ವೇ ದೇವಾಃ ಸವಾಸವಾಃ ॥ ೪ ॥
ಮಂತ್ರೈರೇತೈರ್ದ್ವಿಜ ಶ್ರೇಷ್ಠಾ ಮುನಯಶ್ಚ ಯಜಂತಿ ತಂ ।
ಶಂಕರಂ ದೇವದೇವೇಶಂ ಮಯಸ್ಕರ ಮಜೋದ್ಭವಂ ॥ ೫ ॥
ಶಿವಂ ಚ ಶಂಕರಂ ರುದ್ರಂ ದೇವದೇವಮುಮಾಪತಿಮ್ ।
ಪ್ರಾಹುರ್ನಮಃ ಶಿವಾಯೇತಿ ನಮಸ್ತೇ ಶಂಕರಾಯ ಚ ॥ ೬ ॥
ಮಯಸ್ಕರಾಯ ರುದ್ರಾಯ ತಥಾ ಶಿವತರಾಯ ಚ ।
ಜಪ್ತ್ವಾ ಮುಚ್ಯೇತ ವೈ ವಿಪ್ರೋ ಬ್ರಹ್ಮಹತ್ಯಾದಿಭಿಃ ಕ್ಷಣಾತ್ ॥
ಪುರಾ ಕಶ್ಚಿದ್ದ್ವಿಜಃ ಶಕ್ತೋ ಧುಂಧುಮೂಕ ಇತಿ ಶ್ರುತಃ ।
ಆಸೀತ್ತೃತೀಯೇ ತ್ರೇತಾಯಾ ಮಾವರ್ತೇ ಚ ಮನೋಃ ಪ್ರಭೋಃ ॥

---

೪–೫ ಬ್ರಹ್ಮನೂ, ವಿಷ್ಣುವೂ, ಇಂದ್ರನೊಡನೆ ಸಕಲದೇವತೆಗಳೂ, ಬ್ರಾಹ್ಮಣೋತ್ತಮರೂ ಮತ್ತು ಋಷಿಗಳೂ ಕೂಡ ಷಡಕ್ಷರಾದಿ ಮಂತ್ರಗಳಿಂದ, ಶಂಕರನೂ ದೇವಾಧಿ ದೇವನೂ, ಮಯಸ್ಕರನೂ ಮತ್ತು ಬ್ರಹ್ಮನ ಉತ್ಪತ್ತಿಗೆ ಕಾರಣನೂ ಆದ ಪರಮೇಶ್ವರನನ್ನು ಅರ್ಚಿಸುತ್ತಾರೆ.

೬–೭. ಸಾಕ್ಷಾತ್ತ್ವರ ಶಿವನನ್ನೇ ಶಂಕರನೆಂದೂ, ರುದ್ರನೆಂದೂ ಉಮಾಪತಿಯೆಂದೂ, ದೇವತೆಗಳಿಗೆಲ್ಲರಿಗೂ ಪ್ರಭುವೆಂದೂ, ಹೇಳುತ್ತಾರೆ. ನಮಃ ಶಿವಾಯ ಎಂಬುದಾಗಿಯೂ ನಮಸ್ತೇ ಶಂಕರಾಯ ಎಂಬುದಾಗಿಯೂ, ಮಯಸ್ಕರಾಯ ಎಂಬುದಾಗಿಯೂ, ರುದ್ರಾಯ, ಹಾಗೆಯೇ ಶಿವತರಾಯ ಎಂಬುದಾಗಿಯೂ, ಷಡಕ್ಷರ, ಸಪ್ತಾಕ್ಷರ ಮಂತ್ರಗಳಿಂದಲೂ ಜಪಿಸುವ ಬ್ರಾಹ್ಮಣನು ಬ್ರಹ್ಮಹತ್ಯಾದಿ ಪಾಪಗಳಿಂದ ಬಿಡಲ್ಪಡುತ್ತಾನೆ.

೮. ಪೂರ್ವದಲ್ಲಿ ಪ್ರಭುವಾದ ಮನುವಿನ ತೃತೀಯಾವರ್ತದಲ್ಲಿನ ತ್ರೇತಾಯುಗದಲ್ಲಿ ಧುಂಧುಮೂಕನೆಂದು ಪ್ರಸಿದ್ಧನಾದ ಸಮರ್ಥನಾದ ಬ್ರಾಹ್ಮಣನು ಇದ್ದನು.

ಮೇಘವಾಹನ ಕಲ್ಪೇವ (ವಾ) ಬ್ರಹ್ಮಣಃ ಪರಮಾತ್ಮನಃ ।
ಮೇಘೋ ಭೂತ್ವಾ ಮಹಾದೇವಂ ಕೃತ್ತಿವಾಸ ಸಮೀಶ್ವರಂ ॥ ೯ ॥
ಬಹುಮಾನೇನ ವೈ ರುದ್ರಂ ದೇವದೇವೋ ಜನಾರ್ದನಃ ।
ಖಿನ್ನೋಽತಿ ಭಾರಾದ್ರುದ್ರಸ್ಯ ನಿಶ್ವಾಸೋಚ್ಛ್ವಾಸ ವರ್ಜಿತಃ ॥೧೦॥
ವಿಜ್ಞಾಪ್ಯ ಶಿತಿಕಂಠಾಯ ತಪಶ್ಚಕ್ರೇಽಂಬುಜೇಕ್ಷಣಃ ।
ತಪಸಾ ಪರಮೈಶ್ವರ್ಯಂ ಬಲಂ ಚೈವ ತಥಾಽದ್ಭುತಂ ॥೧೧॥
ಲಬ್ಧವಾನ್ಪರಮೇಶಾನಾ ಚ್ಛಂಕರಾತ್ಪರಮಾತ್ಮನಃ ।
ತಸ್ಮಾತ್ಕಲ್ಪಸ್ತದಾ ಚಾಸೀನ್ಮೇಘವಾಹನ ಸಂಜ್ಞಯಾ ॥೧೨॥
ತಸ್ಮಿನ್ಕಲ್ಪೇಮುನೇಃ ಶಾಪಾದ್ಧುಂಧುಮೂಕ ಸಮುದ್ಭವಃ ।
ಧುಂಧುಮೂಕಾತ್ಮಜಸ್ತೇನ ದುರಾತ್ಮಾ ಚ ಬಭೂವ ಸಃ ॥೧೩॥

---

೯. ಪರಬ್ರಹ್ಮನ (ಪರಮೇಶ್ವರನ) ಮೇಘವಾಹನ ಕಲ್ಪದಲ್ಲಿ ದೇವೋತ್ತಮನಾದ ವಿಷ್ಣುವು ಮೇಘವಾಗಿ ವ್ಯಾಘ್ರಚರ್ಮಾಂಬರಧರನೂ ಮಹಾದೇವನೂ ತ್ರಿಲೋಕೇಶ್ವರನೂ ಆದ ರುದ್ರನನ್ನು ಗೌರವದಿಂದ ಧರಿಸಿದನು.

೧೦–೧೧. ಕಮಲನೇತ್ರನು ರುದ್ರನ ಅತಿಯಾದ ಭಾರದಿಂದ ವ್ಯಸನಗೊಂಡು ಶ್ವಾಸೋಚ್ಛ್ವಾಸ ವಿಲ್ಲದವನಾಗಿ ನೀಲಕಂಠನನ್ನು ವಿಜ್ಞಾಪಸಿಕೊಂಡು ತಪಸ್ಸನ್ನು ಮಾಡಿದನು. ತಪಸ್ಸಿನಿಂದ ತುಷ್ಟನಾದ, ಪರಾತ್ಪರನಾದ ಶಂಕರನಿಂದ ಪರಮೈಶ್ವರ್ಯವನ್ನೂ ಅತಿಶಯವಾದ ಪರಾಕ್ರಮುವನ್ನೂ ಪಡೆದನು.

೧೨. ಆದ ಕಾರಣದ ದೆಸೆಯಿಂದ ಆಗ ಆ ಕಲ್ಪವು ಮೇಘವಾಹನ ಕಲ್ಪವೆಂಬ ಹೆಸರಿನಿಂದ ಪ್ರಸಿದ್ಧವಾಯಿತು.

೧೩. ಮುನಿಶಾಪದಿಂದ ಆ ಕಲ್ಪದಲ್ಲಿ ಧುಂಧು ಮೂಕನು ಹುಟ್ಟಿದನು. ಶಾಪರೂಪವಾದ ತಂದೆಯ ದೋಷದಿಂದ ಧುಂಧುಮೂಕನು ದುಷ್ಟ ಬುದ್ಧಿಯುಳ್ಳವನಾದನು.

ಧುಂಧುಮೂಕಃ ಪುರಾಸಕ್ತೋ ಭಾರ್ಯಯಾ ಸಹ ಮೋಹಿತಃ ।
ತಸ್ಯಾಂ ವೈ ಸ್ಥಾಪಿತೋ ಗರ್ಭಃ ಕಾಮಾಸಕ್ತೇನ ಚೇತಸಾ ॥೧೪॥
ಅಮಾವಾಸ್ಯಾ ಮಹನ್ಯೇವ ಮುಹೂರ್ತೇ ರುದ್ರದೈವತೇ ।
ಅಂತರ್ವರ್ತ್ನೀ ತದಾ ಭಾರ್ಯಾ ಮುಕ್ತಾ ತೇನ ಯಥಾಸುಖಂ ॥
ಅಸೂತ ಸಾ ಚ ತನಯಂ ವಿಶಲ್ಯಾಖ್ಯಾ ಪ್ರಯತ್ನತಃ ।
ರುದ್ರೇ ಮುಹೂರ್ತೇ ಮಂದೇನ ವೀಕ್ಷಿತೇ ಮುನಿಸತ್ತಮಾಃ ॥೧೬॥
ಮಾತುಃ ಪಿತುಸ್ತಥಾಽರಿಷ್ಟಂ ಸ ಸಂಜಾತಸ್ತಥಾಽತ್ಮನಃ ।
ಋಷೀ ತಮೂಚತುರ್ವಿಪ್ರಾ ಧುಂಧುಮೂಕಂ ಮಿಥಸ್ತದಾ ॥೧೭॥
ಮಿತ್ರಾವರುಣನಾಮಾನೌ ದುಷ್ಪುತ್ರ ಇತಿ ಸತ್ತಮೌ ।
ದುಃಖಿತೋ ಧುಂಧುಮೂಕೋಽಸೌ ದೃಷ್ಟ್ವಾಪುತ್ರಮುವಸ್ಥಿತಮ್ ।
ವಸಿಷ್ಠಃ ಪ್ರಾಹ ನೀಚೋಽಪಿ ಪ್ರಭಾವಾದ್ವೈ ಬೃಹಸ್ಪತೇಃ ॥೧೮॥

---

೧೪–೧೫. ಧುಂಧುಮೂಕನು ಹಿಂದೆ ವಿರಕ್ತನಾಗಿರುತ್ತಿದ್ದನು. ವಿರಕ್ತನಾದರೂ, ಒಂದಾನೊಂದು ದಿವಸ ಮೋಹಿತನಾಗಿ ಹೆಂಡತಿ ಯೊಡನೆ ಕೂಡಿದನು. ಅಮಾವಾಸ್ಯೆಯ ದಿವಸ ರುದ್ರದೈವಾತ್ಮಕವಾದ ಮುಹೂರ್ತದಲ್ಲಿ ಹಗಲಿನಲ್ಲೇ ಕಾಮದಿಂದ ಆ ವೃತವಾದ ಮನಸ್ಸುಳ್ಳ ಧುಂಧುಮೂಕನಿಂದ ಉಪಭೋಗಿಸಲ್ಪಟ್ಟು ಗರ್ಭವು ಸ್ಥಾಪಿಸಲ್ಪಡಲು, ಆಗ ಅವಳು ಗರ್ಭವತಿಯಾದಳು.

೧೬. ಮುನಿಶ್ರೇಷ್ಠರೇ, ವಿಶಲ್ಯೆಯೆಂಬ ಆ ಧುಂಧುಮೂಕನ ಪತ್ನಿಯು ಶನಿಯಿಂದ ಲಗ್ನವು ನೋಡಲ್ಪಡುತ್ತಿರಲು ಭಯಂಕರವಾದ ಮುಹೂರ್ತದಲ್ಲಿ ಪ್ರಯಾಸದಿಂದ ಮಗನನ್ನು ಪ್ರಸವಿಸಿದಳು.

೧೭. ಆ ಮಗನು ತಾಯಿಗೂ ತಂದೆಗೂ ಹಾಗೆಯೇ ತನಗೂ ಸಹ ಕೇಡುಂಟಾಗುವ ಪ್ರಕಾರದಲ್ಲಿ ಹುಟ್ಟಿದನು. ಬ್ರಾಹ್ಮಣರೇ, ಮಿತ್ರ ವರುಣ ಎಂಬಹೆಸರುಳ್ಳ ಇಬ್ಬರು ಋಷಿವರ್ಯರು ಒಟ್ಟಾಗಿ ಆಧುಂಧು ಮೂಕನನ್ನು ಕುರಿತು ದುಷ್ಪುತ್ರನು ಹುಟ್ಟಿದನೆಂದು ಹೇಳಿದರು.

೧೮. ವಸಿಷ್ಠ ಋಷಿಯು, ಇವನು ನೀಚನಾದರೂ ದುಷ್ಟಬುದ್ಧಿ

ಪುತ್ರಸ್ತ್ವಸೌ ದುರ್ಬುದ್ಧಿರಪಿ ಮುಚ್ಯತಿ ಕಲ್ಬಿಷಾತ್ ।
ದುಃಖಿತೋ ಧುಂಧುಮೂಕೋಽಸೌ ದೃಷ್ಟ್ವಾ ಪುತ್ರಮುಪಸ್ಥಿತಂ ॥
ಜಾತಕರ್ಮಾದಿಕಂ ಕೃತ್ವಾ ವಿಧಿವತ್ಸ್ವಯಮೇವ ಚ ।
ಅಧ್ಯಾಪಯಾಮಾಸ ಚ ತಂ ವಿಧಿನೈವ ದ್ವಿಜೋತ್ತಮಾಃ ॥೨೦॥
ತೇನಾಧೀತಂ ಯಥಾನ್ಯಾಯಂ ಧೌಂಧುಮೂಕೇನ ಸುವ್ರತಾಃ ।
ಕೃತೋದ್ವಾಹಸ್ತದಾ ಗತ್ವಾ ಗುರು ಶುಶ್ರೂಷಣೇ ರತಃ ॥೨೧॥
ಅನೇನೈವ ಮುನಿಶ್ರೇಷ್ಠಾ ಧೌಂಧುಮೂಕೇನ ದುರ್ಮದಾತ್ ।
ಭುಕ್ತ್ವಾಽನ್ಯಾಂ ವೃಷಲೀಂ ದೃಷ್ಟ್ವಾ ಸ್ವಭಾರ್ಯಾವದ್ದಿವಾನಿಶಮ್ ॥
ಏಕಶಯ್ಯಾಸನಗತೋ ಧೌಂಧುಮೂಕೋ ದ್ವಿಜಾಧಮಃ ।
ತಥಾ ಚಚಾರ ದುರ್ಬುದ್ಧಿಸ್ತ್ಯಕ್ತ್ವಾ ಧರ್ಮಗತಿಂ ಪರಾಮ್ ॥೨೩॥

---

ಯುಳ್ಳವನಾದರೂ ಬೃಹಸ್ಪತಿಮಹಿಮೆಯಿಂದ ನಿನ್ನ ಈ ಮಗನು ಪಾಪ ದಿಂದ ಬಿಡಲ್ಪಡುತ್ತಾನೆ. ಎಂದು ಹೇಳಿದನು.

೧೯–೨೦. ಧುಂಧು ಮೂಕನು ಹೀಗಾದ ಮಗನನ್ನು ನೋಡಿ ವ್ಯಸನಗೊಂಡನು. ಅನಂತರದಲ್ಲಿ ಶಾಸ್ತ್ರಾನುಸಾರವಾಗಿ ತಾನೇ ಪುತ್ರನಿಗೆ ಜಾತಕರ್ಮಾದಿಗಳನ್ನು ಮಾಡಿದನು. ದ್ವಿಜಶ್ರೇಷ್ಠರೇ, ಅವನಿಗೆ ಅಧ್ಯ ಯನವನ್ನೂ ಕ್ರಮವಾಗಿ ಮಾಡಿಸಿದನು.

೨೧. ಎಲ್ಲೈ ಒಳ್ಳೆಯ ನಿಯ ಮಾನುಸಾರಿಗಳೇ, ಆಧುಂಧು ಮೂಕನ ಮಗನಿಂದ ಕ್ರಮವಾಗಿ ಅಧ್ಯಯನವೂ ಮಾಡಲ್ಪಟ್ಟಿತು. ಅನಂತರದಲ್ಲಿ ಅವನ ವಿವಾಹವೂ ಮಾಡಲ್ಪಟ್ಟಿತು. ಆ ಮೇಲೆ ಅವನ ಹೋಗಿ ಗುರು ಸೇವೆಯಲ್ಲಿ ತತ್ಪರನಾದನು.

೨೩. ಹೀಗೆಯೇ ದುಷ್ಟವಾದಮೇದಸ್ಸಿನಿಂದ ಮದಿಸಿದ ಧುಂಧು ಮೂಕನ ಮಗನು ಬೇರೊಬ್ಬ ಶೂದ್ರಳನ್ನು ಮೋಹಿಸಿ, ತನ್ನ ಪತ್ನಿಯಂತೆ ಉಪಭೋಗಿಸುತ್ತಾ ಹಗಲು ರಾತ್ರಿ ಅಲ್ಲೇ ಇದ್ದನು. ನೀಚನಾದ ಆ ಧುಂಧುಮೂಕನ ಮಗನು ಆ ಶೂದ್ರಳೊಡನೆ ಏಕಶಯ್ಯೆ ಮತ್ತು ಏಕಾ

ಮಾಧ್ವೀ ಪೀತಾ ತಯಾ ಸಾರ್ಧಂ ತೇನ ರಾಗ ವಿವೃದ್ಧಯೇ ।
ಕೇನಾಪಿ ಕಾರಣೇನೈವ ತಾಮುದ್ದಿಶ್ಯ ದ್ವಿಜೋತ್ತಮಾಃ ॥೨೪॥
ನಿಹತಾ ಸಾ ಚ ಪಾಪೇನ ವೃಷಲೀ ಗತಮಂಗಲಾ ।
ತತಸ್ತಸ್ಯಾಸ್ತದಾ ತಸ್ಯ ಭ್ರಾತೃಭಿರ್ನಿಹತಃ ಪಿತಾ ॥೨೫॥
ಮಾತಾ ಚ ತಸ್ಯ ದುರ್ಬುದ್ಧೇಃ ಧೌಂಧುಮೂಕಸ್ಯ ಶೋಭನಾ ।
ಭಾರ್ಯಾ ಚ ತಸ್ಯ ದುರ್ಬುದ್ಧೇಃ ಶ್ಯಾಲಾಸ್ತೇ ಚಾಪಿ ಸುವ್ರತಾಃ ॥
ರಾಜ್ಞಾ ಕ್ಷಣಾದಹೋ ನಷ್ಟಂ ಕುಲಂ ತಸ್ಯಾಶ್ಚ ತಸ್ಯ ಚ ।
ಗತ್ವಾಽಸೌ ಧೌಂಧುಮೂಕಶ್ಚ ಯೇನ ಕೇನಾಪಿ ಲೀಲಯಾ ॥೨೭॥
ದೃಷ್ಟ್ವಾತು ತಂ ಮುನಿಶ್ರೇಷ್ಠಂ ರುದ್ರಜಾಪ್ಯ ಪರಾಯಣಮ್ ।
ಲಬ್ಧ್ವಾ ಪಾಶುಪತಂ ತದ್ವೈ ಪುರಾ ದೇವಾನ್ಮಹೇಶ್ವರಾತ್ ॥೨೮॥

---

ಸನಉಳ್ಳವನಾಗಿ ಶ್ರೇಷ್ಠವಾದ ಧರ್ಮಾಚರಣೆಯನ್ನೆಲ್ಲವನ್ನೂ ತ್ಯಜಿಸಿದನು ಮತ್ತು ಅವಳನ್ನೂ ಜೊತೆಯಲ್ಲೇ ಕೂಡಿರುವವನಾಗಿ ಸಂಚರಿಸಿದನು. ಕಾಮೋದ್ದೀಪನಕ್ಕೋಸ್ಕರ ಅವಳೊಡನೆ ಮಧವನ್ನೂ ಪಾನ ಮಾಡಿದನು.

೨೪. ದ್ವಿಜಶ್ರೇಷ್ಠರೇ, ಅವಳ ವಿಷಯದಲ್ಲಿ ಯಾವುದೋ ಕಾರಣ ದಿಂದ ಪಾಪಿಯಾದ ಅವನು ಪುಣ್ಯವಿಲ್ಲದ ಆ ಶೂದ್ರಳನ್ನು ಕೊಂದನು.

೨೫-೨೬. ಅನಂತರದಲ್ಲಿ ಆ ಶೂದ್ರರಾದ ಅಣ್ಣತಮ್ಮಂದಿರು ಕುಪಿತ ರಾಗಿ ಅವನ ತಂದೆಯನ್ನು ಕೊಂದರು. ಆ ದುರ್ಬುದ್ಧಿಯುಳ್ಳ ಧೌಂಧು ಮೂಕನ ಮಂಗಳಕರಳಾದ ತಾಯಿಯೂ, ಭಾರ್ಯೆಯೂ, ಭಾವಮೈದು ನರೂ, ಎಲ್ಲರೂ, ಎಲೌ ವ್ರತಿಗಳೇ, ರಾಜನಿಂದ ಸ್ವಲ್ಪಕಾಲದಲ್ಲಿಯೇ ಅವನ ಮತ್ತು ಆ ಶೂದ್ರಳ ಕುಲವು ನಾಶಮಾಡಲ್ಪಟ್ಟಿತು.

೨೭-೨೮. ಈ ಧೌಂಧುಮೂಕನು ಹೇಗೋ ಪ್ರಾರಬ್ಧಗತಿಯಿಂದ ಅಲ್ಲಿಂದ ಹೊರಟನು. ಹೋಗುತ್ತಿರಲು ಹಿಂದೆ ಮಹೇಶ್ವರನಾದ ಪಶು ಪತಿಯಿಂದ ಹೇಳಲ್ಪಟ್ಟ ಲಿಂಗಪೂಜಾದಿಗಳಿಂದ ಕೂಡಿದ ಪಾಶುಪತವೆಂಬ ವ್ರತವನ್ನು ಪಡೆದು ಈಶ್ವರನ ಧ್ಯಾನದಲ್ಲಿ ಆಸಕ್ತನಾದ ಮುನಿವರನಾದ ಆ ಬೃಹಸ್ಪತಿಯನ್ನು ನೋಡಿದನು. ಆ ಬೃಹಸ್ಪತಿಯಿಂದ ಪಂಚಾಕ್ಷರ ಮಂತ್ರ ಮತ್ತು ಶ್ರೇಷ್ಠವಾದ ಷಡಕ್ಷರ ಮಂತ್ರ ಇವನ್ನು ಉಪದೇಶ ಪೂರ್ವಕವಾಗಿ ಪಡೆದನು.

ಲಬ್ಧ್ವಾ ಪಂಚಾಕ್ಷರಂ ಚೈವ ಷಡಕ್ಷರಮನುತ್ತಮಮ್ ।
ಪುನಃ ಪಂಚಾಕ್ಷರಂ ಚೈವ ಜಪ್ತ್ವಾ ಲಕ್ಷಂ ಪುನಃ ಪುನಃ ॥೨೯॥

ವ್ರತಂ ಕೃತ್ವಾ ಚ ವಿಧಿನಾ ದಿವ್ಯಂ ದ್ವಾದಶಮಾಸಿಕಮ್ ।
ಕಾಲಧರ್ಮಂ ಗತಃ ಕಲ್ಪೇ ಪೂಜಿತಶ್ಚ ಯಮೇನ ವೈ ॥೩೦॥

ಉದ್ಧೃತಾ ಚ ತಥಾ ಮಾತಾ ಪಿತಾ ಶ್ಯಾಲಾಶ್ಚ ಸುವ್ರತಾಃ ।
ಪತ್ನೀ ಚ ಸುಭಗಾ ಜಾತಾ ಸುಸ್ಮಿತಾ ಚ ಪತಿವ್ರತಾ ॥೩೧॥

ತಾಭಿರ್ವಿಮಾನಮಾರುಹ್ಯ ದೇವೈಸ್ಸೇಂದ್ರೈರಭಿಷ್ಟುತಃ ।
ಗಾಣಪತ್ಯಮನುಪ್ರಾಪ್ಯ ರುದ್ರಸ್ಯ ದಯಿತೋಽಭವತ್ ॥೩೨॥

ತಸ್ಮಾದಷ್ಟಾಕ್ಷರಾನ್ಮಂತ್ರಾತ್ತಥಾ ವೈ ದ್ವಾದಶಾಕ್ಷರಾತ್ ।
ಭವೇತ್ಕೋಟಿಗುಣ(ಂ)ಪುಣ್ಯಂ ನಾತ್ರ ಕಾರ್ಯಾ ವಿಚಾರಣಾ ॥೩೩॥

---

೨೯–೩೦. ಪ್ರತಿ ಮಂತ್ರವನ್ನೂ ಲಕ್ಷಸಾರಿ ಬೇರೆ ಬೇರೆಯಾಗಿ ಜಪಿಸಿದನು. ಮನೋಹರವಾದ ಹನ್ನೆರಡುತಿಂಗಳಲ್ಲೂ ಪಾಶುಪತವ್ರತವನ್ನು ಶಾಸ್ತ್ರಾನುಸಾರಹಾಗಿ ಮಾಡಿ ಕಾಲಾಧೀನನಾಗಿ ಯಮನಿಂದಲೂ ಶಾಸ್ತ್ರಪ್ರಕಾರ ಪೂಜಿಸಲ್ಪಟ್ಟನು.

೩೧. ಎಲೌ ಋಷಿ ನಿಯಮಗಳನ್ನು ಯಥಾವತ್ತಾಗಿ ಅನುಷ್ಠಾನ ಮಾಡುವ ಋಷಿಗಳೇ, ಅನಂತರದಲ್ಲಿ ಆ ಧೌಂಧುಮೂಕನ ತಾಯಿ, ತಂದೆ, ಬಾವಮೈದುನರೂ ಮತ್ತು ಪತ್ನಿಯೂ ಎಚ್ಚರಗೊಳಿಸಲ್ಪಟ್ಟರು. ಪತಿವ್ರತೆಯೂ, ಮಂಗಳಕರವಾದ ಅಂಗ ವಿಶಿಷ್ಟಳೂ ಆದ ಆವನ ಪತ್ನಿಯು ಸಂತೋಷಗೊಂಡಳು.

೩೨. ಅವರುಗಳೊಡನೆ ವಿಮಾನಾರೂಢನಾಗಿ ಇಂದ್ರಸಹಿತರಾದ ಸಕಲದೇವತೆಗಳೂ ಸ್ತೋತ್ರಮಾಡುತ್ತಿರಲು ರುದ್ರಲೋಕಕ್ಕೆ ಹೋಗಿ ಗಣಾಧಿಪತ್ಯವನ್ನು ಪಡೆದು ರುದ್ರನ ಅನುಗ್ರಹಕ್ಕೆ ಪಾತ್ರನಾದನು.

೩೩. ಪಂಚಾಕ್ಷರ ಮತ್ತು ಷಡಕ್ಷರ ಮಂತ್ರಗಳ ಜಪದಿಂದಲೇ ಈ ರೀತಿಯಾದ ಅದ್ಭುತವಾದ ಫಲಗಳು ದೊರೆಯುತ್ತಿರಲು ಅಷ್ಟಾಕ್ಷರ ಮತ್ತು ದ್ವಾದಶಾಕ್ಷರ ಮಂತ್ರಗಳಿಂದ ಅದಕ್ಕಿಂತಲೂ ಎಷ್ಟೋ ಅಧಿಕವಾದ ಪುಣ್ಯ ಲಭ್ಯವಾಗುತ್ತದೆಂಬುದರಲ್ಲಿ ಸಂದೇಹಕ್ಕೆಡೆಯಿಲ್ಲ.

ತಸ್ಮಾಜ್ಜಪೇದ್ಧಿ ಯೋ ನಿತ್ಯಂ ಪ್ರಾಗುಕ್ತೇನ ವಿಧಾನತಃ ।
ಶಕ್ತಿಬೀಜ ಸಮಾಯುಕ್ತಂ ಸ ಯಾತಿ ಪರಮಾಂ ಗತಿಮ್ ॥೩೪॥
ಏತದ್ವಃ ಕಥಿತಂ ಸರ್ವಂ ಕಥಾ ಸರ್ವ ಸ್ವಮುತ್ತಮಮ್ ।
ಯಃ ಪಠೇಚ್ಛೃಣು ಯಾ ದ್ವಾಽಪಿ ಶ್ರಾವಯೇದ್ವಾ ದ್ವಿಜೋತ್ತಮಾನ್ ॥೩೫॥
ಸ ಯಾತಿ ಬ್ರಹ್ಮಲೋಕಂ ತು ರುದ್ರಜಾಪ್ಯ ಮನುತ್ತಮಮ್ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಅಷ್ಟಮೋಽಧ್ಯಾಯಃ

---

೩೪. ಆದಕಾರಣದಿಂದ ಯಾರು ಪ್ರತಿದಿವಸವೂ ಪೂರ್ವೋಕ್ತವಾದ ಕ್ರಮದಲ್ಲಿ ಶಕ್ತಿಬೀಜಗಳಿಂದ ಕೂಡಿದ ಮಂತ್ರವನ್ನು ಜಪಿಸುವರೋ ಅವರು ಶ್ರೇಷ್ಠಗತಿಯನ್ನು ಪಡೆಯುತ್ತಾರೆ.

೩೫–೩೬. ಶ್ರೇಷ್ಠವಾದ ಈ ಕಥಾ ಸರ್ವಸ್ವವೂ ಎಲ್ಲವೂ ನಿಮಗಾಗಿ ಹೇಳಲ್ಪಟ್ಟಿತು. ಯಾರು ಇದನ್ನು ಓದುತ್ತಾರೋ ಕೇಳುತ್ತಾರೋ, ಮತ್ತು ದ್ವಿಜೋತ್ತಮರಿಗೆ ಕೇಳಿಸುತ್ತಾರೋ ಅವರು ಅತ್ಯುತ್ತಮವಾದ ರುದ್ರ ಜಪ ಲಭ್ಯವಾದ ಪರಬ್ರಹ್ಮಲೋಕವನ್ನು ಪಡೆಯುತ್ತಾರೆ.

ಶ್ರೀ ಲಿಂಗಮಹಾಪುರಾಣದ ಉತ್ತರಾರ್ಧದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು



## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ನವಮೋಽಧ್ಯಾಯಃ

॥ ಋಷಯ ಊಚುಃ ॥

ದೇವೈಃ ಪುರಾ ಕೃತಂ ದಿವ್ಯಂ ವ್ರತಂ ಪಾಶುಪತಂ ಶುಭಮ್ ।
ಬ್ರಹ್ಮಣಾ ಚ ಸ್ವಯಂ ಸೂತ ಕೃಷ್ಣೇನಾಕ್ಲಿಷ್ಟ ಕರ್ಮಣಾ ॥ ೧ ॥
ಪತಿತೇನ ಚ ವಿಪ್ರೇಣ ಧೌಂಧುಮೂಕೇನ ವೈ ತಥಾ ।
ಕೃತ್ವಾ ಜಪ್ತ್ವಾ ಗತಿಃ ಪ್ರಾಪ್ತಾ ಕಥಂ ಪಾಶುಪತಂ ವ್ರತಂ ॥ ೨ ॥
ಕಥಂ ಪಶುಪತಿ ರ್ದೇವಃ ಶಂಕರಃ ಪರಮೇಶ್ವರಃ ।
ವಕ್ತು ಮರ್ಹಸಿ ಚಾಸ್ಮಾಕಂ ಪರಂ ಕೌತೂಹಲಂ ಹಿ ನಃ ॥ ೩ ॥

॥ ಸೂತ ಉವಾಚ ॥

ಪುರಾ ಶಾಪಾದ್ವಿನಿರ್ಮುಕ್ತೋ ಬ್ರಹ್ಮ ಪುತ್ರೋ ಮಹಾಯಶಾಃ ।
ರುದ್ರಸ್ಯ ದೇವದೇವಸ್ಯ ಮರುದೇಶಾ ದಿಹಾ ಗತಃ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಾರ್ಧದಲ್ಲಿ ಒಂಬತ್ತನೆಯ ಅಧ್ಯಾಯವು

೧-೩. ಋಷಿಗಳು ಹೇಳಿದರು: ಹಿಂದೆ ದೇವತೆಗಳು ದಿವ್ಯವಾದ ಮಂಗಳಪ್ರದವಾದ ಪಾಶುಪತ ವ್ರತವನ್ನು ಮಾಡಿದರು. ಎಲೈ ಸೂತನೇ, ಬ್ರಹ್ಮನೂ, ಲೀಲಾಮಾತ್ರದಿಂದ ಸಕಲ ಕೆಲಸಗಳನ್ನೂ ಮಾಡುವ ಕೃಷ್ಣನೂ, ಮತ್ತು ಪತಿತನಾದ ವಿಪ್ರನಾದ ಧೌಂಧುಮೂಕನೂ, ಕೂಡ ಆ ವ್ರತವನ್ನಾಚರಿಸಿ ಜಪಿಸಿ ಉತ್ತಮಗತಿಯನ್ನು ಪಡೆದರು. ಆ ಪಾಶುಪತ ವ್ರತ ವೆಂಬುದಾವುದು? ದೇವನೂ, ಮಂಗಳವನ್ನುಂಟುಮಾಡುವವನೂ ಆದ ಪರಮೇಶ್ವರನು ಹೇಗೆ ಪಶುಪತಿಯು? ಎಂಬುದನ್ನು ನನಗೆ ಹೇಳುವವನಾಗು. ಅದನ್ನು ತಿಳಿಯಲು ನಾವು ಬಹಳ ಕುತೂಹಲ ವಿಶಿಷ್ಟರಾಗಿರುತ್ತೇವೆ.

೪. ಸೂತನು ಹೇಳಿದನು.: ಹಿಂದೆ ಮಹಾಯಶಸ್ವಿಯಾದ ಸನತ್ಕುಮಾರನು ರುದ್ರಶಾಪದಿಂದ ಬಿಡಲ್ಪಟ್ಟು ಮರುದೇಶವನ್ನು ಬಿಟ್ಟು ಭಾರತವರ್ಷಕ್ಕೆ ಬಂದನು.

ತ್ಯಕ್ತ್ವಾ ಪ್ರಸಾದಾ ದ್ರುದ್ರಸ್ಯ ಉಷ್ಟ್ರದೇಹ ಮಜಾಜ್ಞಯಾ ।
ಶಿಲಾದ ಪುತ್ರ ಮಾಸಾದ್ಯ ನಮಸ್ಕೃತ್ಯ ವಿಧಾನತಃ ॥ ೫ ॥

ಮೇರು ಪೃಷ್ಠೇ ಮುನಿವರಃ ಶ್ರುತ್ವಾ ಧರ್ಮ ಮನುತ್ತಮಂ ।
ಮಾಹೇಶ್ವರಂ ಮುನಿಶ್ರೇಷ್ಠಾ ಹ್ಯಪೃಚ್ಛ ಚ್ಚ ಪುನಃ ಪುನಃ ॥

ನಂದಿನಂ ಪ್ರಣಿಪತ್ಯೈನಂ ಕಥಂ ಪಶುಪತಿಃ ಪ್ರಭುಃ ।
ವಕ್ತು ಮರ್ಹಸಿ ಚಾಸ್ಮಾಕಂ ತತ್ಸರ್ವಂ ಚ ತದಾಹ ಸಃ ॥ ೭ ॥

ತತ್ಸರ್ವಂ ಶ್ರುತವಾ ನ್ವ್ಯಾಸಃ ಕೃಷ್ಣದ್ವೈಪಾಯನಃ ಪ್ರಭುಃ ।
ತಸ್ಮಾದಹ ಮನುಶ್ರುತ್ಯ ಯುಷ್ಮಾಕಂ ಪ್ರವದಾಮಿ ವೈ ॥ ೮ ॥

---

೫–೬. ರುದ್ರನ ಅನುಗ್ರಹದಿಂದ ಒಂಟೆಯ ದೇಹವನ್ನು ತ್ಯಜಿಸಿದನು. ಬ್ರಹ್ಮನ ಅಪ್ಪಣೆಯಂತೆ ಮೇರುಪರ್ವತದ ಬುಡದಲ್ಲಿ ನಂದಿಯನ್ನು ಕಂಡನು. ಅನಂತರದಲ್ಲಿ ಆ ಮುನಿಶ್ರೇಷ್ಠನು ವಿಧಿವತ್ತಾಗಿ ನಂದಿಗೆ ನಮಸ್ಕರಿಸಿ, ಅವನಿಂದ ಶ್ರೇಷ್ಠವಾದ ಮೋಕ್ಷಧರ್ಮವನ್ನು ಕೇಳಿದನು. ಆಮೇಲೆ ಎಲೈ ಋಷ್ಯುತ್ತಮರೇ, ಸನತ್ಕುಮಾರನು ನಂದಿಯನ್ನು ಪಾಶುಪತ ವ್ರತದಲ್ಲಿ ಪೂಜಿಸಿದುದನ್ನು ಮತ್ತು ಅದರ ಮಹಿಮೆಯನ್ನು ತನಗೆ ಹೇಳಬೇಕೆಂದು ಮತ್ತೆ ಮತ್ತೆ ಕೇಳಿದನು.

೭. ಈ ನಂದಿಯನ್ನು ಸನತ್ಕುಮಾರನು ನಮಸ್ಕರಿಸಿ, ಈಶ್ವರನು ಹೇಗೆ ಪಶುಪತಿಯು? ಎಂಬುದನ್ನು ನನಗೆ ಹೇಳುವವನಾಗು. ಎಂದು ಕೇಳಿದನು. ಆ ನಂದಿಯು ಈ ಇತಿಹಾಸವೆಲ್ಲವನ್ನೂ ಅವನಿಗೆ ಹೇಳಿದನು.

೮. ಆ ಎಲ್ಲ ವೃತ್ತಾಂತವನ್ನೂ ನಮಗೆಲ್ಲರಿಗೂ ಪೂಜ್ಯನಾದ ವ್ಯಾಸ ಮಹರ್ಷಿಯು ಕೇಳಿದನು. ಆ ವ್ಯಾಸಾನುಗ್ರಹದಿಂದ ನಾನು (ಸೂತನು) ಆಗ ಕೇಳಿದುದನ್ನೇ ನಿಮಗೆಲ್ಲರಿಗೂ ಹೇಳುವವನಾಗಿರುತ್ತೇನೆ. ನೀವೆಲ್ಲರೂ ಮಹೇಶ್ವರನನ್ನು ನಮಸ್ಕರಿಸಿ ಆ ವೃತ್ತಾಂತವನ್ನು ಕೇಳುವವರಾಗಿರಿ.

ಸರ್ವೇ ಶೃಣ್ವಂತು ವಚನಂ ನಮಸ್ಕೃತ್ವಾ ಮಹೇಶ್ವರಂ ।

॥ ಸನತ್ಕುಮಾರ ಉವಾಚ ॥

ಕಥಂ ಪಶುಪತಿ ರ್ದೇವಃ ಪಶವಃ ಕೇ ಪ್ರಕೀರ್ತಿತಾಃ ॥ ೯ ॥

ಕೈಃ ಪಾಶೈಃ ತೇ ನಿ ಬಧ್ಯಂತೇ ವಿಮುಚ್ಯಂತೇ ಚ ತೇ ಕಥಂ ।

॥ ಶೈಲಾದಿ ರುವಾಚ ॥

ಸನತ್ಕುಮಾರ ವಕ್ಷ್ಯಾಮಿ ಸರ್ವ ಮೇತದ್ಯಥಾ ತಥಂ ॥೧೦॥

ರುದ್ರ ಭಕ್ತಸ್ಯ ಶಾಂತಸ್ಯ ತವ ಕಲ್ಯಾಣ ಚೇತಸಃ ।

ಬ್ರಹ್ಮಾದ್ಯಾಃ ಸ್ಥಾವರಾಂತಾಶ್ಚ ದೇವದೇವಸ್ಯ ಧೀಮತಃ ॥೧೧॥

ಪಶವಃ ಪರಿಕೀರ್ತ್ಯಂತೇ ಸಂಸಾರ ವಶವರ್ತಿನಃ ।

ತೇಷಾಂ ಪತಿತ್ವಾ ದ್ಭಗವಾನ್ ರುದ್ರಃ ಪಶುಪತಿಃ ಸ್ಮೃತಃ ॥೧೨॥

---

೯. ಸನತ್ಕುಮಾರನು ಹೇಳಿದನು.: ಶಂಭುವು ಪಶುಪತಿಯು ಹೇಗೆ? ಪಶುಗಳು ಯಾವುವು? ಆ ಪಶುಗಳು ಯಾವ ಪಾಶದಿಂದ ಬಿಗಿಯಲ್ಪಟ್ಟಿವೆ? ಅವುಗಳ ಬಿಡುಗಡೆ ಹೇಗೆ?

೧೦. ನಂದಿಯು ಹೇಳಿದನು.: ಸನತ್ಕುಮಾರನೇ, ರುದ್ರಭಕ್ತನಾದ, ತಪೋನಿಧಿಯಾದ, ಸಕಲರ ಶುಭವನ್ನೂ ಬಯಸುವ ಮನಸ್ಸುಳ್ಳ ನಿನಗೆ ಎಲ್ಲ ವೃಂತ್ತಾಂತವನ್ನೂ ವಿಶದವಾಗಿ ಹೇಳುತ್ತೇನೆ.

೧೧–೧೨. ಬ್ರಹ್ಮನೇ ಮೊದಲಾಗಿ ಸ್ಥಾವರಪದಾರ್ಥದವರೆಗೆ ಇರುವ ಸಕಲವೂ ದೇವದೇವನಾದ ಪರಮೇಶ್ವರನ ಸಂಸಾರದಲ್ಲಿ ಮುಳುಗಿರುವುದರಿಂದ ಪಶುಗಳೆಂದು ಹೇಳಲ್ಪಡುತ್ತವೆ. ಅವನು ಅವರುಗಳಿಗೆ ಒಡೆಯನಾದುದರಿಂದಲೇ ಅಷ್ಟೈಶ್ವರ್ಯಯುಕ್ತನಾದ ರುದ್ರನು ಪಶುಪತಿಯೆಂಬುದಾಗಿ ಪ್ರಸಿದ್ಧನಾಗಿರುತ್ತಾನೆ.

ಅನಾದಿ ನಿಧನೋ ಧಾತಾ ಭಗನಾನ್ವಿಷ್ಣು ರವ್ಯಯಃ ॥
ಮಾಯಾ ಪಾಶೇನ ಬಧ್ನಾತಿ ಪಶುವತ್ಪರಮೇಶ್ವರಃ ॥೧೩॥

ಸ ಏವ ಮೋಚಕ ಸ್ತೇಷಾಂ ಜ್ಞಾನಯೋಗೇನ ಸೇವಿತಃ ।
ಅವಿದ್ಯಾ ಪಾಶ ಬದ್ಧಾನಾಂ ನಾನ್ಯೋ ಮೋಚಕ ಇಷ್ಯತೇ ॥೧೪॥

ತಮ್ಮತೇ ಪರಮಾತ್ಮಾನಂ ಶಂಕರಂ ಪರಮೇಶ್ವರಂ ।
ಚತುರ್ವಿಂಶತಿ ತತ್ತ್ವಾನಿ ಪಾಶಾ ಹಿ ಪರಮೇಷ್ಠಿನಃ ॥೧೫॥

ತೈಃ ಪಾಶೈ ರ್ಮೋಚಯತ್ಯೇಕಃ ಶಿವೋ ಜೀವೈರುಪಾಸಿತಃ ।
ನಿಬಧ್ನಾತಿ ಪಶೂನೇಕ ಶ್ಚತುರ್ವಿಂಶತಿ ಪಾಶಕೈಃ ॥೧೬॥

---

೧೩. ಆದಿ ಮತ್ತು ಅಂತ್ಯ ಶೂನ್ಯನೂ, ಸೃಷ್ಟಿಕರ್ತೃವೂ, ನಾಶ ರಹಿತನೂ, ಒಡೆಯನೂ ಆದ ಪರಮೇಶ್ವರನು, ಪ್ರಾಣಿಗಳನ್ನು ಹೇಗೋ ಹಾಗೆ, ಮಾಯಾ ಪಾಶದಿಂದ ಸಕಲ ಚರಾ ಚರವನ್ನೂ ಬಂಧಿಸುತ್ತಾನೆ.

೧೪. ಮಾಯಾ ಪಾಶದಿಂದ ಬದ್ಧರಾದ ಪ್ರಾಣಿಗಳನ್ನೂ ಪಾಶದಿಂದ ವಿನಿರ್ಮುಕ್ತರನ್ನಾಗಿಯೂ ಮಾಡಲು ಆ ಪರಮೇಶ್ವರನೇ ಸಮರ್ಥನು. ಅವನು ಸೇವಿಸಲ್ಪಟ್ಟ ಅನಂತರವೇ ಅಧ್ಯಾತ್ಮಜ್ಞಾನದಿಂದ ಪಾಶಮೋಚಕ ನಾಗುತ್ತಾನೆ ಪರಾತ್ಪರ ತತ್ವವಾದ ಶಂಕರನಲ್ಲದೇ ಬೇರೆಯವರು ಮಾಯಾಪಾಶ ಬದ್ಧರನ್ನು ಬಂಧನದಿಂದ ಬಿಡಿಸಲಾರರು.

೧೫. ಪರಮೇಶ್ವರನ ಪಾಶಗಳು ಇಪ್ಪತ್ತುನಾಲ್ಕು ತತ್ತ್ವಗಳೇ ಆಗಿ ರುತ್ತವೆ. ಆ ಪಾಶಗಳಿಂದ ಪರಮೇಶ್ವರನು ಜೀವರುಗಳನ್ನು ಬಂಧಿಸು ತ್ತಾನೆ. ಅನಂತರದಲ್ಲಿ ಆ ಜೀವರುಗಳಿಂದ ಸೇವಿಸಲ್ಪಟ್ಟು ಪರಮೇಶ್ವರ ನೊಬ್ಬನೇ ಆ ಪಾಶಗಳಿಂದ ಅವರನ್ನು ಬಿಡಿಸುತ್ತಾನೆ.

೧೬. ಪರಮೇಶ್ವರನೊಬ್ಬನೇ ಜೀವರನ್ನು ಇಪ್ಪತ್ತುನಾಲ್ಕು ಪಾಶ ಗಳಿಂದ ಬಂಧಿಸಲೂ ಸಮರ್ಥನು. ಜೀವರಿಂದ ಸೇವಿಸಲ್ಪಟ್ಟಮೇಲೆ ಬಂಧ ಮೋಚನೆಯಲ್ಲಿ ಸಮರ್ಥನೂ ಸಹ ಆ ಪೂಜ್ಯನಾದ ರುದ್ರನೊಬ್ಬನೇ.

ಸ ಏವ ಭಗವಾನ್ರುದ್ರೋ ಮೋಚಯತ್ಯಪಿ ಸೇವಿತಃ ।
ದಶೇಂದ್ರಿಯ ಮಯೈಃ ಪಾಶೈಃ ಅಂತಃ ಕರಣ ಸಂಭವೈಃ ॥೧೭॥
ಭೂತ ತನ್ಮಾತ್ರ ಪಾಶೈಶ್ಚ ಪಶೂ ನ್ಮೋಚಯತಿ ಪ್ರಭುಃ ।
ಇಂದ್ರಿಯಾರ್ಥ ಮಯೈಃ ಪಾಶೈ ರ್ಬದ್ಧ್ವಾ ವಿಷಯಿಣಃ ಪ್ರಭುಃ ॥
ಆಶು ಭಕ್ತಾ ಭವಂತ್ಯೇವ ಪರಮೇಶ್ವರ ಸೇವಯಾ ।
ಭಜ ಇತ್ಯೇಷ ಧಾತುರ್ವೈ ಸೇವಾಯಾಂ ಪರಿಕೀರ್ತಿತಃ ॥೧೯॥
ತಸ್ಮಾ ತ್ಸೇವಾ ಬುಧೈಃ ಪ್ರೋಕ್ತಾ ಭಕ್ತಿ ಶಬ್ದೇ ನ ಭೂಯಸೀ ।
ಬ್ರಹ್ಮಾದಿ ಸ್ತಂಬ ಪರ್ಯಂತಂ ಪಶೂನ್ಬಧ್ವಾ ಮಹೇಶ್ವರಃ ॥೨೦॥
ತ್ರಿಭಿ ರ್ಗುಣ ಮಯೈಃ ಪಾಶೈಃ ಕಾರ್ಯಂ ಕಾರಯತಿ ಸ್ವಯಂ ।
ದೃಢೇನ ಭಕ್ತಿಯೋಗೇನ ಪಶುಭಿಃ ಸಮುಪಾಸಿತಃ ॥೨೧॥

---

೧೭-೧೮. ಹತ್ತು ಇಂದ್ರಿಯ ಪ್ರಚುರವಾದ ಪಾಶಗಳಿಂದಲೂ, ಅಂತಃ ಕರಣ ಸಂಭವಗಳಾದ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಗಳೆಂಬ ನಾಲ್ಕು ಪಾಶಗಳಿಂದಲೂ ಶಬ್ದಾದಿ ಗುಣಗಳೆಂಬ ಪಂಚ ಪಾಶಗಳಿಂದಲೂ, ಪಾರ್ಥಿವಾದಿ ಪಂಚ ವಿಷಯಗಳೆಂಬ ಪಾಶಗಳಿಂದಲೂ ಜಂತುಗಳು ಬಂಧಿಸಲ್ಪಟ್ಟಿತರುತ್ತವೆ. ಸಮರ್ಥನಾದ ಪರಮೇಶ್ವರನೇ ಸೇವಾಶುದ್ಧರಾದ ಜೀವರ ಬಂಧ ವಿಮೋಚನೆಯನ್ನು ಮಾಡುತ್ತಾನೆ.

೧೯. ಪರಮೇಶ್ವರನನ್ನು ಸೇವಿಸುವುದರಿಂದ ಜೀವರುಗಳು ಜಾಗ್ರತೆ ಯಾಗಿ ಭಕ್ತರಾಗುತ್ತಾರೆ. ಭಜ ಎಂಬ ಧಾತುವಿನ ಅರ್ಥವು ಸೇವೆ ಯೆಂದೇ ಹೇಳಲ್ಪಡುತ್ತದೆ. ಆದಕಾರಣದಿಂದ ವಿದ್ವಾಂಸರು ಭಕ್ತಿ ಶಬ್ದದಿಂದ ಸೇವೆಯನ್ನೇ ಹೆಚ್ಚಾಗಿ ಹೇಳುತ್ತಾರೆ.

೨೦. ಬ್ರಹ್ಮನೇ ಮೊದಲಾಗಿ ಸ್ತಂಬದವರೆಗೂ ಮಹೇಶ್ವರನು ಸಕಲರನ್ನೂ ಮಾಯಾ ಪಾಶದಿಂದ ಬಿಗಿಯುತ್ತಾನೆ. ಸತ್ವಾದಿ ಗುಣ ಗಳೆಂಬ ಪಾಶಗಳಿಂದ ತಾನು ಸಕಲ ಕೆಲಸಗಳನ್ನೂ ಮಾಡಿಸುತ್ತಾನೆ.

೨೧. ಅಚಲವಾದ ಭಕ್ತಿಯಿಂದ ಜೀವರುಗಳಿಂದ ಸೇವಿಸಲ್ಪಟ್ಟರೆ ಶಂಕರನಾದ ಪರಮೇಶ್ವರನು ಅವರುಗಳನ್ನು ತತ್ಕ್ಷಣವೇ ಬಂಧನದಿಂದ ಮುಕ್ತರನ್ನಾಗಿಯೂ ಮಾಡುತ್ತಾನೆ.

ಮೋಚಯತ್ಯೇವ ತಾನ್ಸದ್ಯಃ ಶಂಕರಃ ಪರಮೇಶ್ವರಃ ।
ಭಜನಂ ಭಕ್ತಿರಿತ್ಯುಕ್ತಾ ವಾಙ್ಮನಃ ಕಾಯ ಕರ್ಮಭಿಃ ॥೨೨॥

ಸರ್ವ ಕಾರ್ಯೇಣ ಹೇತುತ್ವಾತ್ಪಾಶಚ್ಛೇದ ಪಟೀಯಸೀ ।
ಸತ್ಯಃ ಸರ್ವಗ ಇತ್ಯಾದಿ ಶಿವಸ್ಯ ಗುಣಚಿಂತನಾ ॥೨೩॥

ರೂಪೋ ಪಾದಾನ ಚಿಂತಾ ಚ ಮಾನಸಂ ಭಜನಂ ವಿದುಃ ।
ವಾಚಿಕಂ ಭಜನಂ ಧೀರಾಃ ಪ್ರಣವಾದಿ ಜಪಂ ವಿದುಃ ॥೨೪॥

ಕಾಯಿಕಂ ಭಜನಂ ಸದ್ಭಿಃ ಪ್ರಾಣಾಯಾಮಾದಿ ಕಥ್ಯತೇ ।
ಧರ್ಮಾ ಧರ್ಮ ಮಯೈಃ ಪಾಶೈ ರ್ಬಂಧನಂ ದೇಹಿನಾಮಿದಂ ॥

---

೨೨. ಮಾತು, ಮನಸ್ಸು, ಶರೀರ ಮತ್ತು ಕೆಲಸ ಇವುಗಳಿಂದಾಗುವ ಭಗವಂತನ ಸೇವೆಗೆ ಭಕ್ತಿಯೆಂಬುದಾಗಿ ಹೆಸರು. ಅದು ಸಕಲವಾದ ಮಾಯಾಕಾರ್ಯಗಳಿಗೂ, ಕಾರಣವಾಗಿರುವುದರಿಂದ ಪ್ರಭುವಾದ ವಿಷ್ಣುವಿಗೆ ಮಾಯಾ ಪಾಶವನ್ನು ನಾಶಮಾಡುವುದರಲ್ಲಿ ಸಹಾಯವಾದುದಾಗಿದೆ.

೨೩. ಶಿವನು ಸತ್ಯ ಸ್ವರೂಪನೂ, ಸಕಲರಲ್ಲಿಯೂ ಇರುವವನೂ, ಹೀಗೆಂಬ ಶಿವನ ಗುಣ ಚಿಂತನೆಯೂ, ಶಿವನ ರೂಪಾದಿ ಚಿಂತನೆಯೂ ಸಹ ಮಾನಸಿಕವಾದ ಭಜನೆ ಎಂಬುದಾಗಿ ತಿಳಿಯಲ್ಪಡುತ್ತದೆ.

೨೪. ಉಪಾಸಕರು ಓಂಕಾರಾದಿ ಪ್ರಣವ ಜಪಗಳನ್ನು ವಚನ ಸಂಬಂಧವಾದ ಜಪಗಳೆಂಬುದಾಗಿ ತಿಳಿಯುತ್ತಾರೆ. ಪ್ರಾಣಾಯಾಮಾದಿ ಅಷ್ಟಾಂಗಯೋಗಗಳು ಸತ್ಪುರುಷರಿಂದ ಶರೀರ ಸಂಬಂಧವಾದ ಭಜನೆಗಳೆಂದು ತಿಳಿಯಲ್ಪಡುತ್ತವೆ.

೨೫. ಜೀವರುಗಳ ಈ ಬಂಧನವು ಧರ್ಮ ಮತ್ತು ಅಧರ್ಮ ರೂಪವಾದ ಪಾಶಗಳಿಂದಾದುದು. ಅದರ ಮೋಚಕನು ಸಮರ್ಥನಾದ ಪರಮೇಶ್ವರ ನೊಬ್ಬನೇ ಆಗಿದಾನೆ.

ಮೋಚಕಃ ಶಿವ ಏವೈಕೋ ಭಗವಾ ನ್ಪರಮೇಶ್ವರಃ ।
ಚತುರ್ವಿಂಶತಿ ತತ್ತ್ವಾನಿ ಮಾಯಾ ಕರ್ಮ ಗುಣಾ ಇತಿ ॥೨೬॥

ಕೀರ್ತ್ಯಂತೇ ವಿಷಯಾಶ್ಚೇತಿ ಪಾಶಾ ಜೀವ ನಿಬಂಧನಾತ್ ।
ತೈಃ ಬದ್ಧಾಃ ಶಿವಭಕ್ತ್ಯೈವ ಮುಚ್ಯಂತೇ ಸರ್ವ ದೇಹಿನಃ ॥೨೭॥

ಪಂಚ ಕ್ಲೇಶಮಯೈಃ ಪಾಶೈಃ ಪಶೂನ್ ಬಧ್ನಾತಿ ಶಂಕರಃ ।
ಸ ಏವ ಮೋಚಕ ಸ್ತೇಷಾಂ ಭಕ್ತ್ಯಾ ಸಮ್ಯ ಗುಪಾಸಿತಃ ॥೨೮॥

ಅವಿದ್ಯಾ ಮಸ್ಮಿತಾಂ ರಾಗಂ ದ್ವೇಷಂ ಚ ದ್ವಿಪದಾಂ ವರಾಃ ।
ವದಂ ತ್ಯಭಿ ನಿವೇಶಂ ಚ ಕ್ಲೇಶಾ ನ್ಪಾಶತ್ವ ಮಾಗತಾನ್ ॥೨೯॥

ತಮೋ ಮೋಹೋ ಮಹಾಮೋಹ ಸ್ತಾಮಿಸ್ರ ಇತಿ ಪಂಡಿತಾಃ ।
ಅಂಧತಾ ಮಿ ಸ್ರ ಇತ್ಯಾಹು ರವಿದ್ಯಾಂ ಪಂಚಧಾ ಸ್ಥಿತಾಂ ॥೩೦॥

---

೨೬. ಜೀವರುಗಳ ಬಂಧನದ ಕಾರಣದಿಂದ ಇಪ್ಪತ್ತುನಾಲ್ಕು ತತ್ತ್ವಗಳು ಮಾಯಾ ಕಾರ್ಯಗಳೂ ಗುಣಗಳೂ ಆದ ಸತ್ತ್ವಾದಿಗಳು ಮತ್ತು ಶಬ್ದಾದಿಗಳು ಪಾಶಗಳೆಂಬುದಾಗಿ ಹೇಳಲ್ಪಡುತ್ತವೆ.

೨೭. ಆ ಇಪ್ಪತ್ತುನಾಲ್ಕು ಪಾಶಗಳಿಂದ ಬಂಧಿಸಲ್ಪಟ್ಟಿರುವ ಎಲ್ಲ ದೇಹಿಗಳೂ ಶಿವಭಕ್ತಿಯೊಂದರಿಂದಲೇ ಬಿಡುಗಡೆಯಾಗ ಬಲ್ಲರು.

೨೮. ಈಶ್ವರನು ಜೀವರುಗಳನ್ನು ಯೋಗಶಾಸ್ತ್ರೋಕ್ತವಾದ ಪಂಚ ಕ್ಲೇಶಗಳೆಂಬ ಅವಿದ್ಯೆಯ ಪಾಶಗಳಿಂದ ಬಂಧಿಸುತ್ತಾನೆ. ಭಕ್ತಿಯಿಂದ ಸೇವಿಸಲ್ಪಟ್ಟವನಾಗಿ ಆ ಈಶ್ವರನೇ ಆ ಪಾಶಗಳ ಮೋಚಕನೂ ಆಗುತ್ತಾನೆ.

೨೯. ಅವಿದ್ಯಾ, ಆಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಕ್ಲೇಶಗಳನ್ನು ಪಾಶಗಳೆಂದು ವಿದ್ವಾಂಸರು ಹೇಳುತ್ತಾರೆ.

೩೦. ಎಲೈ ಪಂಡಿತರೇ, ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ ಮತ್ತು ಅಂಧತಾಮಿಸ್ರ, ಎಂಬುದಾಗಿ ಪಂಚಪ್ರಕಾರವಾಗಿ ಇರುವ ಅವಿದ್ಯೆಯ ಫಲವಾದ ಕ್ಲೇಶಗಳೆಂದುಹೇಳುತ್ತಾರೆ.

ತಾನ್ ಜೀವಾ ನ್ಮುನಿ ಶಾರ್ದೂಲಾಃ ಸರ್ವಾಂಶ್ಚೈವಾಪ್ಯ ವಿದ್ಯಯಾ ।
ಶಿವೋ ಮೋಚಯತಿ ಶ್ರೀಮಾನ್ನಾನ್ಯಃ ಕಶ್ಚಿದ್ವಿಮೋಚಕಃ ॥೩೧॥

ಅವಿದ್ಯಾಂ ತಮ ಇತ್ಯಾಹುಃ ಅಸ್ಮಿತಾಂ ಮೋಹ ಇತ್ಯಪಿ ।
ಮಹಾ ಮೋಹ ಇತಿ ಪ್ರಾಜ್ಞಾ ರಾಗ ಯೋಗಪರಾಯಣಾಃ ॥೩೨॥

ದ್ವೇಷಂ ತಾಮಿಸ್ರ ಇತ್ಯಾಹು ರಂಧತಾ ಮಿಸ್ರ ಇತ್ಯಪಿ ।
ತಥೈವಾಭಿ ನಿವೇಶಂ ಚ ಮಿಥ್ಯಾಜ್ಞಾನಂ ವಿವೇಕಿನಃ ॥೩೩॥

ತಮಸೋಽಷ್ಟ ವಿಧಾ ಭೇದಾ ಮೋಹಶ್ಚಾಽಷ್ಟ ವಿಧಃ ಸ್ಮೃತಃ ।
ಮಹಾ ಮೋಹ ಪ್ರಭೇದಾಶ್ಚ ಬುಧ್ಯೈರ್ದಶ ವಿಚಿಂತಿ ತಾಃ ॥೩೪॥

---

೩೧. ಮುನಿಪ್ರವರರೇ, ತಮಸ್ ಮುಂತಾದ ಹೆಸರುಳ್ಳ ಅವಿದ್ಯೆಯಿಂದ ಬಂಧಿಸಲ್ಪಟ್ಟಿರುವ ಆ ಎಲ್ಲ ಜೀವರುಗಳನ್ನೂ ಅವಿದ್ಯೆಯಿಂದ ಶಿವನೊಬ್ಬನೇ ಬಿಡಿಸಲು ಸಮರ್ಥನು. ಅವನಲ್ಲದೇ ಬೇರೆ ಯಾರಿಂದಲೂ ಬಂಧದಿಂದ ವಿಮೋಚನೆಯು ಆಗಲಾರದು.

೩೨–೩೩. ಪಂಡಿತರೇ, ಅವಿದ್ಯೆಯನ್ನು ತಮಸ್ ಎಂಬುದಾಗಿಯೂ, ಅಸ್ಮಿತವನ್ನು ಮೋಹವೆಂಬುದಾಗಿಯೂ, ರಾಗವನ್ನು ಮಹಾಮೋಹವೆಂಬುದಾಗಿಯೂ, ದ್ವೇಷವನ್ನು ತಾಮಿಸ್ರ ಎಂದೂ, ಮತ್ತು ಅಭಿನಿವೇಶವೆಂಬುದನ್ನು ಅಂಧತಾಮಿಸ್ರ ಎಂಬುದಾಗಿಯೂ, ಈ ಮಿಥ್ಯಾಜ್ಞಾನದ ಭೇದವನ್ನೂ ಜ್ಞಾನಿಗಳು ಹೇಳುತ್ತಾರೆ. ತಮಸ್ ಎಂದರೆ ಶರೀರವನ್ನೇ ಆತ್ಮನೆಂಬುದಾಗಿ ತಿಳಿಯುವುದು. ಮೋಹ ಎಂದರೆ ನನ್ನ ಹೆಂಡಿತಿ ಮತ್ತು ನನ್ನ ಮಕ್ಕಳು ಎಂಬ ಮಮತೆಯು. ಮಹಾಮೋಹವೆಂದರೆ ಶಬ್ದವೇ ಮೊದಲಾದ ವಿಷಯಗಳಲ್ಲಿರುವ ಇಚ್ಛೆ. ತಾಮಿಸ್ರ ಎಂದರೆ ಇಚ್ಛೆಯು ನೆರವೇರದಿದ್ದರೆ ಉಂಟಾಗತಕ್ಕ ಕೋಪ. ಮತ್ತು ಅಂಧತಾಮಿಸ್ರವೇ ಅಭಿನಿವೇಶವು. ಹೀಗೆ ನನ್ನದು ಇದು. ಇದರ ರಕ್ಷಣೆಯನ್ನು ನಾನು ಮಾಡುವೆನು. ಎಂಬ ಇದೆಲ್ಲವೂ ಮಿಥ್ಯಾಜ್ಞಾನವೇ ಆಗಿರುತ್ತದೆ.

೩೪–೩೫. ತಮಸ್ಸು ಎಂಟು ಪ್ರಕಾರವಾದುದು. ಮೋಹವೂ ಎಂಟು ಪ್ರಕಾರವಾದುದು. ಮಹಾಮೋಹವು ಹತ್ತು ಬಗೆಯಾದುದು. ತಾಮಿಸ್ರವು

ಅಷ್ಟಾದಶ ವಿಧಂ ಪ್ರಾಹುಃ ತಾಮಿಸ್ರಂ ಚ ವಿಚಕ್ಷಣಾಃ
ಅಂಧತಾ ಮಿಸ್ರ ಭೇದಾಶ್ಚ ತಥಾಽಷ್ಟಾದಶಧಾ ಸ್ಮೃತಾಃ ॥೩೫॥

ಅವಿದ್ಯಯಾಽಸ್ಯ ಸಂಬಂಧೋ ನಾತೀತೋ ನಾಸ್ತ್ಯ ನಾಗತಃ ।
ಭವೇದ್ರಾಗೇಣ ದೇವಸ್ಯ ಶಂಭೋರಂಗ ನಿವಾಸಿನಃ ॥೩೬॥

ಕಾಲೇಷು ತ್ರಿಷು ಸಂಬಂಧಸ್ತಸ್ಯ ದ್ವೇಷೇಣ ನೋ ಭವೇತ್ ।
ಮಾಯಾಽ ತೀತಸ್ಯ ದೇವಸ್ಯ ಸ್ಥಾಣೋಃ ಪಶುಪತೇ ರ್ವಿಭೋಃ ॥

ತಥೈವಾಭಿ ನಿವೇಶೇನ ಸಂಬಂಧೋ ನ ಕದಾಚನ ।
ಶಂಕರಸ್ಯ ಶರಣ್ಯಸ್ಯ ಶಿವಸ್ಯ ಪರಮಾತ್ಮನಃ ॥೩೮॥

ಕುಶಲಾ ಕುಶಲೈ ಸ್ತಸ್ಯ ಸಂಬಂಧೋ ನೈವ ಕರ್ಮಭಿಃ ।
ಭವೇತ್ಕಾಲತ್ರಯೇ ಶಂಭೋ ರವಿದ್ಯಾ ಮತಿವರ್ತಿನಃ ॥೩೯॥

---

ಹದಿನೆಂಟು ಪ್ರಕಾರವಾದುದು. ಅಂಧತಾಮಿಸ್ರವೂ ಹದಿನೆಂಟು ಪ್ರಕಾರ ಉಳ್ಳದ್ದೆಂದು ಪ್ರಾಜ್ಞರು ಹೇಳುತ್ತಾರೆ.

೩೬. ಅಂತರ್ಯಾಮಿಯಾದ ಪ್ರಭುವಾದ ಪರಮೇಶ್ವರನಿಗೆ ಅವಿದ್ಯೆಯೊಡನೆ ಸಂಬಂಧವು ಈಗಿನದಾಗಲೀ ಕಳೆದುಹೋದ ಕಾಲದ್ದಾಗಲೀ ಭವಿಷ್ಯತ್ಕಾಲದ್ದಾಗಲೀ ಇಲ್ಲವು. ಎಂದರೆ ಈಶ್ವರನಿಗೆ ಅವಿದ್ಯಾ ಸಂಬಂಧವು ಯಾವಾಗಲೂ ಇರುವುದಿಲ್ಲವು.

೩೭. ಮಾಯಾತೀತನಾದ (ಮಾಯೆಯಿಂದ ಬೇರೆಯವನಾದ) ಸ್ಥಾಣುವಾದ ತೇಜೋಮಯನಾದ ಪ್ರಭುವಾದ ಪಶುಪತಿಗೆ ದ್ವೇಷದೊಡನೆ ಸಂಬಂಧವು ಭೂತಭವಿಷ್ಯದ್ವರ್ತಮಾನ, ಈ ಮೂರು ಕಾಲಗಳಲ್ಲಿಯೂ ಇರುವುದಿಲ್ಲ.

೩೮. ಹಾಗೆಯೇ ಮಂಗಳಕರನಾದ, ರಕ್ಷಕನಾದ, ಶುಭ ಸ್ವರೂಪನಾದ ಪರಮಾತ್ಮನಿಗೆ ಅಭಿನಿವೇಶದೊಡನೆ ಸಂಬಂಧವೂ, ಯಾವಾಗಲೂ ಇಲ್ಲವು.

೩೯. ಅವಿದ್ಯೆಯನ್ನು ಮೀರಿರುವ ಆ ಶಂಭುವಿಗೆ ಕಾಲತ್ರಯದಲ್ಲೂ ಪುಣ್ಯಪಾಪಗಳ ಕಾರಣಗಳಾದ ಕರ್ಮಗಳೊಡನೆ ಸಂಬಂಧವಿಲ್ಲವು.

ವಿಪಾಕೈಃ ಕರ್ಮಣಾಂ ವಾಽಪಿ ನ ಭವೇದೇವ ಸಂಗಮಃ ।
ಕಾಲೇಷು ತ್ರಿಷು ಸರ್ವಸ್ಯ ಶಿವಸ್ಯ ಶಿವದಾಯಿನಃ ॥೪೦॥

ಸುಖ ದುಃಖೈ ರಸಂ ಸ್ಪೃಶ್ಯೈಃ ಕಾಲತ್ರಿತಯ ವರ್ತಿಭಿಃ ।
ಸ ತೈ ರ್ವಿನಶ್ವರೈಃ ಶಂಭು ರ್ಬೋಧಾ ನಂದಾತ್ಮಕಃ ಪರಃ ॥೪೧॥

ಆಶಯೈ ರಪರಾಮೃಷ್ಟಃ ಕಾಲತ್ರಿತಯ ಗೋಚರೈಃ ।
ಧಿಯಾಂ ಪತಿಃ ಸ್ವಭೂರೇಷಃ ಮಹಾದೇವೋ ಮಹೇಶ್ವರಃ ॥೪೨॥

ಅಸ್ಪೃಶ್ಯಃ ಕರ್ಮಸಂಸ್ಕಾರೈಃ ಕಾಲತ್ರಿತಯ ವರ್ತಿಭಿಃ ।
ತಥೈವ ಭೋಗ ಸಂಸ್ಕಾರೈ ರ್ಭಗವಾನಂತ ಕಾಂತಕಃ ॥೪೩॥

ಪುಂ ವಿಶೇಷ ಪರೋ ದೇವೋ ಭಗವಾನ್ಪರಮೇಶ್ವರಃ ।
ಚೇತನಾ ಚೇತನಾಯುಕ್ತ ಪ್ರಪಂಚಾದಖಿಲಾತ್ಪರಃ ॥೪೪॥

---

೪೦. ಸರ್ವಾಂತರ್ಯಾಮಿಯಾಗಿರುವ ಪ್ರಾಣಿಗಳಿಗೆ ಶುಭವನ್ನುಂಟು ಮಾಡುವ ಈಶ್ವರನಿಗೆ ಮೂರು ಕಾಲದಲ್ಲಿಯೂ ಕರ್ಮಗಳ ಫಲಾ ಫಲಗಳೊಡನೆ ಸಂಬಂಧವು ಇಲ್ಲವು.

೪೧. ಜ್ಞಾನಸ್ವರೂಪನೂ, ಆನಂದಸ್ವರೂಪನೂ, ಶ್ರೇಷ್ಠನೂ ಆದ ಶಂಭುವು ನಾಶಿಗಳಾದ, ಮೂರು ಕಾಲಗಳಲ್ಲಿಯೂ ಗೋಚರವಾಗುವ, ಸುಖದುಃಖಗಳಿಂದ ಬೇರೆಯವನಾಗಿರುವನು.

೪೨. ಮೂರು ಕಾಲದಲ್ಲೂ ಉಂಟಾಗುತ್ತಿರುವ ಅನುಭವಸಂಸ್ಕಾರಗಳಿಂದ ಬುದ್ಧಿ ತತ್ವಾಭಿಮಾನಿಯೂ, ಮಹಾದೇವನೂ, ಸ್ವಯಂಭುವೂ ಆದ ಪರಮಾತ್ಮನು ಮುಟ್ಟಲ್ಪಡಲಾರದವನು.

೪೩. ಮೃತ್ಯುನಾಶಕನಾದ ಭಗವಂತನೂ ಆದ ಆ ಪರಮಾತ್ಮನು ಮೂರು ಕಾಲಗಳಲ್ಲಿಯೂ ಉಂಟಾಗುತ್ತಿರುವ ಕರ್ಮ ಸಂಸ್ಕಾರಗಳಿಂದಲೂ, ಭೋಗಸಂಸ್ಕಾರಗಳಿಂದಲೂ, ಮುಟ್ಟಲ್ಪಡತಕ್ಕವನಲ್ಲವು.

೪೪. ತೇಜೋವಂತನಾದ ಪೂಜ್ಯನಾದ ಆ ಪರಮೇಶ್ವರನು ಚೇತನರಾದ ಜೀವರುಗಳಿಂದಲೂ ಅಚೇತನವಾದ ಜಡವಸ್ತುಗಳಿಂದಲೂ ಕೂಡಿದ ಈ ಸಮಸ್ತ ಪ್ರಪಂಚಕ್ಕಿಂತಲೂ ಶ್ರೇಷ್ಠನಾದ ಪುರುಷ ವಿಶೇಷನು.

ಲೋಕೇ ಸಾತಿ ಶಯತ್ವೇನ ಜ್ಞಾನೈಶ್ವರ್ಯಂ ವಿಲೋಕ್ಯತೇ ।
ಶಿವೇನಾತಿ ಶಯಿತ್ವೇನ ಶಿವಂ ಪ್ರಾಹುರ್ಮನೀಷಿಣಃ ॥೪೫॥

ಪ್ರತಿಸರ್ಗಂ ಪ್ರಸೂತಾನಾಂ ಬ್ರಹ್ಮಣಾಂ ಶಾಸ್ತ್ರ ವಿಸ್ತರಂ ।
ಉಪದೇಷ್ಟಾ ಸ ಏವಾದೌ ಕಾಲಾವಚ್ಛೇದ ವರ್ತಿನಾಂ ॥೪೬॥

ಕಾಲಾವಚ್ಛೇದ ಯುಕ್ತಾನಾಂ ಗುರೂಣಾ ಮಪ್ಯಸೌ ಗುರುಃ ।
ಸರ್ವೇಷಾ ಮೇವ ಸರ್ವೇಶಃ ಕಾಲಾವಚ್ಛೇದ ವರ್ಜಿತಃ ॥೪೭॥

ಅನಾದಿ ರೇಷ ಸಂಬಂಧೋ ವಿಜ್ಞಾನೋತ್ಕರ್ಷಯೋಃ ಪರಃ ।
ಸ್ಥಿತಯೋ ರೀದೃಶಃ ಸರ್ವಃ ಪರಿಶುದ್ಧಃ ಸ್ವಭಾವತಃ ॥೪೮॥

ಆತ್ಮ ಪ್ರಯೋಜನಾಭಾವೇ ಪರಾನುಗ್ರಹ ಏವ ಹಿ ।
ಪ್ರಯೋಜನಂ ಸಮಸ್ತಾನಾಂ ಕಾರ್ಯಾಣಾಂ ಪರಮೇಶ್ವರಃ ॥೪೯॥

---

೪೫-೪೬. ಲೋಕದಲ್ಲಿ ಜ್ಞಾನವೆಂಬ ಐಶ್ವರ್ಯವನ್ನು ತಾರತಮ್ಯವುಳ್ಳದು ದನ್ನಾಗಿ ತಿಳಿಯುತ್ತಾರೆ. ಈಶ್ವರನು ಎಲ್ಲರಿಗಿಂತ ಮಿಗಿಲಾಗಿರುವವನಾದು ದರಿಂದಲೇ ಶ್ರೇಷ್ಠನಾದ ಕಲ್ಯಾಣಕಾರಕನೆಂದು ಜ್ಞಾನಿಗಳು ಹೇಳುತ್ತಾರೆ.

೪೭. ಕಾಲಾವಚ್ಛೇದ ವಿಲ್ಲದ ಸರ್ವೇಶ್ವರನಾದ ಪರಮೇಶ್ವರನು ಕಾಲಾವಚ್ಛೇದದಿಂದ ಕೂಡಿರುವ ಸಕಲ ಬ್ರಹ್ಮಾ ಮುಂತಾದ ಗುರುಗ ಳಿಗೂ ಉಪದೇಶಕನಾಗಿರುತ್ತಾನೆಂದು ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ, ಎಂಬ ಶ್ರುತಿಯು ಹೇಳುತ್ತದೆ.

೪೮. ಭಕ್ತಿಯೇ ಮೊದಲಾದುವುಗಳೊಡನೆ ಹೆಚ್ಚು ಸಂಬಂಧವುಳ್ಳ ಜೀವನಿಗೂ, ಸ್ವಸ್ವರೂಪವನ್ನು ಹೊಂದಿಸುವ ಈಶ್ವರನಿಗೂ, ಇರುವ ಸೇವ್ಯಸೇವಕ ಭಾವ ರೂಪಸಂಬಂಧವು ಪುರಾತನವಾದುದು. ವಿಶ್ವ ಸ್ವರೂಪನಾದರೂ ಸ್ವಭಾವವಾಗಿ ಶಿವನು ಪರಿಶುದ್ಧನು. ಮತ್ತು ಹಿಂದೆ ಹೇಳಲ್ಪಟ್ಟ ಮಾಯಾದಿಗಳ ಸಂಬಂಧವಿಲ್ಲದವನು.

೪೯. ಪರಮೇಶ್ವರನು ತಾನು ನಿತ್ಯಾನಂದ ರೂಪ ನಾದುದರಿಂದ ತನ ಗಾಗಿ ಯಾವ ಪ್ರಯೋಜನ ವಿಲ್ಲದಿದ್ದರೂ ಸಮಸ್ತ ಕಾರ್ಯಗಳ ಕಾರಣಸ್ವರೂ ಪನಾಗಿರುವುದು ಜೀವರ ಅನುಗ್ರಹಕ್ಕಾಗಿಯೇ. ಎಂಬುದು ಸ್ಪಷ್ಟವು.

ಪ್ರಣವೋ ವಾಚಕಸ್ತಸ್ಯ ಶಿವಸ್ಯ ಪರಮಾತ್ಮನಃ ।
ಶಿವ ರುದ್ರಾದಿ ಶಬ್ದಾನಾಂ ಪ್ರಣವೋಽಪಿ ಪರಃ ಸ್ಮೃತಃ ॥೫೦॥

ಶಂಭೋಃ ಪ್ರಣವ ವಾಚ್ಯಸ್ಯ ಭಾವನಾ ತಜ್ಜಪಾದಪಿ ।
ಯಾ ಸಿದ್ಧಿಃ ಸ್ವಪರಾ ಪ್ರಾಪ್ಯ ಭವತ್ಯೇವ ನ ಸಂಶಯಃ ॥೫೧॥

ಜ್ಞಾನವತ್ತ್ವಂ ಪ್ರಯತ್ನೇನ ಯೋಗಃ ಪಾಶುಪತಃ ಪರಃ ।
ಉಕ್ತಸ್ತು ದೇವದೇವೇನ ಸರ್ವೇಷಾ ಮನು ಕಂಪಯಾ ॥೫೨॥

ಸ ಹೋವಾಚೈವ ಯಾಜ್ಞವಲ್ಕ್ಯೋ ಯದಕ್ಷರಂ ಗಾರ್ಗ್ಯಯೋಗಿನಃ । ಅಭಿವದಂತಿ ಸ್ಥೂಲಮನಂತಂ ಮಹಾಶ್ಚರ್ಯ ಮದೀರ್ಘ ಮಲೋಹಿತ ಮಮಸ್ತಕ ಮಾಸಾಯ ಮತ ಏವೋ ಪುನಾ ರಸಮ ಸಂಗ ಮಗಂಧ ಮರಸ ಮಚಕ್ಷುಷ್ಕ ಮಶ್ರೋತ್ರ ಮವಾಙ್ಮನೋಽತೇಜಸ್ಕ ಮಪ್ರಾಣ ಮನುಸುಖ ಮನಾಮ ಗೋತ್ರ ಮಮರ ಮಜರ ಮನಾಮಯ ಮಮೃತ ಮೋಂ ಶಬ್ದ ಮಮೃತ ಮಸಂವೃತ ಮಪೂರ್ವ ಮನಪರ ಮನಂತ ಮಬಾಹ್ಯಂ ತದಶ್ನಾತಿ ಕಿಂಚನ ನ ತದಾಶ್ನಾತಿ ಕಿಂಚನ ॥೫೩॥

---

೫೦. ಓಂಕಾರವು ಪರಮಪುರುಷನಾದ ಆ ಶಿವನನ್ನೇ ಹೇಳುತ್ತದೆ. ಶಿವ, ರುದ್ರಮೊದಲಾದ ಶಬ್ದಗಳಿಗಿಂತ ಓಂಕಾರವೇ ಶ್ರೇಷ್ಠವೆಂಬುದಾಗಿ ತಿಳಿಯಲ್ಪಟ್ಟಿರುತ್ತದೆ.

೫೧. ಪ್ರಣವ ಶಬ್ದದಿಂದ ವಾಚ್ಯನಾದ ಶಂಭುವಿನ ಭಾವನೆ ಮತ್ತು ಪ್ರಣವ ಶಬ್ದಮಾತ್ರ ಜಪದಿಂದ ಯಾವ ಸಿದ್ಧಿಯಾಗುತ್ತದೋ ಅದು ಪ್ರಣವಕ್ಕಿಂತಲೂ ಬೇರೆಯಾದುದನ್ನು ಜಪಿಸುವುದರಿಂದ ಆಗುವುದಿಲ್ಲವೆಂಬುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೫೨. ಶ್ರೇಷ್ಠವಾದ ಶೈವತತ್ವಜ್ಞಾನವು ಪಾಶುಪತಯೋಗವು. ಸಕಲರಲ್ಲಿಯೂ ದಯೆಯಿಂದ ಸೂರ್ಯರೂಪಿ ಈಶ್ವರನಾದ ಪರಮಶಿವನಿಂದ ಈ ಯೋಗವು ಪ್ರಯತ್ನ ಪೂರ್ವಕವಾಗಿ ಹೇಳಲ್ಪಟ್ಟಿತು.

೫೩. ಪ್ರಸಿದ್ಧನಾದ ಸೂರ್ಯನಿಂದ ಉಪದೇಶ ಹೊಂದಿದ ಯಾಜ್ಞವಲ್ಕ್ಯನು ಹೇಳಿದನು. ಎಲೌ ಗಾರ್ಗಿಯೇ,ನಾಶ ವಿಲ್ಲದೇ ಇರುವ

ಏತತ್ಕಾಲ ವ್ಯಯೋ ಜ್ಞಾತ್ವಾ ಪರಂ ಪಾಶುಪತಂ ಪ್ರಭುಂ ।
ಯೋಗೇ ಪಾಶುಪತೇ ಚಾಸ್ಮಿ ನ್ಯಸ್ಯಾರ್ಥಃ ಕಿಲ ಉತ್ತಮೋ ॥೫೪॥

ಕೃತ್ವೋಂಕಾರ ಪ್ರದೀಪಂ ಮೃಗಯ ಗಹಪತಿಂ ಸೂಕ್ಷ್ಮ ಮಾದ್ಯಂ ತರಸ್ಥಂ । ಸಂಯಮ್ಯದ್ವಾರ ವಾಸಂ ಪಾವನ ಪಟುತರಂ ನಾಯಿ ಕಂ ಚೇಂದ್ರಿಯಾಣಾಂ ॥

ವಾಲ್ಮ್ಯಾಲ್ಯೈಃ ಕಸ್ಯಹೇತೋ ರ್ವಿಭಟಿಸಿತು ಭಯಂ ದೃಶ್ಯತೇ ನೈವ ಕಿಂಚಿ ದ್ದೇಹಸ್ಥಂ ಪಶ್ಯಶಂಭುಂ ಭ್ರಮಸಿ ಕಿಮುಪರೇ ಶಾಸ್ತ್ರ ಜಾಲೇಂಧ ಕಾರೇ ॥೫೫॥

---

ಆ ಪರಶಿವ ವಸ್ತುವನ್ನು ವಿರಾಟ್ಸ್ವರೂಪದಿಂದಿರುವ, ಅಪಾರವಾಗಿರುವ, ಮಹಾಶ್ಚರ್ಯಕರವಾಗಿರುವುದನ್ನಾಗಿ ಯೋಗಿಗಳು, ಶ್ರುತಿಯಹಾಗೆ,ನಿಷೇಧ ಮುಖವಾಗಿ ವರ್ಣಿಸುತ್ತಾರೆ. ಇದು ಲಂಬತ್ವವಿಲ್ಲದೇ ಇರುವ,ರಕ್ತವರ್ಣ ವಿಲ್ಲದಿರುವ, ಉಪರಿ ಮಾರ್ಗ ವಿಲ್ಲದಿರುವ, ಅಸ್ತಮಿತರೂಪ ವಿಲ್ಲದುದ ರಿಂದಲೇ ನಿಶ್ಚಯವಾಗಿಯೂ ಆನಂದ ಸ್ವರೂಪವಾಗಿರುವುದು;ಇದು ಸ್ಪರ್ಶ ಶೂನ್ಯವಾದುದು, ಗಂಧ ಶೂನ್ಯವಾದುದು, ರಸ ಶೂನ್ಯವಾದುದು, ರೂಪ ಶೂನ್ಯವಾದುದು. ಶಬ್ದ ಶೂನ್ಯವಾದುದು, ಮಾತು ಮತ್ತು ಮನಸ್ಸಿಗೆ ಅತೀತವಾದುದು, ಸುಡದೇ ಇರುವುದು ; ಶ್ರುತಿಯು ಹೊರತು ಬೇರೇ ಪ್ರಮಾಣವಿಲ್ಲದಿರುವುದು,ಹೆಸರು ಗೋತ್ರಗಳಿಲ್ಲದಿರುವ, ಸಾವಿಲ್ಲದಿರುವ, ವಯಸ್ಸಿನಿಂದುಂಟಾಗುವ ಹಾನಿಯಿಲ್ಲದಿರುವ, ರೋಗವಿಲ್ಲದಿರುವ,ಮೋಕ್ಷ ರೂಪವಾಗಿರುವ,ಓಂಕಾರ ಶಬ್ದದಿಂದ ಪ್ರತಿಪಾದ್ಯವಾದ, ಸುಧಾರೂಪವಾ ಗಿರುವ, ಆಚ್ಛಾದನೆಯುಳ್ಳದ್ದೂ ಇಲ್ಲದ್ದೂ ಆಗಿ, ಪೂರ್ವಭಾಗವಿಲ್ಲದಿರುವ, ಅಪರ ಭಾಗವಿಲ್ಲದಿರುವ, ಬಹಿಸ್ಸ್ವರೂಪವಿಲ್ಲದಿರುವ ಯಾವ ಚಿದ್ವಸ್ತು ವುಂಟೋ ಅದು ವ್ಯಾವಹಾರಿಕವಾಗಿ ಎಲ್ಲವನ್ನೂ ತಿನ್ನುತ್ತದೆ. ಅದೇ ಬ್ರಹ್ಮವು ಪಾರಮಾರ್ಥಿಕವಾಗಿ ಯಾವುದನ್ನೂ ತಿನ್ನುವುದಿಲ್ಲವು.

೫೪. ಈ ಉತ್ತಮವಾದ ಪಾಶುಪತ ಜ್ಞಾನಯೋಗದಿಂದ ಉಕ್ತ ಕಾಲಾನಂತರದಲ್ಲಿ ಪರವಸ್ತುವಿನ ಜ್ಞಾನರೂಪ ಪ್ರಯೋಜನವಾಗಲು, ಪಶುಪತಿಯಿಂದ ಹೇಳಲ್ಪಟ್ಟ ಪೂರ್ವೋಕ್ತವಾದ ಪರಬ್ರಹ್ಮತತ್ವವನ್ನು ತಿಳಿದು ಅಂತ್ಯದಲ್ಲಿ ಪರಮಾತ್ಮನನ್ನು ಭಕ್ತರು ಹೊಂದುವುರು.

೫೫. ಓಂಕಾರವನ್ನು ಧ್ಯಾನ ಮಾಡಿ, ಅಂತರ್ಯಾಮಿಯಾದ ನಿನ್ನಲ್ಲೇ

**ಏವಂ ಸಮ್ಯಗ್ಬುಧ್ಯೈ ಜ್ಞಾನತ್ವಾ ಮುನೀನಾ ಮಥ ಚೋಕ್ತಂ ಶಿವೇನ।**
**ಅಸಮರಸಂ ಪಂಚಧಾ ಕೃತ್ವಾ ಭಯಂಚಾತ್ಮನಿ ಯೋಜಯೇತ್ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ**
**ನವಮೋಽಧ್ಯಾಯಃ**

---

ಇರುವ ಅಣುಸ್ವರೂಪವಾದ ಪರಮವಸ್ತುವನ್ನು ಹುಡುಕು. ಇಂದ್ರಿಯ ಗಳಲ್ಲಿಯೂ ವ್ಯಾಪಿಸಿರುವ, ವಾಯುವಿಗಿಂತಲೂ ವೇಗವಾಗಿರುವ, ಇಂದ್ರಿಯಗಳಿಗೆಲ್ಲಕ್ಕೂ ನಾಯಕನಾದ, ಮನಸ್ಸನ್ನು ಸ್ವಾಧೀನಪಡಿಸಿಕೊಂಡು ದೇಹದಲ್ಲೇ ಇರುವ ಪರವಸ್ತುವನ್ನು ನೋಡು. ಏತಕ್ಕೋಸ್ಕರ ವ್ಯರ್ಥ ವಾಗಿ ವಾದ ವಿವಾದವನ್ನು ಮಾಡುವೆ? ಭಯವು ಸ್ವಲ್ಪವೂ ಇಲ್ಲ. ದ್ವೈತವೇ ಮೊದಲಾದ ಅಂಧಕಾರ ಸಮನಾದ, ಶಾಸ್ತ್ರ ಸಮೂಹವನ್ನು ಅಭ್ಯಸಿಸಿ ಏತಕ್ಕಾಗಿ ಭ್ರಾಂತನಾಗುವೆ.?

೫೬. ಈ ಪ್ರಕಾರವಾಗಿ ಶಿವನಿಂದ ಋಷಿಗಳಿಗೆ ಹೇಳಲ್ಪಟ್ಟ ವಿಷಯ ಗಳನ್ನು ಮೋಕ್ಷೇಚ್ಛೆಯುಳ್ಳವರು, ವಿದ್ವಾಂಸರುಗಳಿಂದ ಚೆನ್ನಾಗಿ ತಿಳಿದು ಆನಂದರೂಪವಾದ ಆತ್ಮಸ್ವರೂಪವನ್ನು ಪಂಚಕೋಶ ಶೋಧನ ರೂಪ ವಾದ ಸಾಧನದಿಂದ ತಿಳಿದು, ಮೋಕ್ಷವನ್ನು ಸ್ವಸ್ವರೂಪ ಹೊಂದುವುದರ ಮೂಲಕ ಆತ್ಮನಲ್ಲಿ ಪಡೆಯಲಿ.

**ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಒಂಬತ್ತನೆಯ**
**ಅಧ್ಯಾಯವು ಮುಗಿದುದು**

---

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ದಶಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಭೂಯ ಏವ ಮಮಾಚಕ್ಷ್ವ ಮಹಿಮಾನ ಮುಮಾಪತೇಃ ।
ಭವ ಭಕ್ತ ಮಹಾಪ್ರಾಜ್ಞ ಭಗವನ್ನಂದಿಕೇಶ್ವರ ॥ ೧ ॥

॥ ಶೈಲಾದಿ ರುವಾಚ ॥

ಸನತ್ಕುಮಾರ ಸಂಕ್ಷೇಪಾತ್ತವ ವಕ್ಷ್ಯಾಮ್ಯಶೇಷತಃ ।
ಮಹಿಮಾನಂ ಮಹೇಶಸ್ಯ ಭವಸ್ಯ ಪರಮೇಷ್ಠಿನಃ ॥ ೨ ॥

ನಾಸ್ಯ ಪ್ರಕೃತಿ ಬಂಧೋಽಭೂ ದ್ಬುದ್ಧಿ ಬಂಧೋ ನ ಕಶ್ಚನ ।
ನ ಚಾ ಹಂಕಾರ ಬಂಧಶ್ಚ ಮನೋ ಬಂಧಶ್ಚನೋಽಭವತ್ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹತ್ತನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು: —ಈಶ್ವರನ ಭಕ್ತನೂ, ಮಹಾಬುದ್ಧಿಶಾಲಿಯೂ, ಪೂಜ್ಯನೂ, ಆದ ನಂದಿಕೇಶ್ವರನೇ, ಪುನಃ ನನಗೆ ಉಮಾಪತಿಯಾದ ಪರಮೇಶ್ವರನ ಮಹಿಮೆಯನ್ನು ಹೇಳುವವನಾಗು.

೨. ನಂದಿಕೇಶ್ವರನು ಹೇಳಿದನು.: —ಎಲೈ ಸನತ್ಕುಮಾರನೇ, ಜಗತ್ಕರ್ತೃವೂ, ಮಹೇಶ್ವರನೂ ಆದ ಈಶನ ಮಹಿಮೆಯನ್ನು ಎಲ್ಲವನ್ನೂ ಸಂಕ್ಷೇಪವಾಗಿ ನಿನಗೆ ಹೇಳುತ್ತೇನೆ.

೩. ಈ ಪರಮೇಶ್ವರನಿಗೆ ಪ್ರಾಕೃತ ಬಂಧವಾಗಲೀ, ಅಹಂಕಾರದಿಂದ ಉಂಟಾದ ಬಂಧವಾಗಲೀ, ಮನಸ್ಸಿನ ಸಂಬಂಧದಿಂದ ಬಂಧವಾಗಲೀ, ಆಗುವದಿಲ್ಲ.

ಚಿತ್ತಬಂಧೋ ನ ತಸ್ಯಾ ಭೂ ಚ್ಛ್ರೋತ್ರ ಬಂಧೋ ನ ಚಾ ಭವತ್।
ನ ತ್ವಚಾಂ ಚಕ್ಷುಷಾಂ ವಾಽಪಿ ಬಂಧೋ ಜಜ್ಞೇ ಕದಾಚನ ॥ ೪ ॥
ಜಿಹ್ವಾ ಬಂಧೋ ನ ತಸ್ಯಾಭೂ ದ್ಘ್ರಾಣ ಬಂಧೋ ನ ಕಶ್ಚ ನ ।
ಪಾದ ಬಂಧಃ ಪಾಣಿ ಬಂಧೋ ವಾಗ್ಬಂಧ ಶ್ಚೈವ ಸುವ್ರತ ॥ ೫ ॥

ಉಪಸ್ಥೇಂದ್ರಿಯ ಬಂಧಶ್ಚ ಭೂತತನ್ಮಾತ್ರ ಬಂಧನಂ ।
ನಿತ್ಯ ಶುದ್ಧ ಸ್ವಭಾವೇನ ನಿತ್ಯ ಬುದ್ಧೋ ನಿಸರ್ಗತಃ ॥ ೬ ॥

ನಿತ್ಯ ಮುಕ್ತ ಇತಿ ಪ್ರೋಕ್ತೋ ಮುನಿಭಿಸ್ತತ್ವವೇದಿಭಿಃ ।
ಅನಾದಿ ಮಧ್ಯ ನಿಷ್ಠಸ್ಯ ಶಿವಸ್ಯ ಪರಮೇಷ್ಠಿನಃ ॥ ೭ ॥

ಬುದ್ಧಿಂ ಸೂತೇ ನಿಯೋಗೇನ ಪ್ರಕೃತಿಃ ಪುರುಷಸ್ಯ ಚ ।
ಅಹಂಕಾರಾಂ ಪ್ರಸೂತೇಽಸ್ಯಾ ಬುದ್ಧಿಸ್ತಸ್ಯ ನಿಯೋಗತಃ ॥ ೮ ॥

---

೪–೫. ಚಿತ್ತದಿಂದಾಗಲೀ, ಶ್ರೋತ್ರಗಳಿಂದಾಗಲೀ, ಕಣ್ಣುಗಳಿಂದಾಗಲೀ, ಸ್ಪರ್ಶೇಂದ್ರಿಯದಿಂದಾಗಲೀ ತಡೆಯು ಯಾವಾಗಲಾದರೂ ಉಂಟಾಗುವದಿಲ್ಲ. ರಸನೇಂದ್ರಿಯದಿಂದಾಗಲಿ ತಡೆಯು ವುಂಟಾಗಲಾರದು. ವಾಗ್ಬಂಧನವು ಈ ಪುರುಷನಿಗಿಲ್ಲ. ವ್ರತನಿಷ್ಠನೇ, ಈ ಮಹೇಶನಿಗೆ ಪಾದ ಬಂಧವಾಗಲೀ, ಪಾಣಿ ಬಂಧವಾಗಲೀ, ಘ್ರಾಣೇಂದ್ರಿಯದಿಂದಾಗಲೀ,ಶಬ್ದಾದಿ ಪಂಚಭೂತಗಳ ಬಂಧನವಾಗಲೀ ಇರುವುದಿಲ್ಲವು.

೬–೮. ಯಾವಾಗಲೂ ಪರಿಶುದ್ಧವಾದ ಸ್ವಭಾವವುಳ್ಳವನಾದುದರಿಂದಲೇ ಆ ಪರಮಾತ್ಮನು ಸ್ವಭಾವವಾಗಿ ಯಾವಾಗಲೂ ಜಾಗೃತನಾಗಿಯೇ ಇರುತ್ತಾನೆ. ತತ್ವಜ್ಞಾನಿಗಳಾದ ಋಷಿಗಳು ಆದಿಮಧ್ಯಾಂತಗಳಿಲ್ಲದಿರುವ ಪ್ರಸಿದ್ಧನಾದ ಪರಮೇಶ್ವರನನ್ನು ನಿತ್ಯಮುಕ್ತನೆಂದು ಹೇಳುತ್ತಾರೆ. ಪ್ರಕೃತಿಯು ಪರಮಪುರುಷನ ಅಪ್ಪಣೆಯಿಂದ ಬುದ್ಧಿಯನ್ನು ಸೃಜಿಸುತ್ತದೆ. ಪ್ರಕೃತಿಯೂ, ಬುದ್ಧಿಯೂ, ಆ ಪರಶಿವನ ಅನುಜ್ಞೆಯ ಪ್ರಕಾರ ಅಹಂಕಾರವನ್ನು ಸೃಜಿಸುತ್ತದೆ.

ಅಂತರ್ಯಾಮೀತಿ ದೇವೇಷು ಪ್ರಸಿದ್ಧಸ್ಯ ಸ್ವಯಂ ಭುವಃ ।
ಇಂದ್ರಿಯಾಣಿ ದಶೈಕಂ ಚ ತನ್ಮಾತ್ರಾಣಿ ಚ ಶಾಸನಾತ್ ॥ ೯ ॥

ಅಹಂಕಾರೋಽತಿ (ಪಿ) ಸಂಸೂತೇ ಶಿವಸ್ಯ ಪರಮೇಷ್ಠಿನಃ ।
ತನ್ಮಾತ್ರಾಣಿ ನಿಯೋಗೇನ ತಸ್ಯ ಸಂಸುವತೇ ಪ್ರಭೋಃ ॥೧೦॥

ಮಹಾ ಭೂತಾನ್ಯಶೇಷೇಣ ಮಹಾದೇವಸ್ಯ ಧೀಮತಃ ।
ಬ್ರಹ್ಮಾದೀನಾಂ ತೃಣಾಂತಂ ಹಿ ದೇಹಿನಾಂ ದೇಹ ಸಂಗತಿಂ ॥೧೧॥

ಮಹಾ ಭೂತಾನ್ಯಶೇಷಾಣಿ ಜನಯಂತಿ ಶಿವಾಜ್ಞಯಾ ।
ಅಧ್ಯವಸ್ಯತಿ ಸರ್ವಾರ್ಥಾ ನ್ಬುದ್ಧಿಸ್ತಸ್ಯಾಜ್ಞಯಾ ವಿಭೋಃ ॥೧೨॥

ಅಂತರ್ಯಾಮೀತಿ ದೇಹೇಷು ಪ್ರಸಿದ್ಧಸ್ಯ ಸ್ವಯಂ ಭುವಃ ।
ಸ್ವಭಾವ ಸಿದ್ಧ ಮೈಶ್ವರ್ಯಂ ಸ್ವಭಾವಾದೇವ ಭೂತಯಃ ॥೧೩॥

ತಸ್ಯಾಜ್ಞಯಾ ಸಮುತ್ಪಾರ್ಥಾ ನಹಂಕಾರೋಽತಿಮನ್ಯತೇ ।
ಚಿತ್ತಂ ಚೇತಯತೇ ಚಾಽಪಿ ಮನಃ ಸಂಕಲ್ಪಯತ್ಯಪಿ ॥೧೪॥

---

೯–೧೧. ಸರ್ವಾಂತರ್ಯಾಮಿಯೆಂದು ಪ್ರಸಿದ್ಧನಾದ ಈಶ್ವರನ ಅಪ್ಪಣೆಯಿಂದ ಅಹಂಕಾರವು ಮನಸ್ಸು ಮತ್ತು ದಶೇಂದ್ರಿಯಗಳನ್ನೂ, ಶಬ್ದಾದಿ ಗುಣಗಳನ್ನೂ, ಸೃಜಿಸುತ್ತದೆ. ಆ ಪ್ರಭುವಾದ ದೇವನ ಅನುಜ್ಞೆಯಿಂದಲೇ ಶಬ್ದಾದಿಗಳು ಸಮಸ್ತವಾದ ಆಕಾಶಾದಿ ಮಹಾ ಭೂತಗಳನ್ನು ಸೃಜಿಸುತ್ತವೆ. ಆ ಮಹಾದೇವನ ಅಪ್ಪಣೆಯಿಂದ ಬ್ರಹ್ಮ ಮೊದಲಾಗಿ ತೃಣದವರೆಗಿನ ಸಕಲ ದೇಹಿಗಳಿಗೂ ದೇಹ ಸಂಸರ್ಗವನ್ನು ಸಕಲವಾದ ಆಕಾಶಾದಿ ಮಹಾಭೂತಗಳು ಉಂಟುಮಾಡುತ್ತವೆ.

೧೨–೧೩. ಸಮರ್ಥನಾದ ಆ ಪರಮಾತ್ಮನ ಅಪ್ಪಣೆಯಿಂದಲೇ ಬುದ್ಧಿಯು ಸಕಲಾರ್ಥಗಳನ್ನೂ, ನಿಶ್ಚಯಮಾಡುತ್ತದೆ. ಸಕಲ ದೇಹಗಳಲ್ಲೂ ಸರ್ವಾಂತರ್ಯಾಮಿಯೆಂದು ಪ್ರಸಿದ್ಧನಾದ ಈಶ್ವರನಿಗೆ ಐಶ್ವರ್ಯವು ಸ್ವಭಾವದಿಂದಲೇ ಉಂಟಾದುದು. ಹಾಗೆಯೇ ಅಣಿಮಾದಿ ಸಿದ್ಧಿಗಳೂ ಕೂಡ ಸ್ವಭಾವವಾಗಿಯೇ ವುಂಟಾದುವು. ಅವುಗಳಿಗೆ ಪ್ರಯತ್ನಗಳೇನೂ ಅವಶ್ಯಕವಲ್ಲವು.

೧೪–೧೫. ಆ ಪರಮಾತ್ಮನ ಅಪ್ಪಣೆಯಿಂದ ಅಹಂಕಾರವು ಸಕ

ಶ್ರೋತ್ರಂ ಶೃಣೋತಿ ತಚ್ಚ್ರಕ್ಯಾ ಶಬ್ದಸ್ಪರ್ಶಾದಿಕಂ ಚ ಯತ್ ।
ಶಂಭೋಃ ರಾಜ್ಞಾ ಬಲೇನೈವ ಭವಸ್ಯ ಪರಮೇಷ್ಠಿನಃ ॥೧೫॥

ವಚನಂ ಕುರುತೇ ವಾಕ್ಯಂ ನಾದಾನಾದಿ ಕದಾಚನ ।
ಶರೀರಾಣಾ ಮಶೇಷಾಣಾಂ ತಸ್ಯ ದೇವಸ್ಯ ಶಾಸನಾತ್ ॥೧೬॥

ಕರೋತಿ ಪಾಣಿ ರಾದಾನಂ ನ ಗತ್ಯಾದಿ ಕದಾ ಚನ ।
ಸರ್ವೇಷಾ ಮೇವ ಜಂತೂನಾಂ ನಿಯಮಾದೇವ ವೇಧಸಃ ॥೧೭॥

ವಿಹಾರಂ ಕುರುತೇ ಪಾದೋ ನೋತ್ಸರ್ಗಾದಿ ಕದಾಚನ ।
ಸಮಸ್ತ ದೇಹಿ ವೃಂದಾನಾಂ ಶಿವಸ್ಯೈವ ನಿಯೋಗತಃ ॥೧೮॥

---

ಲಾರ್ಥಗಳನ್ನೂ ತನ್ನದಾಗಿ ತಿಳಿಯುತ್ತದೆ. ಚಿತ್ತವು ಜ್ಞಾಪಿಸುತ್ತದೆ. ಆ ಪರಮಾತ್ಮನ ಆಜ್ಞಾ ಬಲದಿಂದಲೇ ಶ್ರೋತ್ರೇಂದ್ರಿಯವು ಕೇಳುತ್ತದೆ. ಆ ಪರಮಾತ್ಮನ ಆಜ್ಞಾ ಬಲದಿಂದಲೇ ಶಬ್ದಶ್ರವಣ ಮತ್ತು ಸ್ಪರ್ಶವೇ ಮೊದಲಾದ ಕೆಲಸಗಳು ಆಯಾ ಇಂದ್ರಿಯಗಳಿಂದ ಜರುಗುತ್ತದೆ.

೧೬. ವಾಗಿಂದ್ರಿಯವು ಮಾತನಾಡಬಲ್ಲುದು. ಅಲ್ಲದೇ ಆ ದಾನಾದಿ ಕೆಲಸಗಳನ್ನು ಮಾಡಬಲ್ಲದು. ಸಕಲ ಶರೀರದ ಕೆಲಸಗಳೆಲ್ಲವೂ ಆ ಪರ ಮಾತ್ಮನ ಅಪ್ಪಣೆಯಿಂದಲೇ ನಡೆಯುತ್ತದೆ.

೧೭. ಪರಬ್ರಹ್ಮನ ನಿಯಮವನ್ನು ಅನುಸರಿಸಿಯೇ ಸಕಲ ಜಂತು ಗಳ ಕೆಲಸಗಳೂ ನಡೆಯುವುವಾಗಿವೆ. ಹಸ್ತವು ಆದಾನವೇ ಮೊದಲಾದ ಕೆಲಸಗಳನ್ನು ಮಾಡಬಹುದಲ್ಲದೆ ಗಮನಾದಿ ಕೆಲಸಗಳನ್ನು ಯಾವಾ ಗಲೂ ಮಾಡಲಾರದು.

೧೮. ಶಿವನ ಅಪ್ಪಣೆಯಿಂದ ಪಾದವು ಸಮಸ್ತವಾದ ಜೀವ ಸಮೂ ಹಕ್ಕೆ ವಿಹಾರವನ್ನುಂಟುಮಾಡುವುದಲ್ಲದೆ ಉತ್ಸರ್ಗಾದಿ ಕ್ರಿಯೆಗಳನ್ನು ಯಾವಾಗಲೂ ಮಾಡಲಾರದು.

ಉತ್ಸರ್ಗಂ ಕುರುತೇ ಪಾಯುಃ ನ ವದೇತ ಕದಾಚನ ।
ಜಂತೋರ್ಜಾತಸ್ಯ ಸರ್ವಸ್ಯ ಪರಮೇಶ್ವರ ಶಾಸನಾತ್ ॥೧೯॥

ಆನಂದಂ ಕುರುತೇ ಶಶ್ವದುಪಸ್ಥಂ ವಚನಾದ್ವಿಭೋಃ ।
ಸರ್ವೇಷಾ ಮೇವ ಭೂತಾನಾಮೀಶ್ವರ ಸ್ಯೈವ ಶಾಸನಾತ್ ॥೨೦॥

ಅವಕಾಶ ಮಶೇಷಾಣಾಂ ಭೂತಾನಾಂ ಸಂಪ್ರಯಚ್ಛತಿ ।
ಆಕಾಶಂ ಸರ್ವದಾ ತಸ್ಯ ಪರಮಸ್ಯೈವ ಶಾಸನಾತ್ ॥೨೧॥

ನಿರ್ದೇಶೇನ ಶಿವಸ್ಯೈವ ಭೇದೈಃ ಪ್ರಾಣಾದಿಭಿರ್ನಿಜೈಃ ।
ಬಿಭರ್ತಿ ಸರ್ವಭೂತಾನಾಂ ಶರೀರಾಣಿ ಪ್ರಭಂಜನಃ ॥೨೨॥

ನಿರ್ದೇಶಾದ್ದೇವ ದೇವಸ್ಯ ಸಪ್ತಸ್ಕಂಧ ಗತೋಮರುತ್ ।
ಲೋಕ ಯಾತ್ರಾಂ ಮಹತ್ಯೇವ ಭೇದೈಃ ಸ್ವೈರಾವಹಾದಿಭಿಃ ॥೨೩॥

---

೧೯. ಪರಮೇಶ್ವರನ ಆಜ್ಞೆಯಿಂದ ಪಾಯ್ವಿಂದ್ರಿಯವು ಹುಟ್ಟಿದ ಸಕಲ ಜಂತುಗಳ ಕಶ್ಮಲವನ್ನು ವಿಸರ್ಜಿಸ ಬಲ್ಲುದಲ್ಲದೇ ಯಾವಾಗಲೂ ಮಾತಾಡಲಾರದು.

೨೦. ಪ್ರಭುವಾದ ಈಶ್ವರನ ಅಪ್ಪಣೆಯಿಂದ ಉಪಸ್ಥೇಂದ್ರಿಯವು ಆನಂದವನ್ನು ಕೊಡುತ್ತದೆ. ಆ ಪರಮೇಶ್ವರನ ಅಪ್ಪಣೆಯಿಂದಲೇ ಸಕಲವಾದ ಭೂತಕಾರ್ಯಗಳೂ, ನೆಡೆಯುತ್ತವೆ.

೨೧. ಆ ಪರಮ ಪುರುಷನ ಅನುಜ್ಞೆಯಿಂದಲೇ ಆಕಾಶವು ಸಮಸ್ತ ಭೂತಗಳಿಗೂ ಅವಕಾಶವನ್ನು ಯಾವಾಗಲೂ ಕೊಡುತ್ತದೆ.

೨೨. ವಾಯುವು ಶಿವನ ನಿರ್ದೇಶದಿಂದಲೇ ತನ್ನದಾದ ಪ್ರಾಣ, ಅಪಾನ, ಮೊದಲಾದ ಭೇದಗಳಿಂದ ಸಕಲ ಭೂತಗಳ ಶರೀರಗಳನ್ನು ಧರಿಸುತ್ತಾನೆ.

೨೩. ದೇವದೇವನಾದ ಪರಮೇಶ್ವರನ ಅಪ್ಪಣೆಯಿಂದಲೇ ಏಳು ಪ್ರಕಾರವಾದ ರೂಪವನ್ನು ಪಡೆದಿರುವ ವಾಯುವು ತನ್ನ ಆವಹಾದಿ ಭೇದಗಳಿಂದ ಸಮಸ್ತ ಲೊಕಗಳಲ್ಲಿ ಸಂಚಾರವನ್ನೂ ಮಾಡುತ್ತಾನೆ.

ನಾಗಾದ್ಯೈಃ ಪಂಚಭಿ ರ್ಭೇದೈಃ ಶರೀರೇಷು ಪ್ರವರ್ತತೇ ।
ಅಪದೇಶೇನ ದೇವಸ್ಯ ಪರಮಸ್ಯ ಸಮೀರಣಃ ॥೨೪॥

ಹವ್ಯಂ ವಹತಿ ದೇವಾನಾಂ ಕವ್ಯಂ ಕವ್ಯಾಶಿನಾಮಪಿ ।
ಪಾಕಂ ಚ ಕುರುತೇ ವಹ್ನಿಃ ಶಂಕರಸ್ಯೈವ ಶಾಸನಾತ್ ॥೨೫॥

ಭುಕ್ತ ಮಾಹಾರ ಜಾತಂ ಯತ್ಪಚತೇ ದೇಹಿನಾಂ ತಥಾ ।
ಉದರಸ್ಥಃ ಸದಾ ವಹ್ನಿ ರ್ವಿಶ್ವೇಶ್ವರ ನಿಯೋಗತಃ ॥೨೬॥

ಸಂಜೀವಯಂತ್ಯಶೇಷಾಣಿ ಭೂತಾನ್ಯಾಪಸ್ತದಾಜ್ಞಯಾ ।
ಅವಿಲಂಘ್ಯಾ ಹಿ ಸರ್ವೇಷಾಂ ಆಜ್ಞಾ ತಸ್ಯ ಗರೀಯಸೀ ॥೨೭॥

ಚರಾ ಚರಾಣಿ ಭೂತಾನಿ ಬಿಭರ್ತ್ಯೇವ ತದಾಜ್ಞಯಾ ।
ಆಜ್ಞಯಾ ತಸ್ಯ ದೇವಸ್ಯ ದೇವದೇವಃ ಪುರಂದರಃ ॥೨೮॥

---

೨೪. ಆ ದೇವನ ಅಪ್ಪಣೆಯಿಂದಲೇ ವಾಯುವು ನಾಗ ಮೊದಲಾದ ಐದು ಭೇದಗಳಿಂದ ಸಕಲ ಶರೀರಗಳಲ್ಲಿಯೂ ಇರುತ್ತಾನೆ.

೨೫. ಅಗ್ನಿಯು ಶಂಕರನ ಅನುಜ್ಞೆಯಿಂದ ದೇವತೆಗಳಿಗೆ ಹವಿಸ್ಸನ್ನೂ, ಪಿತೃಗಳಿಗೆ ಕವ್ಯವನ್ನೂ ತೆಗೆದುಕೊಂಡು ಹೋಗಿ ತಲಪಿಸುತ್ತಾನೆ. ಹಾಗೆಯೇ ಪಾಕವನ್ನೂ ಮಾಡುತ್ತಾನೆ.

೨೬. ಆ ಲೋಕಾಧೀಶನ ಅನುಜ್ಞೆಯಿಂದಲೇ ಅಗ್ನಿಯು ಜಂತುಗಳ ಉದರದಲ್ಲಿದ್ದುಕೊಂಡು ಅವುಗಳು ತಿಂದ ಸಕಲ ಆಹಾರಗಳನ್ನೂ ಅರಗುವಂತೆ ಮಾಡುತ್ತಾನೆ.

೨೭. ನೀರು ಆ ಪರಶಿವನ ಅಪ್ಪಣೆಯಿಂದ ಸಕಲ ಭೂತಗಳನ್ನೂ ಬದುಕಿಸುತ್ತದೆ. ಹೀಗೆ ಸಕಲರಿಗೂ ಆ ಪರಮಾತ್ಮನ ಆಜ್ಞೆಯು ದಾಟಲ ಸಾಧ್ಯವಾದುದು.

೨೮. ಭೂಮಿಯು ಆ ದೇವನ ಅಪ್ಪಣೆಯಿಂದಲೇ ಚರಾಚರಗಳಾದ ಸಕಲ ಭೂತಗಳನ್ನೂ ಧರಿಸುತ್ತದೆ. ದೇವತೆಗಳಿಗೆಲ್ಲರಿಗೂ ಪ್ರಭುವಾದ ಪುರಂದರನೂ ಆ ಪರಶಿವನ ಅಪ್ಪಣೆಯಿಂದಲೇ ತನ್ನ ಕೆಲಸವಾದ ಸಕಲ ಭೂತಗಳನ್ನೂ ಮತ್ತು ಲೋಕಗಳನ್ನೂ ಪಾಲಿಸುತ್ತಾನೆ.

ಜೀವತಾಂ ವ್ಯಾಧಿಭಿಃ ಪೀಡಾಂ ಮೃತಾನಾಂ ಯಾತನಾಶತೈಃ ।
ವಿಶ್ವಂ ಭರಃ ಸದಾ ಕಾಲಂ ಲೋಕೈಃ ಸರ್ವೈ ರಲಂಘ್ಯಯಾ ॥೨೯॥
ದೇವಾನ್ಪಾತ್ಯಸುರಾ ನ್ಹಂತಿ ತ್ರೈಲೋಕ್ಯ ಮಖಿಲಂ ಸ್ಥಿತಃ ।
ಅಧಾರ್ಮಿಕಾಣಾಂ ವೈ ನಾಶಂ ಕರೋತಿ ಶಿವಶಾಸನಾತ್ ॥೩೦॥
ವರುಣಸ್ಸಲಿಲೈ ರ್ಲೋಕಾನ್ ಸಂಭಾವಯತಿ ಶಾಸನಾತ್ ।
ಮಜ್ಜಯ ತ್ಯಾಜ್ಞಯಾ ತಸ್ಯ ಪಾಶೈರ್ಬಧ್ನಾತಿ ಚಾಸುರಾನ್ ॥೩೧॥
ಪುಣ್ಯಾನುರೂಪಂ ಸರ್ವೇಷಾಂ ಪ್ರಾಣಿನಾಂ ಸಂಪ್ರಯಚ್ಛತಿ ।
ವಿತ್ತಂ ವಿತ್ತೇಶ್ವರ ಸ್ತಸ್ಯ ಶಾಸನಾ ತ್ಪರಮೇಷ್ಠಿನಃ ॥೩೨॥

---

೨೯–೩೦. ಅವನ ಅಪ್ಪಣೆಯಿಂದಲೇ ಯಮನು ಜೀವಂತವಾದ ಸಕಲಜಂತುಗಳಿಗೆ ರೋಗವೇ ಮೊದಲಾದುವುಗಳಿಂದಲೂ, ಮೃತರಾದ ವರಿಗೆ ಅನೇಕ ವಿಧವಾದಯಾತನೆಗಳನ್ನು ಕೊಡುವದರ ಮೂಲಕವೂ, ಪೀಡೆಯುನ್ನುಂಟು ಮಾಡುತ್ತಾನೆ. ಸಕಲರಿಂದಲೂ ಮೀರಲಾಗದ ಆ ಪರಶಿವನ ಆಜ್ಞೆಯ ಪ್ರಕಾರ ವಿಷ್ಣುವು ಯಾವಾಗಲೂ ದೇವತೆಗಳನ್ನು ರಕ್ಷಿಸುತ್ತಾನೆ. ಅಸುರರನ್ನು ನಾಶಮಾಡುತ್ತಾನೆ. ಈ ಮೂರು ಲೋಕವೂ ಕೂಡ ಅವನ ಅಪ್ಪಣೆಯಿಂದಲೇ ಇರುವುದು. ಅವನ ಅಪ್ಪಣೆಯ ಪ್ರಕಾರವೇ ವಿಷ್ಣುವು ಧರ್ಮ ಮಾರ್ಗದಲ್ಲಿ ನಡೆಯದವರನ್ನು ನಾಶಪಡಿಸುತ್ತಾನೆ.

೩೧. ಸಕಲ ಲೋಕಗಳನ್ನೂ ವರುಣನು ನೀರಿನಿಂದ ಎರೆದು ಸಂತೋಷ ಪಡಿಸುತ್ತಾನೆ. ಹಾಗೆಯೇ ಶಿವನ ಅಪ್ಪಣೆಯಂತೆ ಅಸುರರನ್ನು ಪಾಶಗಳಿಂದ ಬಂಧಿಸುತ್ತಾನೆ.

೩೨. ಕುಬೇರನು ಸಕಲ ಪ್ರಾಣಿಗಳಿಗೂ ಅವರವರ ಪುಣ್ಯಕ್ಕನು ಸಾರವಾಗಿ ಐಶ್ವರ್ಯವನ್ನು ಪರಬ್ರಹ್ಮನ ಅನುಜ್ಞೆಯ ಪ್ರಕಾರ ಕೊಡುತ್ತಾನೆ.

ಉದಯಾಸ್ತಮಯೇ ಕುರ್ವನ್ಕುರುತೇ ಕಾಲಮಾಜ್ಞಯಾ ।
ಆದಿತ್ಯಸ್ತಸ್ಯ ನಿತ್ಯಸ್ಯ ಸತ್ಯಸ್ಯ ಪರಮಾತ್ಮನಃ ॥೩೩॥

ಪುಷ್ಪಾಣ್ಯೌಷಧ ಜಾತಾನಿ ಪ್ರಹ್ಲಾದಯತಿ ಚ ಪ್ರಜಾಃ ।
ಅಮೃತಾಂಶುಃ ಕಲಾಧಾರಃ ಕಾಲ ಕಾಲಸ್ಯ ಶಾಸನಾತ್ ॥೩೪॥

ಆದಿತ್ಯಾ ವಸವೋ ರುದ್ರಾ ಅಶ್ವಿನೌ ಮರುತಸ್ತಥಾ ।
ಅನ್ಯಾಶ್ಚ ದೇವತಾಃ ಸರ್ವಾಃ ತ ಚ್ಛಾಸನ ವಿನಿರ್ಮಿತಾಃ ॥೩೫॥

ಗಂಧರ್ವಾ ದೇವ ಸಂಘಾಶ್ಚ ಸಿದ್ಧಾಃ ಸಾಧ್ಯಾಶ್ಚ ಚಾರಣಾಃ ।
ಯಕ್ಷ ರಕ್ಷಃ ಪಿಶಾಚಾಶ್ಚ ಸ್ಥಿತಾಃ ಶಾಸ್ತ್ರೇಷು ವೇಧಸಃ ॥೩೬॥

---

೩೩. ಶಾಶ್ವತನಾದ ಸತ್ಯಸ್ವರೂಪನಾದ ಆ ಪರಮಾತ್ಮನ ಶಾಸನದಿಂದ ಸೂರ್ಯನು ಹುಟ್ಟುವುದು ಮುಳುಗುವುದರ ಮೂಲಕ ಕಾಲವನ್ನು ರಚಿಸುತ್ತಿರುವನು.

೩೪. ಮೃತ್ಯುಂಜಯನಾದ ಪರಮೇಶ್ವರನ ಆಜ್ಞೆಯಿಂದ ಅಮೃತಮಯವಾದ ಕಿರಣಗಳುಳ್ಳ, ಷೋಡಶಕಲೆಗಳನ್ನೂ ಧರಿಸಿರುವ ಚಂದ್ರನು ಹುವ್ವುಗಳಿಗೂ, ಔಷಧಿಗಳ ಸಮೂಹಗಳಿಗೂ, ಮತ್ತು ಪ್ರಜೆಗಳಿಗೂ ಸಂತೋಷವನ್ನುಂಟು ಮಾಡುತ್ತಾನೆ.

೩೫. ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶ ರುದ್ರರೂ, ಅಶ್ವಿನೀ ದೇವತೆಗಳೂ, ಸಪ್ತ ಮರುತ್ತುಗಳೂ, ಮತ್ತು ಉಳಿದ ಸಕಲ ದೇವತೆಗಳೂ, ಆ ಪರಮಾತ್ಮನ ಅನುಜ್ಞೆಯಿಂದಲೇ ನಿರ್ಮಿಸಲ್ಪಟ್ಟಿರುವರು.

೩೬. ಪರಬ್ರಹ್ಮನ ಶಾಸನದಲ್ಲಿಯೇ ಗಂಧರ್ವರೂ, ಸಿದ್ಧರೂ, ಸಾಧ್ಯರೂ, ಚಾರಣರೇ ಮೊದಲಾದ ಸಕಲ ದೇವತೆಗಳ ಸಮೂಹವೂ, ಯಕ್ಷರು, ರಾಕ್ಷಸರೂ, ಪಿಶಾಚಿಗಳೇ ಮೊದಲಾದವೂ ಸಹ ಇರುತ್ತವೆ.

ಗ್ರಹ ನಕ್ಷತ್ರ ತಾರಾಶ್ಚ ಯಜ್ಞಾ ವೇದಾಸ್ತಪಾಂಸಿ ಚ ।
ಋಷೀಣಾಂ ಚ ಗಣಾಃ ಸರ್ವೇ ಶಾಸನಂ ತಸ್ಯ ಧಿಷ್ಠಿತಾಃ ॥೩೭॥

ಕವ್ಯಾಶಿನಾಂ ಗಣಾಃ ಸಪ್ತ ಸಮುದ್ರಾ ಗಿರಿ ಸಿಂಧವಃ ।
ಶಾಸನೇ ತಸ್ಯ ವರ್ತಂತೇ ಕಾನನಾನಿ ಸರಾಂಸಿ ಚ ॥೩೮॥

ಕಲಾಃ ಕಾಷ್ಠಾ ನಿಮೇಷಾಶ್ಚ ಮುಹೂರ್ತಾ ದಿವಸಾಃ ಕ್ಷಪಾಃ ।
ಋತ್ವಬ್ದ ಪಕ್ಷ ಮಾಸಾಶ್ಚ ನಿಯೋಗಾತ್ತಸ್ಯ ಧಿಷ್ಠಿತಾಃ ॥೩೯॥

ಯುಗ ಮನ್ವಂತರಾಣ್ಯಸ್ಯ ಶಂಭೋಸ್ತಿಷ್ಠಂತಿ ಶಾಸನಾತ್ ।
ಪರಾಶ್ಚೈವ ಪರಾರ್ಧಾಶ್ಚ ಕಾಲಭೇದಾ ಸ್ತಥಾ ಪರೇ ॥೪೦॥

ದೇವಾನಾಂ ಜಾತಯಶ್ಚಾಷ್ಟೌ ತಿರಶ್ಚಾಂ ಪಂಚ ಜಾತಯಃ ।
ಮನುಷ್ಯಾಶ್ಚ ಪ್ರವರ್ತಂತೇ ದೇವದೇವಸ್ಯ ಧೀಮತಃ ॥೪೧॥

---

೩೭. ನವಗ್ರಹಗಳೂ, ಅಶ್ವಿನ್ಯಾದಿ ನಕ್ಷತ್ರಗಳೂ, ಯಜ್ಞಗಳೂ, ವೇದಗಳೂ, ತಪಸ್ಸುಗಳೂ, ಸಕಲರಾದ ಋಷಿಗಳ ಸಮೂಹವೂ, ಆ ಪರಮಾತ್ಮನ ಆಜ್ಞಾನುಸಾರವಾಗಿಯೇ ಇರುತ್ತವೆ.

೩೮. ಪಿತೃದೇವತೆಗಳ ಸಮೂಹಗಳೂ, ಸಪ್ತ ಸಮುದ್ರಗಳೂ, ಬೆಟ್ಟಗಳೂ, ನದಿಗಳೂ, ಅರಣ್ಯಗಳೂ, ಸರೋವರಗಳೂ, ಇವೆಲ್ಲವೂ, ಆ ಪರಬ್ರಹ್ಮನ ಶಾಸನದಲ್ಲಿರುತ್ತವೆ.

೩೯. ಕಲೆಗಳೂ, ಕಾಷ್ಠಗಳೂ, (ಪ್ರಾಣಿಗಳು ಒಂದುಸಲ ರೆಪ್ಪೆ ಹೊಡೆಯುವಷ್ಟು ಹೊತ್ತಿಗೆ ಒಂದು ಕಾಷ್ಠ ಎಂದು ಹೆಸರು), ನಿಮಿಷ, ಗಳೂ, ಮುಹೂರ್ತಗಳೂ ಹಗಲುರಾತ್ರಿಗಳೂ, ಋತು, ವರ್ಷ, ಪಕ್ಷ ಮತ್ತು ತಿಂಗಳುಗಳೂ, ಆ ಶಿವನ ಆಜ್ಞೆಯಂತೆ ನಡೆಯುತ್ತವೆ.

೪೦. ಈ ಶಂಭುವಿನ ಅಪ್ಪಣೆಯಿಂದಲೇ ಯುಗಗಳೂ, ಮನ್ವಂತರ ಗಳ ಬದಲಾವಣೆಗಳೂ, ಆಗುತ್ತವೆ. ಪರ, ಪರಾರ್ಧಗಳೆಂಬ ಕಾಲ ಭೇದಗಳೂ ಆಗುತ್ತವೆ.

೪೧. ವಿದ್ಯಾಧರರೇ ಮೊದಲಾದ ದೇವತೆಗಳ ಎಂಟು ಜಾತಿಗಳೂ, ಪಶ್ವಾದಿ ಪಂಚ ಜಾತಿಗಳೂ, ಮನುಷ್ಯರೂ, ದೇವದೇವನಾದ ಪ್ರತಿಭಾ ಶಾಲಿಯಾದ ಆ ಪರಮಾತ್ಮನ ಅಪ್ಪಣೆಯಿಂದಲೇ ಆಗುತ್ತಾರೆ.

ಜಾತಾನಿ ಭೂತ ವೃಂದಾನಿ ಚತುರ್ದಶಸು ಯೋನಿಷು ।
ಸರ್ವ ಲೋಕ ನಿಷಣ್ಣಾನಿ ತಿಷ್ಠಂತ್ಯ ಸ್ಯೈವ ಶಾಸನಾತ್ ॥೪೨॥

ಚತುರ್ದಶಸು ಲೋಕೇಷು ಸ್ಥಿತಾ ಜಾತಾಃ ಪ್ರಜಾಃ ಪ್ರಭೋಃ ।
ಸರ್ವೇಶ್ವರಸ್ಯ ತಸ್ಯೈವ ನಿಯೋಗ ವಶವರ್ತಿನಃ ॥೪೩॥

ಪಾತಾಲಾದಿ ಸಮಸ್ತಾನಿ ಭುವನಾ ನ್ಯಸ್ಯ ಶಾಸನಾತ್ ।
ಬ್ರಹ್ಮಾಂಡಾನಿ ಚ ಶೇಷಾಣಿ ತಥಾ ಸಾವರಣಾನಿ ಚ ॥೪೪॥

ವರ್ತಮಾನಾನಿ ಸರ್ವಾಣಿ ಬ್ರಹ್ಮಾಂಡಾನಿ ತದಾಜ್ಞಯಾ ।
ವರ್ತಂತೇ ಸರ್ವ ಭೂತಾದ್ಯೈಃ ಸಮೇತಾನಿ ಸಮಂತತಃ ॥೪೫॥

ಅತೀತಾ ನ್ಯಪ್ಯ ಸಂಖ್ಯಾನಿ ಬ್ರಹ್ಮಾಂಡಾನಿ ತದಾಜ್ಞಯಾ ।
ಪ್ರವೃತ್ತಾನಿ ಪದಾರ್ಥೌ ಘೈಃ ಸಹಿತಾನಿ ಸಮಂತತಃ ॥೪೬॥

---

೪೨. ಹಿಂದೆ ಹೇಳಲ್ಪಟ್ಟ ಹದಿನಾಲ್ಕು ಯೋನಿಗಳಲ್ಲಿ ಭೂತಗಳ ಸಮೂಹಗಳು ಉತ್ಪನ್ನಗಳಾದವು. ಅವು ಪರಬ್ರಹ್ಮನ ಅಪ್ಪಣೆಯಿಂದಲೇ ಸರ್ವ ಲೋಕಗಳನ್ನೂ ಆವರಿಸಿ ಕೊಂಡಿರುತ್ತವೆ.

೪೩. ಹುಟ್ಟಿದ ಸಕಲ ಪ್ರಜೆಗಳೂ ಪ್ರಭುವಾದ ಆ ಸರ್ವೇಶ್ವರನ ಅಪ್ಪಣೆಯ ಪ್ರಕಾರ ನಡೆಯುವವರಾಗಿ ಹದಿನಾಲ್ಕು ಲೋಕಗಳಲ್ಲಿಯೂ ಇರುತ್ತಾರೆ.

೪೪–೪೫. ಪಾತಾಲಗಳೂ, ಸಕಲ ಪ್ರಪಂಚಗಳೂ, ನೀರೇ ಮೊದಲಾದ ಆವರಣಗಳಿಂದ ಕೂಡಿದ ಉಳಿದ ಬ್ರಹ್ಮಾಂಡಗಳೂ, ಉಳಿದ ಬ್ರಹ್ಮ, ವಿಷ್ಣು, ರುದ್ರರುಗಳಿಂದ ಕೂಡಿ, ಸದ್ಯದಲ್ಲಿರುವ, ಮುಂದೆ ಸೃಷ್ಟಿಸಲ್ಪಡುವ, ಸಕಲ ಬ್ರಹ್ಮಾಂಡಗಳೂ ಸಹ ಆ ಪರಬ್ರಹ್ಮನ ಅಪ್ಪಣೆಯಿಂದಲೇ ಇರುತ್ತವೆ.

೪೬. ಎಲ್ಲೆಲ್ಲೂ ಅನೇಕ ವಸ್ತುಗಳಿಂದ ಕೂಡಿ, ಉತ್ಪನ್ನವಾದ, ಎಣಿಸಲಾಗದ, ಸಕಲ ಬ್ರಹ್ಮಾಂಡಗಳೂ ಆ ಪರಶಿವನ ಆಜ್ಞೆಯಿಂದಲೇ ಕ್ಲ್ಪಪ್ತಕಾಲದಲ್ಲಿ ನಾಶವಾಗುತ್ತವೆ. ಮತ್ತು ತಕ್ಕ ಕಾಲದಲ್ಲಿ ಪುನಃ ಉಂಟಾಗಿ ಮುಂದುವರಿಯುತ್ತಿರುತ್ತವೆ.

ಬ್ರಹ್ಮಾಂಡಾನಿ ಭವಿಷ್ಯಂತಿ ಸಹ ವಸ್ತುಭಿ ರಾತ್ಮಕೈಃ ।
ಕರಿಷ್ಯಂತಿ ಶಿವಸ್ಯಾಜ್ಞಾಂ ಸರ್ವೈ ರಾವರಣೈ ಸ್ಸಹ ॥೪೭॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದಶಮೋಽಧ್ಯಾಯಃ

---

೪೭. ಮುಂದೆ ಉತ್ಪನ್ನವಾಗುವ ಸಕಲ ಬ್ರಹ್ಮಾಂಡಗಳೂ, ತಮ್ಮದಾದ ಪದಾರ್ಥಗಳಿಂದಲೂ, ಸಕಲಾವರಣಗಳಿಂದಲೂ, ಕೂಡಿ ಶಿವನ ಅಪ್ಪಣೆಯನ್ನು ಮಾಡುತ್ತಿರುತ್ತವೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹತ್ತನೆಯ
ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಏಕಾದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ವಿಭೂತೀಃ ಶಿವಯೋ ರ್ಮಹ್ಯ ಮಾ ಚಕ್ಷ್ವ ತ್ವಂ ಗಣಾಧಿಪ ।**
**ಪರಾಪರ ವಿದಾಂ ಶ್ರೇಷ್ಠ ಪರಮೇಶ್ವರ ಭಾವಿತ ॥ ೧ ॥**

॥ ನಂದಿಕೇಶ್ವರ ಉವಾಚ ॥

**ಅಹಂ ತೇ ಕಥಯಿಷ್ಯಾಮಿ ವಿಭೂತೀ ಶ್ಶಿವಯೋ ರಹಂ ।**
**ಸನತ್ಕುಮಾರ ಯೋಗೀಂದ್ರ ಬ್ರಹ್ಮಣ ಸ್ತನಯೋತ್ತಮ ॥ ೨ ॥**
**ಪರಮಾತ್ಮಾ ಶಿವಃ ಪ್ರೋಕ್ತಃ ಶಿವಾ ಸಾ ಚ ಪ್ರಕೀರ್ತಿತಾ ।**
**ಶಿವ ಮೇವೇಶ್ವರಂ ಪ್ರಾಹು ರ್ಮಾಯಾಂ ಗೌರೀಂ ವಿದುರ್ಬುಧಾಃ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹನ್ನೊಂದನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :— ಪ್ರಮಥಗಣಗಳಿಗೆಲ್ಲಕ್ಕೂ ಒಡೆಯನಾದ, ಉತ್ತಮಾನುತ್ತಮಗಳನ್ನು ತಿಳಿಯುವುದರಲ್ಲಿ ಶ್ರೇಷ್ಠನಾದವನೇ, ಪರಮೇಶ್ವರನ ಗೌರವಕ್ಕೆ ಪಾತ್ರನಾದ ನಂದಿಕೇಶ್ವರನೇ, ನೀನು ನನಗಾಗಿ ಆ ಉಮಾ ಮಹೇಶ್ವರರ ಮಹಿಮೆಗಳನ್ನು ಹೇಳುವವನಾಗು.

೨. ನಂದಿಕೇಶ್ವರನು ಹೇಳಿದನು :—ಬ್ರಹ್ಮನ ಮಕ್ಕಳಲ್ಲಿ ಶ್ರೇಷ್ಠನೂ, ಯೋಗಾಭ್ಯಾಸಿಗಳಲ್ಲಿ ಉತ್ತಮನೂ, ಆದ ಸನತ್ಕುಮಾರನೇ, ನಾನು ಪಾರ್ವತೀ ಪರಮೇಶ್ವರರ ಮಹಿಮೆಯನ್ನು ನಿಮಗೆ ಸಂತೋಷದಿಂದ ಹೇಳುವೆನು.

೩. ಪರಮಾತ್ಮನು ಕಲ್ಯಾಣ ಶಿವಸ್ವರೂಪನೆಂದೂ, ಶಿವಪತ್ನಿಯಾದ ಆ ಶ್ರದ್ಧೆಯು ಕಲ್ಯಾಣ ಶಿವಾಸ್ವರೂಪಳೆಂದೂ, ಹೇಳಲ್ಪಟ್ಟಿದ್ದಾರೆ (ಪ್ರಸಿದ್ಧರಾಗಿದ್ದಾರೆ). ಶಿವನನ್ನೇ ಈಶ್ವರನೆಂದೂ, ಮಾಯೆಯನ್ನು ಗೌರಿಯೆಂದೂ ಜ್ಞಾನಿಗಳು ತಿಳಿಯುತ್ತಾರೆ.

ಪುರುಷಂ ಶಂಕರಂ ಪ್ರಾಹು ಗೌರ್ರೀಂ ಚ ಪ್ರಕೃತಿಂ ದ್ವಿಜಾಃ ।
ಅರ್ಥಃ ಶಂಭುಃ ಶಿವಾ ವಾಣೀ ದಿವಸೋಽಜಃ ಶಿವಾ ನಿಶಾ ॥ ೪ ॥
ಸಪ್ತ ತಂತು ರ್ಮಹಾದೇವೋ ರುದ್ರಾಣೀ ದಕ್ಷಿಣಾ ಸ್ಮೃತಾ ।
ಆಕಾಶಂ ಶಂಕರೋ ದೇವಃ ಪೃಥಿವೀ ಶಂಕರಪ್ರಿಯಾ ॥ ೫ ॥
ಸಮುದ್ರೋ ಭಗವಾನ್ರುದ್ರಃ ವೇಲಾ ಶೈಲೇಂದ್ರ ಕನ್ಯಕಾ ।
ವೃಕ್ಷಃ ಶೂಲಾಯುಧೋ ದೇವಃ ಶೂಲಪಾಣಿ ಪ್ರಿಯಾ ಲತಾ ॥
ಬ್ರಹ್ಮಾ ಹರೋಽಪಿ ಸಾವಿತ್ರೀ ಶಂಕರಾರ್ಧ ಶರೀರಿಣೀ ।
ವಿಷ್ಣು ರ್ಮಹೇಶ್ವರೋ ಲಕ್ಷ್ಮೀ ರ್ಭವಾನೀ ಪರಮೇಶ್ವರೀ ॥ ೭ ॥
ವಜ್ರಪಾಣಿ ರ್ಮಹಾದೇವಃ ಶಚೀ ಶೈಲೇಂದ್ರ ಕನ್ಯಕಾ ।
ಜಾತವೇದಾಃ ಸ್ವಯಂ ರುದ್ರಃ ಸ್ವಾಹಾ ಶರ್ವಾರ್ಧ ಕಾಯಿನೀ ॥ ೮ ॥

---

೪. ಶಂಕರನನ್ನು ಪುರುಷನನ್ನಾಗಿಯೂ, ಗೌರಿಯನ್ನು ಪ್ರಕೃತಿಯೆಂದೂ, ಬ್ರಾಹ್ಮಣರು ಹೇಳುತ್ತಾರೆ. ಶಂಭುವು ಅರ್ಥಸ್ವರೂಪನೂ ಪಾರ್ವತಿಯು ವಾಕ್ಸ್ವರೂಪಳೂ, ಶಿವನು ಹಗಲೆಂದೂ, ಪಾರ್ವತಿಯು ರಾತ್ರಿಯೆಂದೂ, ತಿಳಿದವರು ಹೇಳುತ್ತಾರೆ.

೫–೯. ಮಹಾದೇವನು ಯಾಗವು, ದಕ್ಷಿಣೆಯು ಪಾರ್ವತಿಯು. ಸಮರ್ಥನಾದ ಶಂಕರನು ಆಕಾಶವು, ಭೂಮಿಯು ಗೌರಿಯು. ಸಮುದ್ರವು ಪೂಜ್ಯನಾದ ಶಿವನು, ಹಿಮವತ್ಪುತ್ರಿಯು ಸಮುದ್ರದ ಎಲ್ಲೆಯು. ಶೂಲಾಯುಧವನ್ನು ಧರಿಸಿರುವ ಶಂಕರನು ವೃಕ್ಷಸ್ವರೂಪನು, ಪಾರ್ವತಿಯು ಬಳ್ಳಿಯು. ಹರನು ಬ್ರಹ್ಮನು, ಸಾವಿತ್ರಿಯು ಶಂಕರನ ಅರ್ಧಾಂಗಿಯಾದ ಪಾರ್ವತಿಯು. ಮಹೇಶನು ವಿಷ್ಣುವು, ಪರಮೇಶ್ವರಿಯಾದ ಶಾಂಕರಿಯು ಲಕ್ಷ್ಮಿಯು. ವಜ್ರಾಯುಧ ಧರನಾದ ಇಂದ್ರನು ಶಂಕರನು, ಪಾರ್ವತಿಯು ಶಚೀದೇವಿಯು. ರುದ್ರನು ಅಗ್ನಿಯು, ಸ್ವಾಹಾದೇವಿಯು ಪಾರ್ವತಿಯು. ಈಶ್ವರನು ಯಮನು, ಅವನ ಪತ್ನೀ ವಿಜಯೆಯು ಪರ್ವತ ಪುತ್ರಿಯು. ವರುಣನು ಅಣಿಮಾದಿ ಐಶ್ವರ್ಯ

ಯಮ ಸ್ತ್ರಿಯಂಬಕೋ ದೇವ ಸ್ತತ್ ಪ್ರಿಯಾ ಗಿರಿಕನ್ಯಕಾ ।
ವರುಣೋ ಭಗವಾ ನ್ರುದ್ರೋ ಗೌರೀ ಸರ್ವಾರ್ಥ ದಾಯಿನೀ ॥
ಬಾಲೇಂದು ಶೇಖರೋ ವಾಯುಃ ಶಿವಾ ಶಿವ ಮನೋರಮಾ ।
ಚಂದ್ರಾರ್ಧ ಮೌಲಿ ರ್ಯಕ್ಷೇಂದ್ರಃ ಸ್ವಯ ಮೃದ್ಧಿಃ ಶಿವಾ ಸ್ಮೃತಾ ॥
ಚಂದ್ರಾರ್ಧ ಶೇಖರಶ್ಚಂದ್ರೋ ರೋಹಿಣೀ ರುದ್ರ ವಲ್ಲಭಾ ।
ಸಪ್ತಸಪ್ತಿಃ ಶಿವಃ ಕಾಂತಾ ಉಮಾ ದೇವೀ ಸುವರ್ಚಲಾ ॥೧೧॥
ಷಣ್ಮುಖ ಸ್ತ್ರಿಪುರ ಧ್ವಂಸೀ ದೇವಸೇನಾ ಹರಪ್ರಿಯಾ ।
ಉಮಾ ಪ್ರಸೂತಿ ರ್ವಿಜ್ಞೇಯಾ ದಕ್ಷೋ ದೇವೋ ಮಹೇಶ್ವರಃ ॥

---

ಯುಕ್ತನಾದ ಶಿವನು, ಗೌರಿಯು ಸಕಲಾರ್ಥಗಳನ್ನು ಕೊಡುವ ವರುಣ ಪತ್ನಿಯು.

೧೦. ಬಾಲಚಂದ್ರನನ್ನು ತಲೆಯಲ್ಲಿ ಧರಿಸಿರುವ ಈಶ್ವರನು ವಾಯುವು. ಶಿವಪ್ರಿಯೆಯಾದ ಪಾರ್ವತಿಯು ವಾಯುವಿನ ಪತ್ನಿಯು. ಚಂದ್ರಶೇಖರನು ಕುಬೇರನು, ಅವನ ಪತ್ನಿಯಾದ ಋದ್ಧಿಯು ಶಾಂಕರಿಯು.

೧೧. ಚಂದ್ರನು ಈಶ್ವರನು, ಅವನ ಪತ್ನಿಯಾದ ರೋಹಿಣಿಯು ರುದ್ರಪ್ರಿಯೆಯಾದ ಗೌರಿಯು. ಸೂರ್ಯನು ಈಶ್ವರನು. ಅವನ ಪತ್ನಿಯು ಕಾಂತಿಯುಕ್ತಳಾದ ಉಮಾದೇವಿಯು.

೧೨. ತ್ರಿಪುರ ನಾಶಕನಾದ ಶಿವನು ಷಣ್ಮುಖನು, ಪಾರ್ವತಿಯು ದೇವಸೇನೆಯು. ಗೌರಿಯು, ದಕ್ಷಪತ್ನಿಯಾದ ಪ್ರಸೂತಿಯು, ದಕ್ಷಬ್ರಹ್ಮನೂ ದೇವ ದೇವನಾದ ಮಹೇಶ್ವರನೇ.

ಪುರುಷಾಖ್ಯೋ ಮನುಃ ಶಂಭುಃ ಶತರೂಪಾ ಶಿವಪ್ರಿಯಾ ।
ವಿದು ರ್ಭವಾನೀ ಮಾಕೂತಿಂ ರುಚಿಂ ಚ ಪರಮೇಶ್ವರಂ ॥೧೩॥
ಭೃಗು ರ್ಭಗಾಕ್ಷಿಹಾ ದೇವಃ ಖ್ಯಾತಿ ಸ್ತ್ರಿನಯನ ಪ್ರಿಯಾ ।
ಮರೀಚಿ ರ್ಭಗವಾನ್ರುದ್ರಃ ಸಂಭೂತಿರ್ವಲ್ಲಭಾ ವಿಭೋಃ ॥೧೪॥
ವಿದು ರ್ಭವಾನೀಂ ರುಚಿರಾಂ ಕವಿಂ ಚ ಪರಮೇಶ್ವರಂ ।
ಗಂಗಾಧರೋಽಂಗಿರಾ ಜ್ಞೇಯಃ ಸ್ಮೃತಿಃ ಸಾಕ್ಷಾದುಮಾ ಸ್ಮೃತಾ॥
ಪುಲಸ್ತ್ಯಃ ಶಶ ಭೃನ್ಮೌಲಿಃ ಪ್ರೀತಿಃ ಕಾಂತಾ ಪಿನಾಕಿನಃ ।
ಪುಲಹಃ ತ್ರಿಪುರ ಧ್ವಂಸೀ ದಯಾ ಕಾಲ ರಿಪುಪ್ರಿಯಾ ॥೧೬॥
ಕ್ರತುರ್ದಕ್ಷ ಕ್ರತುಧ್ವಂಸೀ ಸಂನತಿರ್ದಯಿತಾ ವಿಭೋಃ ।
ತ್ರಿನೇತ್ರೋಽತ್ರಿರುಮಾ ಸಾಕ್ಷಾದನಸೂಯಾ ಸ್ಮೃತಾ ಬುಧೈಃ ॥

---

೧೩. ಮನುವು ಪರಮ ಪುರುಷನಾದ ಶಂಭುವು. ಪಾರ್ವತಿಯು ಶತರೂಪಾ ಎಂಬ ಮನುಪತ್ನಿಯು. ಭವಾನಿಯನ್ನು ಆಕೂತಿಯೆಂದೂ, ಅವಳ ಪತಿಯಾದ ರುಚಿಯನ್ನು ಪರಮೇಶ್ವರನೆಂದೂ ತಿಳಿಯುತ್ತಾರೆ.

೧೪. ಶಂಕರನು ಭೃಗುವು, ಅವನ ಪತ್ನಿಯಾದ ಖ್ಯಾತಿಯು ಶಾಂಕರಿಯು. ಮರೀಚಿಯು ಭಗವಂತನಾದ ರುದ್ರನು, ರುದ್ರವಲ್ಲಭಳಾದ ಪಾರ್ವತಿಯು ಮರೀಚಿ ಪತ್ನಿಯಾದ ಸಂಭೂತಿಯು.

೧೫. ರುಚಿರೆಯನ್ನು ಗೌರಿಯೆಂದೂ, ಪರಮೇಶ್ವರನನ್ನು, ಶುಕ್ರನೆಂದೂ,ಜ್ಞಾನಿಗಳು ತಿಳಿಯುತ್ತಾರೆ. ಅಂಗಿರೋಋಷಿಯು ಗಂಗಾಧರನು, ಅಂಗಿರಸ್ಸಿನ ಪತ್ನಿಯಾದ ಸ್ಮೃತಿಯು ಉಮಾದೇವಿಯು,.

೧೬. ಚಂದ್ರ ಮೌಳಿಯು ಪುಲಸ್ತ್ಯ ಬ್ರಹ್ಮನು, ಅವನ ಪತ್ನಿಯಾದ ಪ್ರೀತಿಯು ಈಶ್ವರ ಪತ್ನಿಯಾದ ಪಾರ್ವತಿಯು. ತ್ರಿಪುರ ದಾಹಕನಾದ ಪರಮೇಶ್ವರನು ಪುಲಹನು, ಯಮ ವೈರಿಯಾದ ಈಶ್ವರನ ಪತ್ನಿಯು ದಯೆಯು.

೧೭. ದಕ್ಷಯಜ್ಞನಾಶಕನಾದ ಈಶ್ವರನು ಯಜ್ಞರೂಪನು, ಆ ಪರಮಾತ್ಮನ ಪತ್ನಿಯಾದ ದಾಕ್ಷಾಯಣಿಯು ಸಂನತಿರೂಪಳು. ಮುಕ್ಕಣ್ಣೀಶನು ಅತ್ರಿ ಋಷಿಯು,ಉಮಾದೇವಿಯೇ ಅತ್ರಿಪತ್ನಿಯಾದ ಅನಸೂಯೆಯು.

ಊರ್ಜಾ ಮಾಹು ರುಮಾಂ ವೃದ್ಧಾಂ ವಸಿಷ್ಠಂ ಚ ಮಹೇಶ್ವರಂ ।
ಶಂಕರಃ ಪುರುಷಾಃ ಸರ್ವೇ ಸ್ತ್ರಿಯಃ ಸರ್ವಾ ಮಹೇಶ್ವರೀ ॥೧೮॥

ಪುಲ್ಲಿಂಗ ಶಬ್ದ ವಾಚ್ಯಾ ಯೇ ತೇ ಚ ರುದ್ರಾಃ ಪ್ರಕೀರ್ತಿತಾಃ ।
ಸ್ತ್ರೀಲಿಂಗಶಬ್ದವಾಚ್ಯಾ ಯಾಃ ಸರ್ವಾ ಗೌರ್ಯಾ ವಿಭೂತಯಃ ॥

ಸರ್ವೇ ಸ್ತ್ರೀಪುರುಷಾಃ ಪ್ರೋಕ್ತಾ ಸ್ತಯೋರೇವ ವಿಭೂತಯಃ ।
ಪದಾರ್ಥ ಶಕ್ತಯೋ ಯಾಯಾ ಸಾ ಗೌರೀತಿ ವಿದು ರ್ಬುಧಾಃ ॥

ಸಾ ಸಾ ವಿಶ್ವೇಶ್ವರೀ ದೇವೀ ಸ ಚ ಸರ್ವೋ ಮಹೇಶ್ವರಃ ।
ಶಕ್ತಿಮಂತಃ ಪದಾರ್ಥಾ ಯೇ ಸ ಚ ಸರ್ವೋ ಮಹೇಶ್ವರಃ ॥೨೧॥

---

೧೮. ವೃದ್ಧಿಯಾದ ಊರ್ಜಾದೇವಿಯನ್ನು ಶಂಕರಾರ್ಧಾಂಗಿಯಾದ ಉಮಾದೇವಿಯೆಂದೂ, ವಸಿಷ್ಠ ಋಷಿಯನ್ನು ಪರಮೇಶ್ವರನೆಂದೂ, ಹೇಳುತ್ತಾರೆ. ಒಟ್ಟಾಗಿ ಹೇಳಿದರೆ, ಸಕಲ ಪುರುಷರೂ ಶಂಕರನ ಅಂಶ ಸ್ವರೂಪರು, ಸಕಲ ಸ್ತ್ರೀಯರೂ ಉಮಾದೇವಿಯ ಅಂಶಸ್ವರೂಪರು.

೧೯. ಪುಲ್ಲಿಂಗ ಶಬ್ದದಿಂದ ಹೇಳಲ್ಪಡುವ ಯಾರ್ಯಾರುಂಟೋ ಅವರೆಲ್ಲರೂ ರುದ್ರಸ್ವರೂಪರು. ಸ್ತ್ರೀಲಿಂಗ ಶಬ್ದದಿಂದ ಹೇಳಲ್ಪಡುವ ಸಕಲರೂ ಗೌರಿಯ ಅಂಶವುಳ್ಳವರೇ ಆಗಿರುತ್ತಾರೆ.

೨೦. ಸಕಲ ಸ್ತ್ರೀ ಪುರುಷರುಗಳು ಆ ಪಾರ್ವತಿ ಪರಮೇಶ್ವರರುಗಳ ಮಹಿಮಾಂಶಗಳೇ ಆಗಿರುತ್ತಾರೆ. ವಸ್ತುಗಳ ಶಕ್ತಿಗಳೆಲ್ಲವೂ ಗೌರೀ ದೇವಿ ಯೆಂದೇ ಜ್ಞಾನಿಗಳು ತಿಳಿಯುತ್ತಾರೆ.

೨೧. ಸ್ತ್ರೀಲಿಂಗ ವಾಚ್ಯವಾದ ಸಕಲವೂ ಮಹೇಶ್ವರೀ ರೂಪವೇ ಆಗಿರುತ್ತದೆ. ಶಕ್ತಿಯುಳ್ಳ ಸಕಲ ಪದಾರ್ಥಗಳೂ, ಮಹೇಶ್ವರನೇ ಆಗಿರುವುವು.

**ಅಷ್ಟೌ ಪ್ರಕೃತಯೋ ದೇವ್ಯಾ ಮೂರ್ತಯಃ ಪರಿಕೀರ್ತಿತಾಃ**
**ತಥಾ ವಿಕೃತಯ ಸ್ತಸ್ಯಾ ದೇಹಬದ್ಧ ವಿಭೂತಯಃ ॥೨೨॥**

**ವಿಸ್ಫುಲಿಂಗಾ ಯಥಾ ತಾವ ದಗ್ನೌ ಚ ಬಹುಧಾ ಸ್ಮೃತಾಃ ।**
**ಜೀವಾಃ ಸರ್ವೇ ಯಥಾ ಶರ್ವೇ ದ್ವಂದ್ವ ಸತ್ವಮುಪಾಗತಃ ॥೨೩॥**

**ಗೌರೀ ರೂಪಾಣಿ ಸರ್ವಾಣಿ ಶರೀರಾಣಿ ಶರೀರಿಣಾಂ ।**
**ಶರೀರಿಣ ಸ್ತಥಾ ಸರ್ವೇ ಶಂಕರಾಂಶಾ ವ್ಯವಸ್ಥಿತಾಃ ॥೨೪॥**

**ಶ್ರಾವ್ಯಂ ಸರ್ವ ಮುಮಾರೂಪಂ ಶ್ರೋತಾ ದೇವೋ ಮಹೇಶ್ವರಃ ।**
**ವಿಷಯಿತ್ವಂ ವಿಭುರ್ಧತ್ತೇ ವಿಷಯಾತ್ಮಕ ತಾ ಮುಮಾ ॥೨೫॥**

**ಸ್ಪ್ರಷ್ಟವ್ಯಂ ವಸ್ತು ಜಾತಂ ತು ಧತ್ತೇ ಶಂಕರ ವಲ್ಲಭಾ ।**
**ಸ್ಪ್ರಷ್ಟಾ ಸ ಏವ ವಿಶ್ವಾತ್ಮಾ ಬಾಲ ಚಂದ್ರಾರ್ಧ ಶೇಖರಃ ॥೨೬॥**

---

೨೨. ಎಂಟು ವಿಧವಾದ ಪ್ರಕೃತಿಯ ರೂಪಗಳು, ಪಾರ್ವತಿಯ ಎಂಟು ಮೂರ್ತಿಗಳೆಂದು ಜ್ಞಾನಿಗಳು ಹೇಳಿರುತ್ತಾರೆ. ವಿಕೃತಿಗಳು ಆ ದೇವಿಯ ಶರೀರದಲ್ಲಿರುವ ವಿಭೂತಿಗಳೇ ಆಗಿರುತ್ತವೆ.

೨೩. ಅಗ್ನಿಯು ಒಂದೇ ಆದರೂ ಕಿಡಿಗಳು ಅನೇಕವೆಂದು ಹೇಗೆ ತಿಳಿಯಲ್ಪಟ್ಟಿರುತ್ತವೆಯೋ ಹಾಗೆ ಪರಮಾತ್ಮನು ಒಬ್ಬನಾದರೂ ದ್ವಂದ್ವ ಫಲವಾಗಿ ಭಿನ್ನ ಸತ್ತೆಯನ್ನು ಹೊಂದಿ ಅನೇಕರಾದ ಜೀವರೂಪ ಗಳಲ್ಲಿರುತ್ತಾನೆ.

೨೪. ಜೀವರುಗಳ ಸಕಲ ಶರೀರಗಳೂ ಗೌರೀಸ್ವರೂಪಗಳಾಗಿವೆ. ಸಕಲ ಜೀವರುಗಳು ಶಂಕರನ ಅಂಶ ಸಂಭೂತರೆಂದೂ, ವ್ಯವಸ್ಥೆ ಯಿಂದ ತಿಳಿಯಲ್ಪಟ್ಟಿರುತ್ತಾರೆ.

೨೫. ಕೇಳಲರ್ಹವಾದ ಸಕಲವೂ ಉಮಾರೂಪವಾದುದು. ಮಹೇಶ್ವರನು ಕೇಳುವವನು. ವಿಷಯ ಸ್ವರೂಪವನ್ನು ಉಮೆಯೂ, ವಿಷಯಿಗಳ ಜ್ಞಾತೃ ಸ್ವರೂಪವನ್ನು ಪರಮೇಶ್ವರನೂ ಧರಿಸಿರುತ್ತಾರೆ.

೨೬. ಸೃಷ್ಟಿಕರ್ತೃವು ವಿಶ್ವರೂಪನಾದ ಚಂದ್ರ ಮೌಳಿಯಾದ ಆ

**ದೃಶ್ಯ ವಸ್ತು ಪ್ರಜಾರೂಪಂ ಬಿಭರ್ತಿ ಭುವನೇಶ್ವರೀ ।**
**ದ್ರಷ್ಟಾ ವಿಶ್ವೇಶ್ವರೋ ದೇವಃ ಶಶಿಖಂಡ ಶಿಖಾಮಣಿಃ ॥೨೭॥**
**ರಸ ಜಾತ ಮುಮಾ ರೂಪಂ ಘ್ರೇಯಜಾತಂ ಚ ಸರ್ವಶಃ ।**
**ದೇವೋ ರಸಯಿತಾ ಶಂಭುಃ ಘ್ರಾತಾ ಚ ಭುವನೇಶ್ವರಃ ॥೨೮॥**
**ಮಂತವ್ಯ ವಸ್ತುತಾಂ ಧತ್ತೇ ಮಹಾದೇವೀ ಮಹೇಶ್ವರೀ ।**
**ಮಂತಾ ಸ ಏವ ವಿಶ್ವಾತ್ಮಾ ಮಹಾದೇವೋ ಮಹೇಶ್ವರಃ ॥೨೯॥**
**ಬೋದ್ಧವ್ಯಂ ವಸ್ತು ರೂಪಂ ಚ ಬಿಭರ್ತಿ ಭವ ವಲ್ಲಭಾ ।**
**ದೇವಃ ಸ ಏವ ಭಗವಾನ್ ಬೋದ್ಧಾ ಬಾಲೇಂದು ಶೇಖರಃ ॥೩೦॥**

---

ಪರಮೇಶ್ವರನಾಗಿರುತ್ತಾನೆ. ಸೃಷ್ಟಿಸಲ್ಪಡಬೇಕಾದ ವಸ್ತು ಸಮೂಹ ಸ್ವರೂಪವನ್ನೂ ಪಾರ್ವತಿಯು ಧರಿಸುತ್ತಾಳೆ.

೨೭. ಪ್ರಜಾಸ್ವರೂಪವಾದ ದರ್ಶನೀಯ ವಸ್ತುವನ್ನು ಲೋಕಾಧೀಶ್ವರಿಯಾದ ಶಾಂಕರಿಯು ಧರಿಸುತ್ತಾಳೆ. ನೋಡುವವನು ಲೋಕಾಧೀಶನಾದ ಶಂಕರನು.

೨೮. ಪದಾರ್ಥಗಳ ರಸ ಸಮೂಹವೂ, ಮೂಸಿನೋಡಲರ್ಹವಾದ ಪದಾರ್ಥಗಳ ಸಮೂಹವೂ, ಎಲ್ಲಿಡೆಯಲ್ಲಿಯೂ ಉಮಾಸ್ವರೂಪವಾದವುಗಳು. ರಸಾಸ್ವಾದನೆ ಮಾಡುವವನೂ, ಮೂಸಿ ನೋಡುವವನೂ, ತೇಜೋವಂತನಾದ ಲೋಕೇಶನು.

೨೯. ವಿಚಾರಮಾಡಲರ್ಹವಾದ ವಸ್ತು ಸ್ವಭಾವವನ್ನು ಮಹಾದೇವಿಯಾದ ಈಶ್ವರಾರ್ಧಾಂಗಿಯು ಧರಿಸಿರುತ್ತಾಳೆ. ವಿಚಾರಮಾಡಿ ತಿಳಿಯುವವನು ವಿಶ್ವಸ್ವರೂಪನೂ, ಮಹಾದೇವನೂ ಆದ ಆ ಮಹೇಶ್ವರನು.

೩೦. ತಿಳಿದು ಕೊಳ್ಳಲ್ಪಡ ಬೇಕಾದ ವಸ್ತು ಸ್ವರೂಪವು ಶಿವಪ್ರಿಯೆಯಾದ ಆ ದೇವಿಯು, ತಿಳಿಯುವವನು ಪೂಜ್ಯನಾದ ಆ ಚಂದ್ರಮೌಳಿಯು,

ಪೀಠಾ ಕೃತಿ ರುಮಾ ದೇವೀ ಲಿಂಗರೂಪಶ್ಚ ಶಂಕರಃ ।
ಪ್ರತಿಷ್ಠಾಪ್ಯ ಪ್ರಯತ್ನೇನ ಪೂಜಯಂತಿ ಸುರಾ ಸುರಾಃ ॥೩೧॥
ಯೇಯೇ ಪದಾರ್ಥಾ ಲಿಂಗಾಂಕಾ ಸ್ತೇ ತೇ ಶರ್ವ ವಿಭೂತಯಃ ।
ಅರ್ಥಾ ಭಗಾಂಕಿತಾ ಯೇಯೇ ತೇತೇ ಗೌರ್ಯಾ ವಿಭೂತಯಃ ॥
ಸ್ವರ್ಗ ಪಾತಾಳ ಲೋಕಾಂತ ಬ್ರಹ್ಮಾಂಡಾ ವರಣಾಷ್ಟಕಂ ।
ಜ್ಞೇಯಂ ಸರ್ವ ಮುಮಾರೂಪಂ ಜ್ಞಾತಾ ದೇವೋ ಮಹೇಶ್ವರಃ ॥
ಬಿಭರ್ತಿ ಕ್ಷೇತ್ರತಾಂ ದೇವೀ ತ್ರಿಪುರಾಂತಕ ವಲ್ಲಭಾ ।
ಕ್ಷೇತ್ರಜ್ಞತ್ವ ಮಘೋ ಧತ್ತೇ ಭಗವಾನಂಧ ಕಾಂತಕಃ ॥೩೪॥
ಶಿವಲಿಂಗಂ ಸಮುತ್ಸೃಜ್ಯ ಯಜಂತೇ ಚಾನ್ಯದೇವತಾಃ ।
ಸ ನೃಪಃ ಸಹ ದೇಹೇನ ರೌರವಂ ನರಕಂ ವ್ರಜೇತ್ ॥೩೫॥

---

೩೧. ದೇವಿಯಾದ ಉಮೆಯು ಪೀಠಸ್ವರೂಪಳಾಗಿರುತ್ತಾಳೆ. ಶಂಕರನು ಲಿಂಗಸ್ವರೂಪನಾಗಿರುತ್ತಾನೆ. ಪ್ರಯತ್ನ ಪೂರ್ವಕವಾಗಿ ದೇವತೆಗಳೂ ಅಸುರರೂ ಆ ರೀತಿಯಾದ ಉಮಾಶಂಕರರನ್ನು ಸ್ಥಾಪಿಸಿ ಪೂಜಿಸುತ್ತಾರೆ.

೩೨. ಪುರುಷ ಚಿಹ್ನೆಯುಳ್ಳ ಯಾವ ಯಾವ ಪದಾರ್ಥಗಳುಂಟೋ ಅವೆಲ್ಲವೂ ಈಶ್ವರನ ವಿಭೂತ್ಯಂಶಗಳು, ಸ್ತ್ರೀ ಚಿಹ್ನೆಗಳುಳ್ಳ ಯಾವ ಯಾವ ಪದಾರ್ಥಗಳುಂಟೋ ಆ ಪದಾರ್ಥಗಳೆಲ್ಲವೂ ಗೌರಿಯ ವಿಭೂತ್ಯಂಶಗಳು.

೩೩. ತಿಳಿಯಲರ್ಹವಾದ ಸ್ವರ್ಗ, ಮತ್ತು ಪಾತಾಳ ಲೋಕವೇ ಅಂತವಾಗಿ ಉಳ್ಳ ಸಕಲ ಬ್ರಹ್ಮಾಂಡದ ಅಷ್ಟ ಆವರಣಗಳೆಲ್ಲವೂ ಉಮಾ ರೂಪವಾದುದು. ತಿಳಿಯುವವನು ಮಹೇಶ್ವರನು.

೩೪. ತ್ರಿಪುರ ನಾಶಕನಾದ ಈಶ್ವರನ ಪತ್ನಿಯಾದ ಪಾರ್ವತಿಯೇ ಕ್ಷೇತ್ರ ಸ್ವರೂಪಳು. ಕ್ಷೇತ್ರಜ್ಞನು ಪೂಜ್ಯನಾದ ಅಂಧಕಾಸುರ ಸಂಹಾರಕನು.

೩೫. ಯಾವ ರಾಜನು ಶಿವಲಿಂಗವನ್ನು ಪೂಜಿಸದೇ ಬೇರೇ ದೇವತೆ

ಶಿವಭಕ್ತೋ ನ ಯೋ ರಾಜಾ ಭಕ್ತೋಽನ್ಯೇಷು ಸುರೇಷು ಯಃ ।
ಸ್ವಪತಿಂ ಯುವತಿಃ ತ್ಯಕ್ತ್ವಾ ಯಥಾ ಜಾರೇಷು ರಾಜತೇ ॥೩೬॥

ಬ್ರಹ್ಮಾದಯಃ ಸುರಾಸ್ಸರ್ವೇ ರಾಜಾನಶ್ಚ ಮಹರ್ಧಿಕಾಃ ।
ಮಾನವಾ ಮುನಯ ಶ್ಚೈವ ಸರ್ವೇ ಲಿಂಗಂ ಯಜಂತಿ ಚ ॥೩೭॥

ವಿಷ್ಣುನಾ ರಾವಣಂ ಹತ್ವಾ ಸ ಸೈನ್ಯಂ ಬ್ರಹ್ಮಣಃ ಸುತಂ ।
ಸ್ಥಾಪಿತಂ ವಿಧಿವದ್ಭಕ್ತ್ಯಾ ಲಿಂಗಂ ತೀರೇ ನದೀ ಪತೇಃ ॥೩೮॥

ಕೃತ್ವಾ ಪಾಪ ಸಹಸ್ರಾಣಿ ಹತ್ವಾ ವಿಪ್ರ ಶತಂ ತಥಾ ।
ಭಾವಾ ತ್ಸಮಾಶ್ರಿತೋ ರುದ್ರಂ ಮುಚ್ಯತೇ ನಾತ್ರ ಸಂಶಯಃ ॥

---

ಗಳನ್ನು ಪೂಜಿಸುತ್ತಾನೋ, ಶಿವಭಕ್ತನಲ್ಲದ ಅವನು ತನ್ನ ದೇಶದೊಡನೆ ರೌರವ ನರಕವನ್ನು ಹೊಂದುತ್ತಾನೆ.

೩೬. ಯಾವ ರಾಜನು ಶಿವ ಭಕ್ತನಲ್ಲದೇ ಅನ್ಯದೇವತೆಗಳಲ್ಲಿ ಭಕ್ತಿಯನ್ನಿಡುವನೋ ಅವನು, ತನ್ನ ಗಂಡನನ್ನು ತ್ಯಜಿಸಿ ಜಾರರಲ್ಲಿ ಮನುಸ್ಸುಳ್ಳ ಯುವತಿಯಂತೆ, ಆಗಿರುತ್ತಾನೆ.

೩೭. ಬ್ರಹ್ಮನೇ ಮೊದಲಾದ ಸಕಲ ದೇವತೆಗಳೂ ಮಹೇಶ್ವರ್ಯ ಯುಕ್ತರಾದ ರಾಜರೂ, ಮನುಷ್ಯರೂ, ಋಷಿಗಳೂ, ಎಲ್ಲರೂ ಲಿಂಗಾರ್ಚನೆಯನ್ನು ಮಾಡುತ್ತಾರೆ.

೩೮. ಬ್ರಹ್ಮನ ಪುತ್ರನಾದ ರಾವಣನನ್ನು ವಿಷ್ಣುವು ಸಂಹಾರಮಾಡಿ ಪ್ರಾಪ್ತವಾದ ಬ್ರಹ್ಮಹತ್ಯಾ ದೋಷವನ್ನು ಕಳೆದುಕೊಳ್ಳಲು ಸಮುದ್ರ ತೀರದಲ್ಲಿ ಶಾಸ್ತ್ರ ವಿಹಿತವಾದ ಕ್ರಮದಲ್ಲಿ ಭಕ್ತಿಯಿಂದ ಲಿಂಗವನ್ನು ಸ್ಥಾಪಿಸಿ ಅರ್ಚಿಸಿದನು.

೩೯. ಲೆಕ್ಕವಿಲ್ಲದಷ್ಟು ಪಾಪಕರ್ಮಗಳನ್ನಾಚರಿಸಿ ಅನೇಕ ಬ್ರಾಹ್ಮಣರನ್ನು ಕೊಂದು ಬ್ರಹ್ಮಹತ್ಯಾ ದೋಷವುಳ್ಳವನೂ ಭಕ್ತಿಯಿಂದ ರುದ್ರನಿಗೆ ಶರಣುಹೋಗಿ ಭಕ್ತಿ ಭಾವವುಳ್ಳವನಾಗಿ ಅರ್ಚಿಸುವುದಾದರೆ ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆಂಬುವುದರಲ್ಲಿ ಸಂದೇಹವಿಲ್ಲ.

**ಸರ್ವೇ ಲಿಂಗಮಯಾ ಲೋಕಾಃ ಸರ್ವೇ ಲಿಂಗೇ ಪ್ರತಿಷ್ಠಿತಾಃ ।**
**ತಸ್ಮಾ ದಭ್ಯರ್ಚಯೇ ಲ್ಲಿಂಗಂ ಯದೀಚ್ಛೇಚ್ಛಾಶ್ವತಂ ಪದಂ ॥೪೦॥**
**ಸರ್ವಾ ಕಾರೌ ಸ್ಥಿತಾವೇತೌ ನರೈಃ ಶ್ರೇಯೋಽರ್ಥಿಭಿಃ ಶಿವೌ ।**
**ಪೂಜನೀಯೌ ನಮಸ್ಕಾರ್ಯೌ ಚಿಂತನೀಯೌ ಚ ಸರ್ವದಾ ॥೪೧॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದ್ವಾದಶೋಽಧ್ಯಾಯಃ**

---

೪೦. ಸಕಲ ಪ್ರಪಂಚಗಳೂ ಲಿಂಗಸ್ವರೂಪವಾದವು. ಸಕಲವೂ ಲಿಂಗದಲ್ಲೇ ಅಡಕವಾಗಿದೆ. ಆದಕಾರಣ ಶಾಶ್ವತವಾದ ಮೋಕ್ಷವನ್ನು ಅಪೇಕ್ಷಿಸುವವರು ಲಿಂಗವನ್ನು ಪೂಜಿಸಬೇಕು.

೪೧. ಸಕಲ ಸ್ವರೂಪರಾದ ಈ ಪಾರ್ವತೀ ಪರಮೇಶ್ವರರನ್ನು, ಅಭಿವೃದ್ಧಿಯನ್ನ ಪೇಕ್ಷಿಸುವ ಮನುಜರು ಯಾವಾಗಲೂ ಭಕ್ತಿಯಿಂದ ಧ್ಯಾನಿಸಿ ನಮಸ್ಕರಿಸಿ ಪೂಜಿಸಬೇಕು.

ಶ್ರೀ ಲಿಂಗಮಹಾಪುರಾಣದ ಉತ್ತರಾರ್ಧದಲ್ಲಿ ಹನ್ನೊಂದನೆಯ ಅಧ್ಯಾಯವು
ಮುಗಿದುದು



## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದ್ವಾದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

**ಮೂರ್ತಯೋಽಷ್ಟೌ ಮಮಾ ಚಕ್ಷ್ವ ಶಂಕರಸ್ಯ ಮಹಾತ್ಮನಃ ।**
**ವಿಶ್ವರೂಪಸ್ಯ ದೇವಸ್ಯ ಗಣೇಶ್ವರ ಮಹಾಮತೇ ॥ ೧ ॥**

॥ ನಂದಿಕೇಶ್ವರ ಉವಾಚ ॥

**ಅಹಂ ತೇ ಕಥಯಿಷ್ಯಾಮಿ ಮಹಿಮಾನ ಮುಮಾಪತೇಃ ।**
**ವಿಶ್ವರೂಪಸ್ಯ ದೇವಸ್ಯ ಸರೋಜ ಭವ ಸಂಭವ ॥ ೨ ॥**
**ಭೂರಾಪೋಽಗ್ನಿರ್ಮರುದ್ ವ್ಯೋಮ ಭಾಸ್ಕರೋ ದೀಕ್ಷಿತಶ್ಶಶೀ ।**
**ಭವಸ್ಯ ಮೂರ್ತಯಃ ಪ್ರೋಕ್ತಾಃ ಶಿವಸ್ಯ ಪರಮೇಷ್ಠಿನಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹನ್ನೆರಡನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು. : ಮಹಾ ಬುದ್ಧಿ ಶಾಲಿಯಾದ, ಗಣಾಧಿಪನಾದ ಓ ನಂದಿಕೇಶನೇ, ಪ್ರಭುವೂ, ವಿಶ್ವಸ್ವರೂಪನೂ, ಮಹಾ ಮಹಿಮನೂ, ಆದ ಶಂಕರನ ಎಂಟು ಮೂರ್ತಿಗಳನ್ನು ನನಗಾಗಿ ವಿವರಿಸಿ ಹೇಳುವವನಾಗು.

೨. ನಂದಿಕೇಶ್ವರನು ಹೇಳಿದನು :—ಎಲೈ ಬ್ರಹ್ಮ ಪುತ್ರನೇ, ವಿಶ್ವಾತ್ಮಕನಾದ ಉಮಾಪತಿಯಾದ ದೇವನ ಮಹಿಮೆಯನ್ನು ಹೇಳುವೆನು.

೩. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ರವಿ, ಯಜಮಾನ ಮತ್ತು ಚಂದ್ರ ಇವರು ಈ ಪರಬ್ರಹ್ಮನಾದ ಮಂಗಳರೂಪನಾದ ಈಶ್ವರನ ಎಂಟು ಮೂರ್ತಿಗಳು.

ಖಾತ್ಮೇಂದು ವಹ್ನಿ ಸೂರ್ಯಾಂ ಭೋಧರಾಃ ಪವನ ಇತ್ಯಪಿ ।
ತಸ್ಯಾಷ್ಟ ಮೂರ್ತಯಃ ಪ್ರೋಕ್ತಾ ದೇವದೇವಸ್ಯ ಧೀಮತಃ ॥ ೪ ॥

ಅಗ್ನಿಹೋತ್ರಾ ರ್ಪಿತೇ ತೇನ ಸೂರ್ಯಾತ್ಮನಿ ಮಹಾತ್ಮನಿ ।
ತದ್ವಿಭೂತಿ ಸ್ತಥಾ ಸರ್ವೇ ದೇವಾ ಸ್ತೃಪ್ಯಂತಿ ಸರ್ವದಾ ॥ ೫ ॥

ವೃಕ್ಷಸ್ಯ ಮೂಲ ಸೇಕೇನ ಯಥಾ ಶಾಖೋಪ ಶಾಖಿಕಾಃ ।
ತಥಾ ತಸ್ಯಾರ್ಚಯಾ ದೇವಾಸ್ತಥಾ ಸ್ಯುಸ್ತದ್ವಿಭೂತಯಃ ॥ ೬ ॥

ತಸ್ಯ ದ್ವಾದಶಧಾ ಭಿನ್ನಂ ರೂಪಂ ಸೂರ್ಯಾತ್ಮಕಂ ಪ್ರಭೋಃ ।
ಸರ್ವದೇವಾತ್ಮಕಂ ಯಾಜ್ಯಂ ಯಜಂತಿ ಮುನಿಪುಂಗವಾಃ ॥ ೭ ॥

---

೪. ಆಕಾಶ, ಜೀವನು, ಚಂದ್ರ, ಅಗ್ನಿ, ಸೂರ್ಯ, ನೀರು, ಭೂಮಿ, ವಾಯು, ಎಂಬ ಇವು ಪ್ರತಿಭಾವಂತನಾದ ಆ ಪರಮಾತ್ಮನ ಸಂಬಂಧಿಯಾದ ಅಷ್ಟ ಮೂರ್ತಿಗಳು ಎಂದು ಹೇಳಲ್ಪಟ್ಟಿವೆ.

೫. ಶಿವನ ಅಷ್ಟಮೂರ್ತಿ ಸ್ವರೂಪಗಳಲ್ಲಿ ಸೂರ್ಯರೂಪನಾದ ಪರಮಾತ್ಮನಲ್ಲಿ ಯಾಗಗಳ ಮುಖಾಂತರವಾಗಿ ಅಗ್ನಿಹೋತ್ರದ ಅಗ್ನಿಯಲ್ಲಿ ಹವಿರ್ದ್ರವ್ಯಗಳು ಅರ್ಪಿಸಲ್ಪಟ್ಟರೆ, ಈಶ್ವರಾಂಶ ಸಂಭೂತರಾದ ಸಕಲ ದೇವತೆಗಳೂ ಯಾವಾಗಲೂ ತೃಪ್ತಿಯನ್ನು ಹೊಂದುತ್ತಾರೆ.

೬. ಮರದ ಬುಡಕ್ಕೆ ನೀರು ಹಾಕುವುದರಿಂದ ಹೇಗೆ ಮರದ ಕೊಂಬೆಗಳಿಗೆಲ್ಲಕ್ಕೂ ತೃಪ್ತಿಯಾಗುತ್ತದೋ ಹಾಗೆಯೇ ಶಂಕರನ ಪೂಜೆಯಿಂದಲೇ ಅವನ ಅಂಶಭೂತರಾದ ಸಕಲ ದೇವತೆಗಳೂ ತೃಪ್ತಿಯನ್ನು ಹೊಂದುತ್ತಾರೆ.

೭. ಸಕಲ ದೇವತಾ ಸ್ವರೂಪವೂ, ಪೂಜಿಸಲರ್ಹವಾದುದೂ, ಸೂರ್ಯಾತ್ಮಕವೂ, ಹನ್ನೆರಡು ಪ್ರಕಾರವುಳ್ಳದ್ದೂ ಆದ ಪರಮಾತ್ಮನ ಸ್ವರೂಪವನ್ನು ಮುನಿಶ್ರೇಷ್ಠರೆಲ್ಲರೂ ಅರ್ಚಿಸುತ್ತಾರೆ.

ಅಮೃತಾಖ್ಯಾ ಕಲಾ ತಸ್ಯ ಸರ್ವಸ್ಯಾದಿತ್ಯ ರೂಪಿಣಃ ।
ಭೂತ ಸಂಜೀವನೀ ಚೇಷ್ಟಾ ಲೋಕೇಽಸ್ಮಿನ್ಪೀಯತೇ ಸುಧಾ ॥ ೮ ॥

ಚಂದ್ರಾಖ್ಯ ಕಿರಣಾಸ್ತಸ್ಯ ಧೂರ್ಜಟೇರ್ಭಾಸ್ಕರಾತ್ಮನಃ ।
ಓಷಧೀನಾಂ ವಿವೃದ್ಧ್ಯರ್ಥಂ ಹಿಮ ವೃಷ್ಟಿಂ ವಿತನ್ವತೇ ॥ ೯ ॥

ಶುಕ್ಲಾಖ್ಯಾ ರಶ್ಮಯಸ್ತಸ್ಯ ಶಂಭೋರ್ಮಾರ್ತಾಂಡ ರೂಪಿಣಃ ।
ಘರ್ಮಂ ವಿತನ್ವತೇ ಲೋಕೇ ಸಸ್ಯಪಾಕಾದಿ ಕಾರಣಂ ॥೧೦॥

ದಿವಾಕರಾತ್ಮನ ಸ್ತಸ್ಯ ಹರಿಕೇಶಾಹ್ವಯಃ ಕರಃ ।
ನಕ್ಷತ್ರ ಪೋಷಕಶ್ಚೈವ ಪ್ರಸಿದ್ಧಃ ಪರಮೇಷ್ಠಿನಃ ॥೧೧॥

ವಿಶ್ವಕರ್ಮಾ ಹ್ವಯಸ್ತಸ್ಯ ಕಿರಣೋ ಬುಧ ಪೋಷಕಃ ।
ಸರ್ವೇಶ್ವರಸ್ಯ ದೇವಸ್ಯ ಸಪ್ತ ಸಪ್ತಿ ಸ್ವರೂಪಿಣಃ ॥೧೨॥

---

೮. ಈ ಪ್ರಪಂಚದಲ್ಲಿ ಪ್ರಾಣಿಗಳಿಗೆ ಚೇತನವನ್ನು ಕೊಡುವ ಕ್ರಿಯಾತ್ಮಕನಾದ ಚಂದ್ರನೆಂದು ಪ್ರಸಿದ್ಧಿಯಾಗಿರುವ, ಆದಿತ್ಯ ಸ್ವರೂಪನಾದ, ಸರ್ವಾತ್ಮಕನಾದ, ಆ ಪರಮಾತ್ಮನ ಕಲೆಯು ಎಲ್ಲ ಕಾಲದಲ್ಲಿಯೂ ಎಲ್ಲರಿಂದಲೂ ಪಾನಮಾಡಲ್ಪಡುತ್ತದೆ.

೯. ಸೂರ್ಯಸ್ವರೂಪನಾದ ಆ ಧೂರ್ಜಟಿಯ ಚಂದ್ರನೆಂದು ಹೆಸರುಳ್ಳ ಕಿರಣಗಳು ಗಿಡಮೂಲಕೆಗಳ ಅಭಿವೃದ್ಧಿಗಾಗಿ ಹಿಮವರ್ಷವನ್ನು ಕರೆಯುತ್ತವೆ. (ಸುರಿಸುತ್ತವೆ-)

೧೦. ಮಾರ್ತಾಂಡ ರೂಪಿಯಾದ ಶಂಭುವಿನ ಶುಕ್ಲ ಎಂಬುದಾಗಿ ಹೆಸರುಳ್ಳ ಕಿರಣಗಳು ಧಾನ್ಯಗಳ ಬೆಳವಣಿಗೆಗೆ ಕಾರಣ ಭೂತವಾದ ಶಾಖವನ್ನು ಕೊಡುತ್ತವೆ.

೧೧. ಸೂರ್ಯ ಸ್ವರೂಪನಾದ ಆ ಪರಬ್ರಹ್ಮನ ಹರಿಕೇಶವೆಂದು ಪ್ರಸಿದ್ಧವಾದ ಆ ಕಿರಣವು ನಕ್ಷತ್ರಗಳಿಗೆ ಬೆಳಕನ್ನು ಕೊಡುವುದು.

೧೨. ಆದಿತ್ಯ ಸ್ವರೂಪನೂ ಸರ್ವೇಶ್ವರನೂ ಆದ ಆ ಪರಮಾತ್ಮನ ವಿಶ್ವಕರ್ಮಎಂಬುವ ಕಿರಣವು ಬುಧಗ್ರಹ ಪೋಷಕವಾದುದು.

ವಿಶ್ವ ವ್ಯಚ ಇತಿ ಖ್ಯಾತಃ ಕಿರಣಸ್ತಸ್ಯ ಶೂಲಿನಃ ।
ಶುಕ್ರ ಪೋಷಕ ಭಾವೇನ ಪ್ರತೀತಃ ಸೂರ್ಯರೂಪಿಣಃ ॥೧೩॥

ಸಂಯುದ್ವಸುರಿತಿ ಖ್ಯಾತೋ ಯಸ್ಯ ರಶ್ಮಿ ಸ್ತ್ರಿಶೂಲಿನಃ ।
ಲೋಹಿತಾಂಗಂ ಪ್ರಪುಷ್ಣಾತಿ ಸಹಸ್ರ ಕಿರಣಾತ್ಮನಃ ॥೧೪॥

ಸರ್ವಾವಸುರಿತಿ ಖ್ಯಾತೋ ರಶ್ಮಿಸ್ತಸ್ಯ ಪಿನಾಕಿನಃ ।
ಬೃಹಸ್ಪತಿಂ ಪ್ರಪುಷ್ಣಾತಿ ಸರ್ವದಾ ತಪನಾತ್ಮನಃ ॥೧೫॥

ಸ್ವರಾಡಿತಿ ಸಮಾಖ್ಯಾತಃ ಶಿವಸ್ಯಾಂಶುಃ ಶನೈಶ್ಚರಂ ।
ಹರಿದಶ್ವಾತ್ಮನಸ್ತಸ್ಯ ಪ್ರಪುಷ್ಣಾತಿ ದಿವಾನಿಶಂ ॥೧೬॥

ಸೂರಾತ್ಮಕಸ್ಯ ದೇವಸ್ಯ ವಿಶ್ವಯೋನೇರುಮಾಪತೇಃ ।
ಸುಷುಮ್ನಾಖ್ಯಃ ಸದಾ ರಶ್ಮಿಃ ಪುಷ್ಣಾತಿ ಶಿಶಿರದ್ಯುತಿಂ ॥೧೭॥

---

೧೩. ಸೂರ್ಯರೂಪಿಯಾದ, ಶೂಲಾಯುಧ ಧಾರಿಯಾದ ಆ ಪರಮಾತ್ಮನ ವಿಶ್ವವ್ಯಚವೆಂಬ ಕಿರಣವು ಶುಕ್ರಗ್ರಹಕ್ಕೆ ತೇಜಸ್ಸನ್ನು ಕೊಡುವುದರ ಮೂಲಕ ಪ್ರಸಿದ್ಧವಾದುದಾಗಿದೆ.

೧೪. ಅಸಂಖ್ಯಾತ ಕಿರಣಗಳುಳ್ಳ ಸೂರ್ಯಾತ್ಮಕನಾದ ಪರಮೇಶ್ವರನ ಸಂಯುದ್ವಸುವೆಂಬ ಯಾವ ಕಿರಣವುಂಟೋ ಅದು ಅಂಗಾರಕ ಗ್ರಹದ ಪೋಷಕವಾದುದು.

೧೫. ಪಿನಾಕ ಹಸ್ತನಾದ ದಿವಾಕರ ಸ್ವರೂಪನಾದ ಆ ಪರಶಿವನ ಸರ್ವಾವಸುವೆಂಬ ಕಿರಣವು ಬೃಹಸ್ಪತಿಗ್ರಹಕ್ಕೆ ತೇಜಸ್ಸನ್ನು ಕೊಡುತ್ತಾ ಯಾವಾಗಲೂ ಪೋಷಕವಾಗಿದೆ.

೧೬. ಸೂರ್ಯರೂಪಿಯಾದ ಆ ಶಿವನ ಸ್ವರಾಟ್ ಎಂಬ ಕಿರಣವು ಶನೈಶ್ಚರ ಗ್ರಹದ ಪೋಷಕವಾಗಿ ಯಾವಾಗಲೂ ಇರುವುದು.

೧೭. ಆದಿತ್ಯರೂಪಿಯಾದ, ವಿಶ್ವಯೋನಿಯಾದ, ಉಮಾಪತಿಯೂ ಆದ, ಆ ಶಂಕರನ ಸುಷುಮ್ನಾ ಎಂಬ ಕಿರಣವು ಚಂದ್ರಗ್ರಹಕ್ಕೆ ಬೆಳಕನ್ನು ಕೊಡುತ್ತಾ ರಕ್ಷಿಸುತ್ತದೆ.

ಸೌಮ್ಯಾನಾಂ ವಸುಜಾತಾನಾಂ ಪ್ರಕೃತತ್ವ ಮುಪಾಗತಾ ।
ತಸ್ಯ ಸೋಮಾಹ್ವಯಾ ಮೂರ್ತಿಃ ಶಂಕರಸ್ಯ ಜಗದ್ಗುರೋಃ ॥೧೮॥
ತಸ್ಯ ಸೋಮಾತ್ಮಕಂ ರೂಪಂ ಶುಕ್ರತ್ವೇನ ವ್ಯವಸ್ಥಿತಂ ।
ಶರೀರಭಾಜಾಂ ಸರ್ವೇಷಾಂ ದೇವಸ್ಯಾಂತಕ ಶಾಸಿನಃ ॥೧೯॥
ಶರೀರಿಣಾ ಮಶೇಷಾಣಾಂ ಮನಸ್ಯೇವ ವ್ಯವಸ್ಥಿತಂ ।
ವಪುಃ ಸೋಮಾತ್ಮಕಂ ಶಂಭೋಸ್ತಸ್ಯ ಸರ್ವ ಜಗದ್ಗುರೋಃ ॥೨೦॥
ಶಂಭೋಃ ಷೋಡಶಧಾ ಭಿನ್ನಾ ಸ್ಥಿತಾಽಮೃತ ಕಲಾತ್ಮನಃ ।
ಸರ್ವ ಭೂತ ಶರೀರೇಷು ಸೋಮಾಖ್ಯಾ ಮೂರ್ತಿ ರುತ್ತಮಾ ॥
ದೇವಾನ್ ಪಿತೄಂಶ್ಚ ಪುಷ್ಣಾತಿ ಸುಧಯಾಽಮೃತಯಾ ಸದಾ ।
ಮೂರ್ತಿಃ ಸೋಮಾಹ್ವಯಾ ತಸ್ಯ ದೇವದೇವಸ್ಯ ಶಾಸಿತುಃ ॥೨೨॥

---

೧೮. ಸೌಮ್ಯಗಳಾದ ಕಿರಣ ಸಮೂಹಗಳ ಕಾರಣ ಸ್ವಭಾವವನ್ನು ಹೊಂದಿರುವ, ಜಗತ್ತಿಗೆಲ್ಲಕ್ಕೂ ಉಪದೇಶಕನಾದ ಆ ಶಂಕರನ ಮೂರ್ತಿಯು ಸೋಮ ಎಂದು ಹೆಸರುಳ್ಳದ್ದು.

೧೯. ಯಮ ಶಾಸಕನಾದ ಆ ಈಶ್ವರನ ಚಂದ್ರಾತ್ಮಕವಾದ ರೂಪವು ಸಕಲರಾದ ಜೀವರುಗಳೊಳಗೆ ಧಾತು ರೂಪದಿಂದ ಇರುವಂತೆ ವ್ಯವಸ್ಥೆಮಾಡಲ್ಪಟ್ಟದೆ.

೨೦. ಸಕಲ ಪ್ರಪಂಚಕ್ಕೂ ಗುರುವಾದ ಆ ಶಂಭುವಿನ ಸೋಮಾತ್ಮಕವಾದ ಶರೀರವು ಸಕಲ ಪ್ರಾಣಿಗಳ ಮನಸ್ಸಿನಲ್ಲಿಯೂ ಪ್ರತಿಷ್ಠಿಸಲ್ಪಟ್ಟಿರುತ್ತದೆ.

೨೧. ಅಮೃತಮಯವಾದ ಕಲೆಗಳಿಂದ ಕೂಡಿರುವ ಈಶ್ವರನ ಶ್ರೇಷ್ಠವಾದ ಸೋಮ ಎಂಬ ಮೂರ್ತಿಯು ಹದಿನಾರು ಪ್ರಕಾರವಾಗಿ ಭಿನ್ನವಾಗಿ ಸಕಲ ಪ್ರಾಣಿಗಳ ಶರೀರಗಳಲ್ಲೂ ಇರುತ್ತದೆ.

೨೨. ಸರ್ವ ಶಾಸಕನಾದ ಆ ಪರಮೇಶ್ವರನ ಸೋಮ ಎಂಬ ಮೂರ್ತಿಯು ದೇವತೆಗಳನ್ನೂ ಪಿತೃಗಳನ್ನೂ ಅಮೃತ ಸ್ವರೂಪವಾದ ಕಿರಣಗಳಿಂದ ಪೋಷಿಸುತ್ತದೆ.

ಪುಷ್ಣಾತ್ಯೋಷಧಿ ಜಾತಾನಿ ದೇಹಿನಾ ಮಾತ್ಮಶುದ್ಧಯೇ ।
ಸೋಮಾಹ್ವಯಾ ತನುಸ್ತಸ್ಯ ಭವಾನೀ ನಿತಿ ನಿರ್ದಿಶೇತ್ ॥೨೩॥

ಯಜ್ಞಾನಾಂ ಪತಿ ಭಾವೇನ ಜೀವಾನಾಂ ತಪಸಾ ಮಪಿ ।
ಪ್ರಸಿದ್ಧ ರೂಪಮೇತದ್ಧ್ವೈ ಸೋಮಾತ್ಮಕ ಮುಮಾಪತೇಃ ॥೨೪॥

ಜಲಾನಾ ಮೋಷಧೀನಾಂ ಚ ಪತಿಭಾವೇನ ವಿಶ್ರುತಂ ।
ಸೋಮಾತ್ಮಕಂ ವಪುಸ್ತಸ್ಯ ಶಂಭೋರ್ಭಗವತಃ ಪ್ರಭೋಃ ॥೨೫॥

ದೇವೋ ಹಿರಣ್ಮಯೋ ಮೃಷ್ಟಃ ಪರಸ್ಪರ ವಿವೇಕಿನಃ ।
ಕರಣಾನಾಮಶೇಷಾಣಾಂ ದೇವತಾನಾಂ ನಿರಾಕೃತಿಃ ॥೨೬॥

ಜೀವತ್ವೇನ ಸ್ಥಿತೇ ತಸ್ಮಿನ್ ಶಿವೇ ಸೋಮಾತ್ಮಕೇ ಪ್ರಭೌ ।
ಮಧುರಾ ವಿಲಯಂ ಯಾತಿ ಸರ್ವ ಲೋಕೈಕ ರಕ್ಷಿಣೀ ॥೨೭॥

---

೨೩. ಆ ಪರಮಾತ್ಮನ ಸೋಮ ಎಂಬುದಾಗಿ ಹೆಸರುಳ್ಳ ಶರೀರವನ್ನು ಪಾರ್ವತಿಯನ್ನಾಗಿ ತಿಳಿಯಬೇಕು. ಅದು ಜೀವರುಗಳ ಆತ್ಮಶುದ್ಧಿಗಾಗಿ ಓಷಧಿ ಸಮೂಹಗಳನ್ನು ರಕ್ಷಿಸುತ್ತದೆ.

೨೪. ಯಜ್ಞಗಳಿಗೂ ಜೀವರುಗಳಿಗೂ ಮತ್ತು ತಪಸ್ಸುಗಳಿಗೂ, ಈಶ್ವರನ ಈ ಸೋಮಾತ್ಮಕವಾದ ಪ್ರಸಿದ್ಧ ರೂಪವು ಯಜಮಾನ ರೂಪದಿಂದಿರುತ್ತದೆ.

೨೫. ಪೂಜ್ಯನಾದ ಪ್ರಭುವಾದ ಆ ಶಂಭುವಿನ ಸೋಮಾತ್ಮಕವಾದ ಶರೀರವು ನೀರುಗಳಿಗೂ, ಓಷಧಿಗಳಿಗೂ, ಒಡೆಯನೆಂಬುದಾಗಿ ಪ್ರಸಿದ್ಧವಾಗಿದೆ.

೨೬. ಆತ್ಮಾನಾತ್ಮ ವಿವೇಕವುಳ್ಳ ಜ್ಞಾನಿಗಳಿಂದ ತಿಳಿಯಲ್ಪಟ್ಟಿರುವ ಶಿವನು ಸಕಲ ಇಂದ್ರಿಯಗಳಿಗೂ ಇಂದ್ರಿಯಾಭಿಮಾನಿ ದೇವತೆಗಳಿಗೂ, ತಿಳಿಯಲಾಗದ ಭೌತಿಕವಲ್ಲದ ಅಮೃತಮಯವಾದ ರೂಪವುಳ್ಳವನು.

೨೭. ಸೋಮ ಸ್ವರೂಪನಾದ, ಪ್ರಭುವಾದ, ಆ ಪರಮಾತ್ಮನಲ್ಲಿ ತನ್ನ ಆತ್ಮ ಎಂಬುದಾಗಿ ನಿಶ್ಚಲವಾದ ಭಾವವನ್ನಿಟ್ಟು ಧ್ಯಾನಿಸಿದರೆ ಸಕಲ ಪ್ರಪಂಚವನ್ನೂ ಕಾಪಾಡುವ ಮಾಯೆಯು ನಾಶಹೊಂದುತ್ತದೆ,

ಯಜಮಾನಾಹ್ವಯಾ ಮೂರ್ತಿಃ ಶೈವೀ ಹವ್ಯೈ ರಹರ್ನಿಶಂ ।
ಪುಷ್ಣಾತಿ ದೇವತಾಃ ಸರ್ವಾಃ ಕವ್ಯೈಃ ಪಿತೃಗಣಾನಪಿ ॥೨೮॥
ಯಜಮಾನಾಹ್ವಯಾ ಯಾ ಸಾ ತನುಶ್ಚಾಹುತಿಜಾ ತಯಾ ।
ವೃಷ್ಟ್ಯಾ ಭಾವಯತಿ ಸ್ಪಷ್ಟಂ ಸರ್ವಮೇವ ಪರಾಪರಂ ॥೨೯॥
ಅಂತಃ ಸ್ಥಂ ಚ ಬಹಿಃ ಸ್ಥಂ ಚ ಬ್ರಹ್ಮಾಂಡಾನಾಂ ಸ್ಥಿತಂ ಜಲಂ ।
ಭೂತಾನಾಂ ಚ ಶರೀರಸ್ಥಂ ಶಂಭೋಃ ಮೂರ್ತಿ ರ್ಗರೀಯಸೀ ॥
ನದೀನಾ ಮಮೃತಂ ಸಾಕ್ಷಾನ್ನದಾನಾ ಮಪಿ ಸರ್ವದಾ ।
ಸಮುದ್ರಾಣಾಂ ಚ ಸರ್ವತ್ರ ವ್ಯಾಪೀ ಸರ್ವ ಮುಮಾಪತಿಃ ॥೩೧॥
ಸಂಜೀವಿನೀ ಸಮಸ್ತಾನಾಂ ಭೂತಾನಾಮೇವ ಪಾವಿನೀ ।
ಅಂಬಿಕಾ ಪ್ರಾಣಸಂಸ್ಥಾ ಯಾ ಮೂರ್ತಿರಂಬುಮಯೀ ಪರಾ ॥

---

೨೮. ಯಜಮಾನ ಎಂಬ ಶಿವಸ್ವರೂಪವಾದ ಮತ್ತು ಶಿವ ಸಂಬಂಧವಾದ ಮೂರ್ತಿಯು ಯಜ್ಞಾದಿಗಳಲ್ಲಿ ದೇವತೆಗಳಿಗೆ ಕೊಡಲ್ಪಟ್ಟ ಹವಿರ್ದ್ರವ್ಯಗಳನ್ನು ಅವರಿಗೆ ಕೊಡುವುದರ ಮೂಲಕ ಸಕಲ ದೇವತೆಗಳನ್ನೂ, ಪಿತೃಯಜ್ಞಗಳಲ್ಲಿ ಪಿತೃಗಳಿಗಾಗಿ ಕೊಡಲ್ಪಟ್ಟ ಕವ್ಯ ದ್ರವ್ಯಗಳನ್ನೂ ಅವರಿಗೆ ತಲಪಿಸುವುದರಮೂಲಕ ಪಿತೃಸಮೂಹಗಳನ್ನೂ ಯಾವಾಗಲೂ ರಕ್ಷಿಸುತ್ತದೆ.

೨೯. ದೀಕ್ಷಿತ ರೂಪವಾದ ಶರೀರವು ಆಹುತಿಯಿಂದ ಉತ್ಪನ್ನವಾದ ಮಳೆಯಿಂದ ಸಕಲವನ್ನೂ ಉಂಟು ಮಾಡುತ್ತದೆಂಬುದು ಪ್ರಸಿದ್ಧವಾದುದೇ ಆಗಿರುತ್ತದೆ.

೩೦. ಈಶ್ವರನ ಜಲರೂಪವಾದ ಮೂರ್ತಿಯು ಬ್ರಹ್ಮಾಂಡಗಳ ಹೊರಗೂ,ಒಳಗೂ ಇರುವುದಾಗಿಯೂ, ಪ್ರಾಣಿಗಳ ಶರೀರದಲ್ಲೂ ಇರುವುದಾಗಿಯೂ, ಶ್ರೇಷ್ಠವಾದುದಾಗಿಯೂ ಇರುತ್ತದೆ.

೩೧. ಪೂರ್ವಕ್ಕೆ ಹರಿಯುವ ನದಿಗಳಿಗೂ, ಪಶ್ಚಿಮಕ್ಕೆ ಹರಿಯುವ ನದಗಳಿಗೂ, ಸಮುದ್ರಗಳಿಗೂ, ನೀರನ್ನು ಕೊಡುತ್ತಾ ಉಮಾಪತಿಯಾದ ಈಶ್ವರನ ಜಲೀಯ ಮೂರ್ತಿಯು ಎಲ್ಲೆಡೆಯಲ್ಲಿಯೂ ವ್ಯಾಪಿಸಿರುತ್ತದೆ.

೩೨. ಎಲ್ಲ ಪ್ರಾಣಿಗಳನ್ನೂ ಬದುಕಿಸುವ, ಎಲ್ಲ ಭೂತಗಳನ್ನೂ ಪರಿಶುದ್ಧಿಗೊಳಿಸುವ, ಅಷ್ಟಮೂರ್ತಿಯಾದ ಶಿವನ ಜಲಮಯ ಶರೀರವು

**ಅಂತಃ ಸ್ಥಶ್ಚ ಬಹಿಃ ಸ್ಥಶ್ಚ ಬ್ರಹ್ಮಾಂಡಾನಾಂ ವಿಭಾವಸುಃ ।**
**ಯಜ್ಞಾನಾಂ ಚ ಶರೀರಸ್ಥಃ ಶಂಭೋಃ ಮೂರ್ತಿರ್ಗರೀಯಸೀ ॥**
**ಶರೀರ ಸ್ಥಾಚ ಭೂತಾನಾಂ ಶ್ರೇಯಸೀ ಮೂರ್ತಿರೈಶ್ವರೀ ।**
**ಮೂರ್ತಿಃ ಪಾವಕ ಸಂಸ್ಥಾ ಯಾ ಶಂಭೋರತ್ಯಂತ ಪೂಜಿತಾ ॥೩೪॥**
**ಭೇದಾ ಏಕೋನ ಪಂಚಾಶ ದ್ವೇದ ವಿದ್ಭಿರುದಾಹೃತಾಃ ।**
**ಹವ್ಯಂ ವಹತಿ ದೇವಾನಾಂ ಶಂಭೋರ್ಯಜ್ಞಾತ್ಮಕಂ ವಪುಃ ॥೩೫॥**
**ಕವ್ಯಂ ಪಿತೃಗಣಾನಾಂ ಚ ಹೂಯಮಾನಂ ದ್ವಿಜಾತಿಭಿಃ ।**
**ಸರ್ವ ದೇವಮಯಂ ಶಂಭೋಃ ಶೇಷಮಗ್ನ್ಯಾತ್ಮಕಂ ವಪುಃ ॥೩೬॥**

---

ಚಂದ್ರ, ಉಮಾ ರೂಪದಿಂದ ಎಲ್ಲಕ್ಕೂ ತಾಯಿಯಾಗಿ, ಪ್ರಾಣಾಧಾರ ವಾಗಿ, ಶ್ರೇಷ್ಠವಾದುದಾಗಿ ಹೃದಯದಲ್ಲಿರುತ್ತದೆ.

೩೩. ಬ್ರಹ್ಮಾಂಡಗಳ ಒಳಗೂ, ಹೊರಗೂ, ವ್ಯಾಪಿಸಿರುವ ಮತ್ತು ಯಜ್ಞಗಳ ಶರೀರಗಳಲ್ಲಡಗಿರುವ ಶಂಭುವಿನ ಅಗ್ನಿ ರೂಪವಾದ ಮೂರ್ತಿಯು ದೊಡ್ಡದಾದುದು. ಗುಣಕರ್ಮಗಳಿಂದ ಎಲ್ಲಕ್ಕೂ ಮಿಗಿಲಾದುದು

೩೪. ಪ್ರಾಣಿಗಳ ಶರೀರದಲ್ಲಿ ಜಠರಾಗ್ನಿಯೆಂಬುದು ಈಶ್ವರ ಸಂಬಂಧ ವಾದ ಮೂರ್ತಿಯು ಶ್ರೇಯಸ್ಕರವಾದ ರೂಪವಾಗಿದೆ. ಪಾವಕ ರೂಪಿ ಯಾದ ಆ ಶಂಭುವಿನ ಮೂರ್ತಿಯು ಪೂಜಿಸಲು ಹೆಚ್ಚು ಅರ್ಹವಾದುದು.

೩೫. ವೇದತತ್ವವನ್ನು ತಿಳಿದಿರುವವರು ಶಂಭುವಿನ ಅಗ್ನಿಮಯ ಮೂರ್ತಿಯನ್ನು ನಾಲ್ವತ್ತೊಂಬತ್ತು ಭೇದಗಳುಳ್ಳದ್ದನ್ನಾಗಿ ಹೇಳುತ್ತಾರೆ. ಶಂಭುವಿನ ಈ ಅಗ್ನಿರೂಪವಾದ ಯಜ್ಞಾತ್ಮಕವಾದ ಶರೀರವು ದೇವತೆಗಳಿಗೆ ಯಾಗಗಳಲ್ಲಿ ಕೊಡಲ್ಪಟ್ಟ ಹವಿಸ್ಸನ್ನು ಒಯ್ದು ಮುಟ್ಟಿಸುತ್ತದೆ.

೩೬. ಎಲ್ಲ ದೇವತಾ ಸ್ವರೂಪನಾದ ಶಂಭುವಿನ ಅಗ್ನಿ ರೂಪವಾದ ತನುವು ಶ್ರೇಷ್ಠವಾದುದೆಂದು ವೇದವನ್ನು ತಿಳಿದಿರುವವರು ಹೇಳುತ್ತಾರೆ. ಮತ್ತು ಇದನ್ನು ವಿಧಿಗನುಸಾರವಾಗಿ ಪೂಜಿಸುತ್ತಾರೆ. ಇದು ದ್ವಿಜರು ಗಳಿಂದ ಹೋಮ ಮಾಡಲ್ಪಡುವ ಕವ್ಯವನ್ನು ಪಿತೃಸಮೂಹಗಳಿಗೂ ಒಯ್ದು ತಲಪಿಸುತ್ತದೆ.

ವದಂತಿ ವೇದ ಶಾಸ್ತ್ರಜ್ಞಾ ಯಜಂತಿ ಚ ಯಥಾವಿಧಿ ।
ಅಂತಃ ಸ್ಥೋ ಜಗದಂಡಾನಾಂ ಬಹಿಃ ಸ್ಥಶ್ಚ ಸಮೀರಣಃ ॥೩೭॥
ಶರೀರ ಸ್ಥಶ್ಚ ಭೂತಾನಾಂ ಶೈವೀ ಮೂರ್ತಿಃ ಪಟೀಯಸೀ ।
ಪ್ರಾಣಾದ್ಯಾ ನಾಗ ಕೂರ್ಮಾದ್ಯಾ ಆವಹಾದ್ಯಾಶ್ಚ ವಾಯವಃ ॥
ಈಶಾನ ಮೂರ್ತೇ ರೇಕಸ್ಯ ಭೇದಾಃ ಸರ್ವೇ ಪ್ರಕೀರ್ತಿತಾಃ ।
ಅಂತಸ್ಥಂ ಜಗದಂಡಾನಾಂ ಬಹಿಃ ಸ್ಥಂ ಚ ವಿಯದ್ವಿಭೋಃ ॥೩೯॥
ಶರೀರ ಸ್ಥಂ ಚ ಭೂತಾನಾಂ ಶಂಭೋ ಮೂರ್ತಿರ್ಗರೀಯಸೀ ।
ಶಂಭೋ ರ್ವಿಶ್ವಂಭರಾ ಮೂರ್ತಿ ಸ್ಸರ್ವ ಬ್ರಹ್ಮಾಧಿ ದೇವತಾ ॥೪೦॥
ಚರಾ ಚರಾಣಾಂ ಭೂತಾನಾಂ ಸರ್ವೇಷಾಂ ಧಾರಣೇ ಮತಾ ।
ಚರಾ ಚರಾಣಾಂ ಭೂತಾನಾಂ ಶರೀರಾಣಿ ವಿದು ರ್ಬುಧಾಃ ॥೪೧॥

---

೩೭–೩೮. ಈಶ್ವರನ ವಾಯು ಮೂರ್ತಿಯು ಬ್ರಹ್ಮಾಂಡಗಳ ಒಳಗೂ ಹೊರಗೂ ಮತ್ತು ಪ್ರಾಣಿಗಳ ಶರೀರದಲ್ಲೂ ವ್ಯಾಪಿಸಿ ಸಾಮರ್ಥ್ಯದಿಂದ ಕೂಡಿದುದಾಗಿದೆ. ಒಂದೇ ಒಂದಾದ ಈಶ್ವರನ ಸಂಬಂಧಿಯಾದ ಈ ವಾಯು ಮೂರ್ತಿಯು ಪ್ರಾಣ, ಅಪಾನಾದಿ ವಾಯುಗಳೂ, ನಾಗ ಕೂರ್ಮಾದಿ ಉಪಪ್ರಾಣಗಳೂ ಮತ್ತು ಆಹವಾದಿ ವಾಯುಮಂಡಲಗಳೂ, ಈ ಮುಂತಾದ ಭೇದಗಳುಳ್ಳದ್ದೆಂದು ಹೇಳುತ್ತಾರೆ.

೩೯. ಬ್ರಹ್ಮಾಂಡಗಳ ಎಲ್ಲ ಪ್ರದೇಶದಲ್ಲೂ ವ್ಯಾಪಿಸಿರುವ ಪ್ರಾಣಿಗಳ ಶರೀರದಲ್ಲೂ ವ್ಯಾಪಿಸಿರುವ, ಈಶ್ವರನ ಆಕಾಶಾತ್ಮಕವಾದ ಮೂರ್ತಿಯು ಬಲುದೊಡ್ಡದಾದುದು. ಶ್ರೇಷ್ಠವಾದುದು.

೪೦. ವಿದ್ವಾಂಸರು ಸ್ಥಾವರ ಜಂಗಮಾದಿ ಸಕಲ ಪ್ರಾಣಿಗಳ ಶರೀರ ಗಳನ್ನೂ ಉಂಟುಮಾಡಿ ಎಲ್ಲವನ್ನೂ ಧರಿಸಿರುವ, ಈಶ್ವರ ಸಂಬಂಧವಾದ ಪೃಥಿವೀ ಎಂಬ ಮೂರ್ತಿಯು ಚರಾಚರ ಭೂತಗಳನ್ನು ಧರಿಸಿದೆ. ಎಂದು ಹೇಳುತ್ತಾರೆ.

೪೧. ಮುನಿಶ್ರೇಷ್ಠರು ಈ ಪೃಥಿವ್ಯಾದಿ ಪಂಚ ಭೂತಗಳು ಚಂದ್ರ, ಸೂರ್ಯ ಮತ್ತು ಆತ್ಮ (ಯಜಮಾನ) ಇವುಗಳು ಸೇರಿ ಪ್ರತಿಭಾವಂತನಾದ ದೇವ ದೇವನಾದ ಈಶ್ವರನ ಎಂಟು ಮೂರ್ತಿಗಳೆಂದು ಹೇಳುತ್ತಾರೆ.

**ಪಂಚಕೇನೇಶ ಮೂರ್ತಿನಾಂ ಸಮಾರಬ್ಧಾನಿ ಸರ್ವಥಾ ।**
**ಪಂಚ ಭೂತಾನಿ ಚಂದ್ರಾರ್ಕಾ ವಾತ್ಮೇತಿ ಮುನಿಪುಂಗವಾಃ ॥೪೨॥**
**ಮೂರ್ತಯೋಽಷ್ಟೌ ಶಿವಸ್ಯಾಹು ರ್ದೇವದೇವಸ್ಯ ಧೀಮತಃ ।**
**ಆತ್ಮಾ ತಸ್ಯಾಷ್ಟಮೀ ಮೂರ್ತಿ ರ್ಯಜಮಾನಾ ಹ್ವಯಾ ಪರಾ ॥೪೩॥**
**ಚರಾ ಚರ ಶರೀರೇಷು ಸರ್ವೇಷ್ವೇವ ಸ್ಥಿತಾ ತದಾ ।**
**ದೀಕ್ಷಿತಂ ಬ್ರಾಹ್ಮಣಂ ಪ್ರಾಹುರಾತ್ಮಾನಂ ಚ ಮುನೀಶ್ವರಾಃ ॥೪೪॥**
**ಯಜಮಾನಾಹ್ವಯಾ ಮೂರ್ತಿಃ ಶಿವಸ್ಯ ಶಿವದಾಯಿನಃ ।**
**ಮೂರ್ತಯೋಽಷ್ಟೌ ಶಿವಸ್ಯೈತಾ ವಂದನಿಯಾಃ ಪ್ರಯತ್ನತಃ ॥**
**ಶ್ರೇಯೋಽರ್ಥಿಭಿ ರ್ನರೈ ರ್ನಿತ್ಯಂ ಶ್ರೇಯಸಾಮೇಕಹೇತವಃ ॥೪೬॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದ್ವಾದಶೋಽಧ್ಯಾಯಃ**

---

೪೨–೪೩. ಆ ಪರಮಾತ್ಮನ ಎಂಟು ಮೂರ್ತಿಗಳಲ್ಲಿ ಐದು ಮೂರ್ತಿಗಳಿಂದ ಪಂಚ ಭೂತಗಳು ಉಂಟಾಗಿವೆ. ಮತ್ತು ಯಜಮಾನ ಎಂಬುದಾಗಿ ಹೆಸರುಳ್ಳ ಆತ್ಮನು ಎಂಟನೆಯ ಮೂರ್ತಿಯು. ಅದು ಸ್ಥಾವರ ಜಂಗಮಾತ್ಮಕವಾದ ಸಕಲ ಶರೀರಗಳಲ್ಲೂ ಇರುತ್ತದೆ. ಹೀಗೆ ಶಿವನಿಗೆ ಎಂಟು ಮೂರ್ತಿಗಳಿವೆ.

೪೪. ಮಂಗಳವನ್ನುಂಟುಮಾಡುವ ಈಶ್ವರನ ಯಜಮಾನ ಎಂಬ ಮೂರ್ತಿಯನ್ನು ಮುನಿಶ್ರೇಷ್ಠರು ತಮ್ಮ ಮತ್ತು ಯಜ್ಞದೀಕ್ಷಿತನಾದ ಬ್ರಾಹ್ಮಣನ ರೂಪವಾದುದೆಂದು ತಿಳಿಯುತ್ತಾರೆ.

೪೫–೪೬. ತಮ್ಮ ಶ್ರೇಯೋಽಭಿವೃದ್ಧಿಯನ್ನು ಅಪೇಕ್ಷಿಸುವ ಮನುಜರು ಶ್ರೇಯಸ್ಸಿಗೆ ಮುಖ್ಯ ಕಾರಣವಾದ ಈಶ್ವರನ ಈ ಎಂಟು ಮೂರ್ತಿಗಳನ್ನೂ ಯಾವಾಗಲೂ ಭಕ್ತಿ ಪ್ರಯತ್ನಗಳಿಂದ ವಂದಿಸಬೇಕು.

**ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.**

अथ श्री लिंगमहापुराणे उत्तरभागे
त्रयोदशोऽध्यायः

॥ सनत्कुमार उवाच ॥

ಭೂಯೋಽಪಿ ವದ ಮೇ ನಂದಿ ನ್ಮಹಿಮಾನ ಮುಮಾಪತೇಃ ।
ಅಷ್ಟಮೂರ್ತೇ ರ್ಮಹೇಶಸ್ಯ ಶಿವಸ್ಯ ಪರಮೇಷ್ಠಿನಃ ॥ ೧ ॥

॥ ನಂದಿಕೇಶ್ವರ ಉವಾಚ ॥

ವಕ್ಷ್ಯಾಮಿ ತೇ ಮಹೇಶಸ್ಯ ಮಹಿಮಾನ ಮುಮಾಪತೇಃ ।
ಅಷ್ಟಮೂರ್ತೇ ರ್ಜಗದ್ವ್ಯಾಪ್ಯ ಸ್ಥಿತಸ್ಯ ಪರಮೇಷ್ಠಿನಃ ॥ ೨ ॥
ಚರಾ ಚರಾಣಾಂ ಭೂತಾನಾಂ ಧಾತಾ ವಿಶ್ವಂ ಭರಾತ್ಮಕಃ ।
ಶರ್ವ ಇತ್ಯುಚ್ಯತೇ ದೇವಃ ಸರ್ವ ಶಾಸ್ತ್ರಾರ್ಥಪಾರಗೈಃ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿಮೂರನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :— ಓ ನಂದೀಕೇಶನೇ, ಪರ ಬ್ರಹ್ಮನೂ, ಮಹೇಶ್ವರನೂ, ಮಂಗಳಕರನೂ ಆದ ಅಷ್ಟಮೂರ್ತಿ ಸ್ವರೂಪನೂ ಆದ ಉಮಾಪತಿಯ ಮಹಿಮೆಯನ್ನು ಪುನಃ ನನಗೆ ವಿವರವಾಗಿ ಹೇಳುವವನಾಗು.

೨. ನಂದಿಕೇಶ್ವರನು ಹೇಳಿದನು :—ಅಷ್ಟಮೂರ್ತಿ ಸ್ವರೂಪದಿಂದ ಸಕಲ ಪ್ರಪಂಚಗಳನ್ನೂ ವ್ಯಾಪಿಸಿರುವ ಪರಬ್ರಹ್ಮನಾದ ಗೌರೀಪತಿಯ ಮಾಹಾತ್ಮ್ಯೆಯನ್ನು ಹೇಳುವೆನು.

೩. ಚರಾ ಚರಗಳಾದ ಸಕಲ ಪ್ರಾಣಿಗಳಿಗೂ, ಆಧಾರ ಭೂತ ನಾದ, ಧರಾಸ್ವರೂಪನಾದ, ಈಶ್ವರನನ್ನು ಸಕಲ ಶಾಸ್ತ್ರಗಳನ್ನೂ ಮತ್ತು ಅವುಗಳ ಅರ್ಥಗಳನ್ನೂ ತಿಳಿದಿರುವವರು ಶರ್ವನೆಂಬುದಾಗಿ ಹೇಳುತ್ತಾರೆ.

ವಿಶ್ವಂ ಭರಾತ್ಮನಸ್ತಸ್ಯ ಸರ್ವಸ್ಯ ಪರಮೇಷ್ಠಿನಃ ।
ವಿಕೇಶೀ ಕಥ್ಯತೇ ಪತ್ನೀ ತನಯೋಽಂಗಾರಕಃ ಸ್ಮೃತಃ ॥ ೪ ॥

ಭವ ಇತ್ಯುಚ್ಯತೇ ದೇವೋ ಭಗವಾನ್ವೇದ ವಾದಿಭಿಃ ।
ಸಂ ಜೀವನಸ್ಯ ಲೋಕಾನಾಂ ಭವಸ್ಯ ಪರಮಾತ್ಮನಃ ॥ ೫ ॥

ಉಮಾ ಸಂಕೀರ್ತಿತಾ ದೇವೀ ಸುತಃ ಶುಕ್ರಶ್ಚ ಸೂರಿಭಿಃ ।
ಸಪ್ತ ಲೋಕಾಂಡಕವ್ಯಾಪೀ ಸರ್ವ ಲೋಕೈಕ ರಕ್ಷಿತಾ ॥ ೬ ॥

ವಹ್ನ್ಯಾತ್ಮಾ ಭಗವಾನ್ದೇವಃ ಸ್ಮೃತಃ ಪಶುಪತಿ ರ್ಬುಧೈಃ ।
ಸ್ವಾಹಾ ಪತ್ನ್ಯಾತ್ಮನಸ್ತಸ್ಯ ಪ್ರೋಕ್ತಾ ಪಶುಪತೇಃ ಪ್ರಿಯಾ ॥ ೭ ॥

ಷಣ್ಮುಖೋ ಭಗವಾನ್ದೇವೋ ಬುಧೈಃ ಪುತ್ರಉದಾಹೃತಃ ।
ಸಮಸ್ತ ಭುವನವ್ಯಾಪೀ ಭರ್ತಾ ಸರ್ವ ಶರೀರಿಣಾಂ ॥ ೮ ॥

---

೪. ಧರಾತ್ಮಕನಾದ ಆಪರಬ್ರಹ್ಮನಿಗೆ ವಿಕೇಶೀ ಎಂಬುವಳು ಪತ್ನಿಯು. ಅವರ ಮಗನು ಅಂಗಾರಕನು.

೫-೬. ಸಕಲ ಲೋಕಗಳಿಗೂ ಸಂಜೀವನದಂತಿರುವ, ಪರಮಾತ್ಮನೂ, ಪೂಜ್ಯನೂ, ತೇಜೋವಂತನೂ, ಆದ ಈಶ್ವರನ ಜಲೀಯ ಮೂರ್ತಿಯನ್ನು ವೇದಜ್ಞರು ಭವ ಎಂಬುದಾಗಿ ಹೇಳುತ್ತಾರೆ. ಸಕಲ ಲೋಕಗಳನ್ನೂ ರಕ್ಷಿಸುವ, ಸಮಸ್ತಲೋಕ ವ್ಯಾಪಿಯಾದ ಉಮಾ ದೇವಿಯು ಪತ್ನಿಯು, ಶುಕ್ರನು ಮಗನೆಂದು ಹೇಳುತ್ತಾರೆ.

೭-೮. ಅಗ್ನ್ಯಾತ್ಮಕನಾದ ಪರಮಾತ್ಮನನ್ನು ಪಶುಪತಿಯೆಂದು ತಿಳಿಯುತ್ತಾರೆ. ಆ ಪಶುಪತಿಯ ಪತ್ನಿಯು ಸ್ವಾಹಾದೇವಿಯು. ಸಕಲ ಭುವನವನ್ನೂ ವ್ಯಾಪಿಸಿಕೊಂಡಿರುವ, ಸಕಲ ಪ್ರಾಣಿಗಳಿಗೂ ಒಡೆಯನಾದ ಷಣ್ಮುಖನು, ಪಶುಪತಿ ಮತ್ತು ಸ್ವಾಹಾದೇವೀ ಇವರ ಮಗನು.

ಪವನಾತ್ಮಾ ಬುಧೈರ್ದೇವ ಈಶಾನ ಇತಿ ಕೀರ್ತ್ಯತೇ ।
ಈಶಾನಸ್ಯ ಜಗತ್ಕರ್ತುರ್ದೇವಸ್ಯ ಪವನಾತ್ಮನಃ ॥ ೯ ॥
ಶಿವಾ ದೇವೀ ಬುಧೈ ರುಕ್ತಾ ಪುತ್ರಶ್ಚಾಸ್ಯ ಮನೋಜವಃ ।
ಚರಾ ಚರಾಣಾಂ ಭೂತಾನಾಂ ಸರ್ವೇಷಾಂ ಸರ್ವಕಾಮದಃ ॥೧೦॥
ವ್ಯೋಮಾತ್ಮಾ ಭಗವಾನ್ದೇವೋ ಭೀಮ ಇತ್ಯುಚ್ಯತೇ ಬುಧೈಃ ।
ಮಹಾ ಮಹಿಮ್ನೋ ದೇವಸ್ಯ ಭೀಮಸ್ಯ ಗಗನಾತ್ಮನಃ ॥೧೧॥
ದಿಶೋ ದಶ ಸ್ಮೃತಾ ದೇವ್ಯಃ ಸುತಃ ಸರ್ಗಶ್ಚ ಸೂರಿಭಿಃ ।
ಸೂರ್ಯಾತ್ಮಾ ಭಗವಾನ್ದೇವಃ ಸರ್ವೇಷಾಂ ಚ ವಿಭೂತಿದಃ ॥೧೨॥
ರುದ್ರ ಇತ್ಯುಚ್ಯತೇ ದೇವೈ ರ್ಭಗವಾನ್ ಭಕ್ತಿಮುಕ್ತಿದಃ ।
ಸೂರ್ಯಾತ್ಮಕಸ್ಯ ರುದ್ರಸ್ಯ ಭಕ್ತಾನಾಂ ಭಕ್ತಿದಾಯಿನಃ ॥೧೩॥

---

೯-೧೦. ಜ್ಞಾನಿಗಳು ಜಗತ್ಕರ್ತೃವಾದ ಪರಮಾತ್ಮನ ಪವನಾತ್ಮಕವಾದ ಮೂರ್ತಿಯನ್ನು ಈಶಾನ ಎಂಬುದಾಗಿ ಹೇಳುತ್ತಾರೆ. ಈ ಪವನಾತ್ಮಕನಾದ ಪರಮಾತ್ಮನಿಗೆ ಶಿವಾದೇವಿಯು ಪತ್ನಿಯೆಂದೂ ಸಕಲ ಪ್ರಾಣಿಗಳ ಇಚ್ಛೆಯನ್ನು ಪೂರೈಸುವವನಾದ ಆಂಜನೇಯನು (ಮನೋಜವನು) ಮಗನೆಂದು ಹೇಳುತ್ತಾರೆ.

೧೧. ಮಹಾ ಮಹಿಮಾವಂತನಾದ ಭಯಂಕರನಾದ ಪರಮಾತ್ಮನ ಗಗನಾತ್ಮಕನಾದ ಮೂರ್ತಿಯನ್ನು ಭೀಮ ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ಆ ವ್ಯೋಮ ರೂಪನಾದ ಪರಮಾತ್ಮನ ಮೂರ್ತಿಗೆ ಹತ್ತು ದಿಕ್ಕುಗಳು ಪತ್ನಿಯರು, ಸರ್ಗನೆಂಬುವನು ಮಗನು.

೧೨-೧೩. ಸೂರ್ಯಾತ್ಮಕನಾದ, ಸಕಲರಿಗೂ ಐಶ್ವರ್ಯವನ್ನು ಕೊಡುವ ಪೂಜ್ಯನಾದ ಪರಮಾತ್ಮನನ್ನು ದೇವತೆಗಳು ಅಣಿಮಾದ್ಯೈಶ್ವರ್ಯ ಯುಕ್ತನಾದ, ಇಹಪರ ಸುಖಗಳನ್ನು ಕೊಡುವ ರುದ್ರನೆಂದು ಹೇಳುತ್ತಾರೆ ಭಕ್ತರುಗಳಿಗೆ ಭಕ್ತಿಯನ್ನು ಕೊಡುವ ಸೂರ್ಯ ಸ್ವರೂಪನಾದ ರುದ್ರನಿಗೆ ಸುವರ್ಚಲೆಯು ಪತ್ನಿಯು, ಶನೈಶ್ಚರನು ಪುತ್ರನು.

ಸುವರ್ಚಲಾ ಸ್ಮೃತಾ ದೇವೀ ಸುತಶ್ಚಾಸ್ಯ ಶನೈಶ್ಚರಃ ।
ಸಮಸ್ತ ಸೌಮ್ಯವಸ್ತೂನಾಂ ಪ್ರಕೃತಿಶ್ಚೇನ ವಿಶ್ರುತಃ ॥೧೪॥

ಸೋಮಾತ್ಮಕೋ ಬುಧೈರ್ದೇವೋ ಮಹಾದೇವ ಇತಿಸ್ಮೃತಃ ।
ಸೋಮಾತ್ಮಕಸ್ಯ ದೇವಸ್ಯ ಮಹಾ ದೇವಸ್ಯ ಸೂರಿಭಿಃ ॥೧೫॥

ದಯಿತಾ ರೋಹಿಣೀ ಪ್ರೋಕ್ತಾ ಬುಧಶ್ಚೈವ ಶರೀರಜಃ ।
ಹವ್ಯ ಕವ್ಯ ಸ್ಥಿತಂ ಕುರ್ವನ್ ಹವ್ಯ ಕಾವ್ಯಾಶಿನಾಂ ತದಾ ॥೧೬॥

ಯಜಮಾನಾತ್ಮಕೋ ದೇವೋ ಮಹಾದೇವೋ ಬುಧೈಃ ಪ್ರಭುಃ ।
ಉಗ್ರ ಇತ್ಯುಚ್ಯತೇ ಸದ್ಭಿರೀಶಾನಶ್ಚೇತಿ ಚಾಪರೈಃ ॥೧೭॥

ಉಗ್ರಾಹ್ವಯಸ್ಯ ದೇವಸ್ಯ ಯಜಮಾನಾತ್ಮನಃ ಪ್ರಭೋಃ ।
ದೀಕ್ಷಾ ಪತ್ನೀ ಬುಧೈರುಕ್ತಾ ಸಂತಾನಾಖ್ಯಃ ಸುತಸ್ತಥಾ ॥೧೮॥

ಶರೀರಿಣಾಂ ಶರೀರೇಷು ಕಠಿನಂ ಕೊಂಕಣಾದಿವತ್ ।
ಪಾರ್ಥಿವಂ ತದ್ವಪು ರ್ಜ್ಞೇಯಂ ಶರ್ವ ತತ್ವಂ ಬುಭುತ್ಸುಭಿಃ ॥

---

೧೪-೧೫. ದೇವತೆಗಳು, ಜ್ಞಾನಿಗಳು, ಸಕಲ ಸೌಮ್ಯವಸ್ತುಗಳ ಪ್ರಕೃತಿಯೆಂದು ಪ್ರಸಿದ್ಧವಾಗಿರುವ ಸೋಮಾತ್ಮಕವಾದ ಈಶ್ವರನ ಶರೀರವನ್ನು ಮಹಾದೇವ, ಎಂಬುದಾಗಿ ತಿಳಿಯುತ್ತಾರೆ.

೧೬-೧೮. ಹವಿಸ್ಸನ್ನು ತಿನ್ನುವ ದೇವತೆಗಳಿಗೆ ಹವಿಸ್ಸನ್ನೂ, ಕವ್ಯಾಶಿಗಳಾದ ಪಿತೃಗಳಿಗೆ ಕವ್ಯವನ್ನು, ಕ್ರಮವಾಗಿ ಒಯ್ದು ತಲಪಿಸುವ ಯಜಮಾನ ಎಂಬ ಹೆಸರುಳ್ಳ ಮಹಾದೇವನ ಮೂರ್ತಿಯು ದೇವತೆಗಳಿಂದ ಉಗ್ರ ಎಂಬುದಾಗಿಯೂ, ಬೇರೇ ಜ್ಞಾನಿಗಳಿಂದ ಈಶಾನ ಎಂಬುದಾಗಿಯೂ, ತಿಳಿಯಲ್ಪಡುತ್ತದೆ. ಉಗ್ರ ಎಂಬುದಾಗಿ ಹೆಸರುಳ್ಳ ಯಜಮಾನಾತ್ಮಕನಾದ ಮಹಾದೇವನಿಗೆ ದೀಕ್ಷೆಯೆಂಬುವಳು ಪತ್ನಿಯು, ಸಂತಾನ ಎಂಬುವನು ಮಗನು. ಹೀಗೆ ಅಷ್ಟಮೂರ್ತಿ ಸ್ವರೂಪವನ್ನು ತಿಳಿಸಿ, ಇನ್ನು ಮುಂದೆ ಶರೀರಗಳಲ್ಲಿ ಆತತ್ವ ಸಮನ್ವಯನ್ನು ತೋರಿಸುತ್ತಾರೆ.

೧೯. ಪ್ರಾಣಿಗಳ ಶರೀರಗಳಲ್ಲಿ ಕೊಂಕಣ ದೇಶದಂತೆ ಕಠಿಣವಾದ ಪಾರ್ಥಿವ ಭಾಗವನ್ನು ಶರ್ವ ತತ್ವವೆಂಬುದಾಗಿ ಶಿವತತ್ವಸ್ವರೂಪದ ಜ್ಞಾನೇಚ್ಛುಗಳು ತಿಳಿಯಬೇಕು.

ದೇಹೇ ದೇಹೇ ತು ದೇವೇಶೋ ದೇಹಭಾಜಾಂ ಯದವ್ಯಯಂ ।
ವಸ್ತು ದ್ರವ್ಯಾತ್ಮಕಂ ತಸ್ಯ ಭವಸ್ಯ ಪರಮಾತ್ಮನಃ ॥೨೦॥

ಜ್ಞೇಯಂ ಚ ತತ್ವ ವಿದ್ಭಿರ್ವೈ ಸರ್ವ ವೇದಾರ್ಥಪಾರಗೈಃ ।
ಆಗ್ನೇಯಃ ಪರಿಣಾಮೋ ಯೋ ವಿಗ್ರಹೇಷು ಶರೀರಿಣಾಂ ॥೨೧॥

ಮೂರ್ತಿಃ ಪಶುಪತಿ ಜ್ಞೇಯಾ ಸಾ ತತ್ವಂ ವೇತ್ತು ಮಿಚ್ಛುಭಿಃ ।
ವಾಯವ್ಯಃ ಪರಿಣಾಮೋ ಯಃ ಶರೀರೇಷು ಶರೀರಿಣಾಂ ॥೨೨॥

ಬುಧೈರೀಶೇತಿ ಸಾ ತಸ್ಯ ತನುರ್ಜ್ಞೇಯಾ ನ ಸಂಶಯಃ ।
ಸುಷಿರಂ ಯಚ್ಛರೀರಸ್ಥ ಮಶೇಷಾಣಾಂ ಶರೀರಿಣಾಂ ॥೨೩॥

ಭೀಮಸ್ಯ ಸಾ ತನುರ್ಜ್ಞೇಯಾ ತತ್ವ ವಿಜ್ಞಾನ ಕಾಂಕ್ಷಿಭಿಃ ।
ಚಕ್ಷುರಾದಿ ಗತಂ ತೇಜೋ ಯಚ್ಛರೀರಸ್ಥ ಮಂಗಿನಾಂ ॥೨೪॥

---

೨೦. ಪ್ರಾಣಿಗಳ ಪ್ರತಿದೇಹದಲ್ಲಿಯೂ, ನಾಶರಹಿತವಾದ, ಜಲಾತ್ಮಕವಾದ ವಸ್ತುವು ಜಗದೀಶನಾದ ಭವನ ತತ್ವವೆಂಬುದಾಗಿ ಸಕಲ ವೇದಾರ್ಥಪಾರಂಗತರಾದ ತತ್ವಜ್ಞಾನಿಗಳು ತಿಳಿಯ ಬೇಕು.

೨೧. ಪ್ರಾಣಿಗಳ ಶರೀರದಲ್ಲಿರುವ ಜಠರಾಗ್ನಿಯೇ ಪಶುಪತಿ ಸಂಬಂಧವಾದ ತತ್ವವೆಂದು ತತ್ವವನ್ನು ತಿಳಿಯ ಲಿಚ್ಛೆಯುಳ್ಳವರು ತಿಳಿಯಬೇಕು.

೨೨. ಜ್ಞಾನಿಗಳು ಪ್ರಾಣಿಗಳ ಶರೀರಗಳಲ್ಲಿ ವಾಯು ಸಂಬಂಧವಾದ ಕೆಲಸಗಳೆಲ್ಲವನ್ನೂ ಈಶನೆಂಬ ಆ ಪರಮಾತ್ಮನ ತತ್ವವೆಂಬುದಾಗಿ ಊಹಿಸಬೇಕು.

೨೩. ಎಲ್ಲಾ ಪ್ರಾಣಿಗಳ ಶರೀರದಲ್ಲಿರುವ ರಂಧ್ರವು ಪರಮಾತ್ಮನ ಭೀಮ ಮೂರ್ತಿಯ ತತ್ವವೆಂದು ತತ್ವಜ್ಞಾನಾಪೇಕ್ಷಿಗಳು ತಿಳಿಯಬೇಕು.

೨೪. ಪರಮ ತತ್ವವನ್ನು ತಿಳಿಯ ಲಪೇಕ್ಷೆಯುಳ್ಳವರು ಪ್ರಾಣಿಗಳ ಶರೀರದಲ್ಲಿ ನೇತ್ರಾದಿಗಳಲ್ಲಿರುವ ತೇಜಸ್ಸನ್ನು ಪರಮಾತ್ಮನಾದ ರುದ್ರನ ತತ್ವವೆಂದು ತಿಳಿಯಬೇಕು.

ರುದ್ರಸ್ಯಾಪಿ ತನುರ್ಜ್ಞೇಯಾ ಪರಮಾರ್ಥಂ ಬುಭುತ್ಸುಭಿಃ ।
ಸರ್ವ ಭೂತ ಶರೀರೇಷು ಮನಶ್ಚಂದ್ರಾತ್ಮಕಂ ಹಿ ಯತ್ ॥೨೫॥

ಮಹಾದೇವಸ್ಯ ಸಾ ಮೂರ್ತಿ ರ್ಬೋದ್ಧವ್ಯಾ ತತ್ತ್ವಚಿಂತಕೈಃ ।
ಆತ್ಮಾ ಯೋ ಯಜಮಾನಾಖ್ಯಃ ಸರ್ವಭೂತ ಶರೀರಗಃ ॥೨೬॥

ಮೂರ್ತಿ ರುಗ್ರಸ್ಯ ಸಾ ಜ್ಞೇಯಾ ಪರಮಾತ್ಮಬುಭುತ್ಸುಭಿಃ ।
ಜಾತಾನಾಂ ಸರ್ವಭೂತಾನಾಂ ಚತುರ್ದಶಸು ಯೋನಿಷು ॥೨೭॥

ಅಷ್ಟಮೂರ್ತೇ ರನನ್ಯತ್ವಂ ವದಂತಿ ಪರಮರ್ಷಯಃ ।
ಸಪ್ತಮೂರ್ತಿ ಮಯಾ ನ್ಯಾಹು ರೀಶಸ್ಯಾಂಗಾನಿ ದೇಹಿನಾಂ ॥೨೮॥

ಆತ್ಮಾ ತಸ್ಯಾಷ್ಟಮೀ ಮೂರ್ತಿ ಸ್ಸರ್ವಭೂತ ಶರೀರಗಾ ।
ಅಷ್ಟಮೂರ್ತಿ ಮಮುಂ ದೇವಂ ಸರ್ವ ಲೋಕಾತ್ಮಕಂ ವಿಭುಂ ॥

---

೨೫. ಸಕಲ ಪ್ರಾಣಿಗಳ ಶರೀರದಲ್ಲಿ ಮನಸ್ಸು ಚಂದ್ರಾತ್ಮಕವಾದುದು. ಅದು ಚಂದ್ರಾತ್ಮಕನಾದ ಮಹಾದೇವನ ತತ್ತ್ವವೆಂದು ತತ್ತ್ವವನ್ನು ತಿಳಿಯಲಪೇಕ್ಷೆಯುಳ್ಳವರು ಧ್ಯಾನಿಸಬೇಕು.

೨೬. ಯಜಮಾನ ಎಂದು ಪ್ರಸಿದ್ಧವಾಗಿರುವ, ಸಕಲ ಪ್ರಾಣಿಗಳ ಶರೀರದಲ್ಲೂ ಇರುವ, ಆತ್ಮನು ಪರಮಾತ್ಮನಾದ ಉಗ್ರನ ಮೂರ್ತಿಯೆಂದು ಪರಮಾತ್ಮತತ್ತ್ವವನ್ನು ತಿಳಿಯಲಪೇಕ್ಷೆಯುಳ್ಳವರು ಮನಗಾಣಬೇಕು.

೨೭. ಹದಿನಾಲ್ಕು ಯೋನಿಗಳಲ್ಲಿ ಉತ್ಪನ್ನವಾದ ಸಕಲ ಜಂತುಗಳ ಶರೀರದಲ್ಲಿ ಪರಮಾತ್ಮನು ಮೇಲೆ ಹೇಳಿದ ಅಷ್ಟಮೂರ್ತಿಗಳ ಅಭೇದವು ಇರುವುದೆಂದು ಋಷಿಶ್ರೇಷ್ಠರು ಹೇಳುತ್ತಾರೆ.

೨೮. ಪ್ರಾಣಿಗಳ ಅವಯವಗಳನ್ನು ಪರಮಾತ್ಮನ ಸಪ್ತ ಮೂರ್ತಿ ಸ್ವರೂಪಗಳೆಂದು ಪ್ರಾಜ್ಞರು ಹೇಳುತ್ತಾರೆ. ಸಕಲ ಪ್ರಾಣಿಗಳ ಶರೀರದಲ್ಲೂ ವ್ಯಾಪಿಸಿರುವ ಆತ್ಮನೇ ಆ ಪರಮಾತ್ಮನ ಎಂಟನೆಯ ಮೂರ್ತಿಯು.

೨೯. ಸಕಲ ರೂಪದಿಂದಲೂ ಅಭಿವೃದ್ಧಿಯನ್ನು ಹೊಂದಲು ಅಪೇಕ್ಷಿಸುವೆಯಾದರೆ, ಎಲೈ ಸನತ್ಕುಮಾರನೇ, ಅಷ್ಟ ಮೂರ್ತ್ಯಾತ್ಮಕನೂ ಸರ್ವಲೋಕ ಸ್ವರೂಪನೂ, ವಿಭುವೂ ಆದ ದೇವನನ್ನು ಸರ್ವ ಸ್ವರೂಪನೆಂದು ಭಾವಿಸುತ್ತಾ ಸೇವಿಸು.

ಭಜಸ್ವ ಸರ್ವಭಾವೇನ ಶ್ರೇಯಃ ಪ್ರಾಪ್ತುಂ ಯದೀಚ್ಛಸಿ ।
ಪ್ರಾಣಿನೋ ಯಸ್ಯ ಕಸ್ಯಾಪಿ ಕ್ರಿಯತೇ ಯದ್ಯನುಗ್ರಹಃ ॥೩೦॥
ಅಷ್ಟಮೂರ್ತೇ ರ್ಮಹೇಶಸ್ಯ ಕೃತ ಮಾರಾಧನಂ ಭವೇತ್ ।
ನಿಗ್ರಹಶ್ಚೇತ್ ಕೃತೋ ಲೋಕೇ ದೇಹಿನೋ ಯಸ್ಯ ಕಸ್ಯಚಿತ್ ॥
ಅಷ್ಟಮೂರ್ತೇ ರ್ಮಹೇಶಸ್ಯ ಸ ಏವ ವಿಹಿತೋ ಭವೇತ್ ।
ಯದ್ಯವಜ್ಞಾ ಕೃತಾ ಲೋಕೇ ಯಸ್ಯ ಕಸ್ಯಚಿದಂಗಿನಃ ॥೩೨॥
ಅಷ್ಟಮೂರ್ತೇ ರ್ಮಹೇಶಸ್ಯ ವಿಹಿತಾ ಸಾ ಭವೇದ್ವಿಭೋಃ ।
ಅಭಯಂ ಯತ್ ಪ್ರದತ್ತಂ ಸ್ಯಾದಂಗಿನೋ ಯಸ್ಯಕಸ್ಯಚಿತ್ ॥೩೩॥
ಆರಾಧನಂ ಕೃತಂ ತಸ್ಮಾದಷ್ಟಮೂರ್ತೇ ರ್ನ ಸಂಶಯಃ ।
ಸರ್ವೋಪ ಕಾರ ಕರಣಂ ಪ್ರದಾನ ಮಭಯಸ್ಯ ಚ ॥೩೪॥

---

೩೦. ಯಾವುದಾದರೂ ಪ್ರಾಣಿಗೆ ಅನುಗ್ರಹ ಮಾಡುವುದೇ ಆದರೆ ಅದು ಅಷ್ಟಮೂರ್ತ್ಯಾತ್ಮಕನಾದ ಮಹೇಶನ ಅರ್ಚನೆಯೇ ಆಗುವುದು.

೩೧. ಪ್ರಪಂಚದಲ್ಲಿ ಯಾವುದಾದರೂ ಜಂತುವಿಗೆ ಏನನ್ನಾದರೂ ಶಿಕ್ಷೆಯನ್ನು ಮಾಡಿದ್ದೇ ಆದರೆ ಅದು, ಅಷ್ಟಮೂರ್ತ್ಯಾತ್ಮಕನಾದ ಪರಮಾತ್ಮನಿಗೆ ಮಾಡಿದ ಶಿಕ್ಷೆ ಯಂತೆ ಪಾಪಕರವಾಗುತ್ತದೆ.

೩೨. ಪ್ರಪಂಚದಲ್ಲಿ ಯಾವುದಾದರೂ ಒಂದು ಪ್ರಾಣಿಗೆ ಅವ ಮಾನವುಮಾಡಲ್ಪಟ್ಟರೆ ಅದು ಅಷ್ಟಮೂರ್ತ್ಯಾತ್ಮಕನಾದ ಜಗದೀಶನ ವಿಷಯದಲ್ಲಿ ಮಾಡಲ್ಪಟ್ಟ ಅವಮಾನದಂತೆ ಆಗುತ್ತದೆ.

೩೩. ಭಯಪೀಡಿತವಾದ ಯಾವುದಾದರೂ ಪ್ರಾಣಿಗೆ ಅಭಯ ಕೊಟ್ಟು ಸಹಾಯಮಾಡಿದರೆ ಅದು ಅಷ್ಟಮೂರ್ತ್ಯಾತ್ಮಕನಾದ ಆ ಪರ ಮಾತ್ಮನ ಪೂಜೆಮಾಡಿದಂತೆ ಪುಣ್ಯಕರವಾಗುತ್ತದೆ. ಇದರಲ್ಲಿ ಸಂಶಯ ಪಡಬೇಕಾಗಿಲ್ಲವು.

೩೪. ಕಷ್ಟದಲ್ಲಿರುವ ಜಂತುಗಳಿಗೆ ಸಹಾಯಮಾಡುವುದು, ಭಯ ಗ್ರಸ್ತರಾದವರಿಗೆ ಅಭಯಕೊಟ್ಟು ಅವರ ನೆರವಿಗೆನಿಲ್ಲುವುಇವೂ ಅದುಷ್ಟ, ಮೂರ್ತ್ಯಾತ್ಮಕನಾದ ಪರಮಾತ್ಮನ ಪೂಜೆಯೆಂಬುದರಲ್ಲಿ ಸಂಶಯವಿಲ್ಲವು.

ಆರಾಧನಂ ತು ದೇವಸ್ಯ ಅಷ್ಟಮೂರ್ತೇರ್ನ ಸಂಶಯಃ ।
ಸರ್ವೋಪಕಾರ ಕರಣಂ ಸರ್ವಾನುಗ್ರಹ ಏವ ಚ ॥೩೫॥
ತದರ್ಚನಂ ಪರಂ ಪ್ರಾಹು ರಷ್ಟಮೂರ್ತೇಃ ಮುನೀಶ್ವರಾಃ ।
ಅನುಗ್ರಹಣ ಮನ್ಯೇಷಾಂ ವಿಧಾತವ್ಯಂ ತ್ವಯಾಽಂಗಿನಾಂ ।
ಸರ್ವಾಭಯ ಪ್ರದಾನಂ ಚ ಶಿವಾರಾಧನ ಮಿಚ್ಛತಾ ॥೩೬॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ತ್ರಯೋದಶೋಽಧ್ಯಾಯಃ

---

೩೫. ಸಕಲರಿಗೂ ಉಪಕಾರಮಾಡುವುದು, ಸಕಲರ ಹಿತವನ್ನು ಕೋರುವುದು, ಇವೂ ಅಷ್ಟಮೂರ್ತ್ಯಾತ್ಮಕನಾದ ಆ ಪರಮಾತ್ಮನ ಶ್ರೇಷ್ಠವಾದ ಸೇವೆಯೆಂದು ಮುನಿಶ್ರೇಷ್ಠರು ತಿಳಿಯುತ್ತಾರೆ.

೩೬. ಅಷ್ಟಮೂರ್ತ್ಯಾತ್ಮಕನಾದ ಆ ಪರಮಾತ್ಮನ ಸೇವೆಯನ್ನು ಅಪೇಕ್ಷಿಸುತ್ತಿರುವ ಜ್ಞಾನಿಯಾದ ನೀನು ಅಖಿಲ ಪ್ರಾಣಿಗಳಹಿತವನ್ನೂ, ಸಕಲರಿಗೂ ಅಭಯ ಕೊಡುವುದರ ಮೂಲಕ ಭಯ ನಿವಾರಣೆಯನ್ನೂ ಮಾಡಬೇಕು. ಇದು ಶಿವನ ಆರಾಧನೆಯೇ ಆಗುತ್ತದೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿಮೂರನೆಯ
ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
चतुर्दशोऽध्यायः

॥ सनत्कुमार उवाच ॥

ಪಂಚ ಬ್ರಹ್ಮಾಣಿ ಮೇ ನಂದಿ ನ್ನಾಚಕ್ಷ್ವ ಗಣಸತ್ತಮ ।
ಶ್ರೇಯಃ ಕಾರಣ ಭೂತಾನಿ ಪವಿತ್ರಾಣಿ ಶರೀರಿಣಾಂ ॥ ೧ ॥

॥ ನಂದೀಶ್ವರ ಉವಾಚ ॥

ಶಿವಸ್ಯೈವ ಸ್ವರೂಪಾಣಿ ಪಂಚ ಬ್ರಹ್ಮಾಹ್ವಯಾನಿ ತೇ ।
ಕಥಯಾಮಿ ಯಥಾ ತತ್ವಂ ಪದ್ಮಯೋನೇಃ ಸುತೋತ್ತಮ ॥ ೨ ॥

ಸರ್ವ ಲೋಕೈಕ ಸಂಹರ್ತಾ ಸರ್ವ ಲೋಕೈಕ ರಕ್ಷಿತಾ ।
ಸರ್ವ ಲೋಕೈಕ ನಿರ್ಮಾತಾ ಪಂಚ ಬ್ರಹ್ಮಾತ್ಮಕ ಶ್ಶಿವಃ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನಾಲ್ಕನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :—ಪ್ರಮಥಗಣಗಳಲ್ಲಿ ಮುಖ್ಯನಾದ ಓ ನಂದಿಯೇ, ಜೀವರುಗಳ ಶ್ರೇಯಸ್ಸಿಗೆ ಕಾರಣಗಳಾಗಿರುವ ಮತ್ತು ಪರಿಶುದ್ಧವಾದ ಪಂಚ ಬ್ರಹ್ಮಾಖ್ಯವಾದ ರೂಪಗಳನ್ನು ತಿಳಿಸುವವನಾಗು.

೨. ನಂದಿಕೇಶ್ವರನು ಹೇಳಿದನು :—ಬ್ರಹ್ಮನ ಪುತ್ರಶ್ರೇಷ್ಠನೇ, ಪಂಚ ಬ್ರಹ್ಮವೆಂಬ ಹೆಸರುಳ್ಳ ಶಿವನದೇ ಆದ ರೂಪಗಳನ್ನು ತತ್ತ್ವಾನುಸಾರವಾಗಿ ನಿನಗೆ ಹೇಳುತ್ತೇನೆ.

೩. ಪಂಚ ಬ್ರಹ್ಮಸ್ವರೂಪನಾದ ಶಿವನು ಸಕಲ ಪ್ರಪಂಚಗಳ ನಾಶಕನೂ, ಪೋಷಕನೂ, ಸೃಷ್ಟಿಕರ್ತನೂ ಒಬ್ಬನೇ ಆಗಿರುತ್ತಾನೆ.

ಸರ್ವೇಷಾ ಮೇವ ಲೋಕಾನಾಂ ಯದುಪಾದಾನ ಕಾರಣಂ ।
ನಿಮಿತ್ತ ಕಾರಣಂ ಚಾಹು ಸ್ಸ ಶಿವಃ ಪಂಚಧಾ ಸ್ಮೃತಃ ॥ ೪ ॥
ಮೂರ್ತಯಃ ಪಂಚ ವಿಖ್ಯಾತಾಃ ಪಂಚ ಬ್ರಹ್ಮಾಹ್ವಯಾಃ ಪರಾಃ ।
ಸರ್ವ ಲೋಕ ಶರಣ್ಯಸ್ಯ ಶಿವಸ್ಯ ಪರಮಾತ್ಮನಃ ॥ ೫ ॥
ಕ್ಷೇತ್ರಜ್ಞಃ ಪ್ರಥಮಾ ಮೂರ್ತಿಃ ಶಿವಸ್ಯ ಪರಮೇಷ್ಠಿನಃ ।
ಭೋಕ್ತಾ ಪ್ರಕೃತಿ ವರ್ಗಸ್ಯ ಭೋಗ್ಯ ಸ್ಯೇಶಾನ ಸಂಜ್ಞಿತಃ ॥ ೬ ॥
ಸ್ಥಾಣೋಃ ತತ್ಪುರುಷಾಖ್ಯಾ ಚ ದ್ವಿತೀಯಾ ಮೂರ್ತಿ ರುಚ್ಯತೇ ।
ಪ್ರಕೃತಿಃ ಸಾ ಹಿ ವಿಜ್ಞೇಯಾ ಪರಮಾತ್ಮ ಗುಹಾತ್ಮಿಕಾ ॥ ೭ ॥
ಅಘೋರಾಖ್ಯಾ ತೃತೀಯಾ ಚ ಶಂಭೋಃ ಮೂರ್ತಿರ್ಗರೀಯಸೀ ।
ಬುದ್ಧೇಃ ಸಾ ಮೂರ್ತಿ ರಿತ್ಯುಕ್ತಾ ಧರ್ಮಾ ದ್ಯಷ್ಟಾಂಗ ಸಂಯುತಾ ॥

---

೪. ಸಕಲ ಪ್ರಪಂಚದ ಉತ್ಪತ್ತಿಗೆ ಅವಶ್ಯಕವಾದ ಉಪಾದಾನ ಕಾರಣವೂ, ನಿಮಿತ್ತ ಕಾರಣವೂ ಆದ ಆ ಪರಶಿವನು ಐದು ಪ್ರಕಾರವಾಗಿರುತ್ತಾನೆ.

೫. ಸಕಲ ಲೋಕಗಳಿಗೂ ರಕ್ಷಕನಾದ ಪರಮಾತ್ಮನ ಶ್ರೇಷ್ಠವಾದ ಐದು ಮೂರ್ತಿಗಳು, ಪಂಚ ಬ್ರಹ್ಮ, ಎಂಬುದಾಗಿ ಪ್ರಸಿದ್ಧವಾಗಿರುತ್ತವೆ.

೬. ಅನುಭವಿಸಲರ್ಹವಾದ ಪ್ರಕೃತಿ ವರ್ಗದ ಅನುಭವಿಯಾಗಿರುವ ಕ್ಷೇತ್ರಜ್ಞನಾದ ಆತ್ಮನಿಗೆ ಈಶಾನ ಎಂದು ಹೆಸರು. ಈ ರೂಪವು ಪರಬ್ರಹ್ಮನಾದ ಶಿವನ ಮೊದಲನೆಯ ಮೂರ್ತಿಯು.

೭. ತತ್ಪುರುಷ ಎಂದು ಪ್ರಸಿದ್ಧವಾಗಿರುವುದು ಈಶ್ವರನ ಎರಡನೆಯ ಮೂರ್ತಿಯು. ಅದು ಪರಮಾತ್ಮನ ಮುಖ್ಯಾಧಾರವಾದ ಪ್ರಕೃತಿಯೆಂದು ತಿಳಿಯಬೇಕು.

೮. ಮೂರನೆಯದಾದ ಅಘೋರ ಎಂಬ ಶಂಭುವಿನ ಮೂರ್ತಿಯು

ಚತುರ್ಥೀ ವಾಸುದೇವಾಖ್ಯಾ ಮೂರ್ತಿಃ ಶಂಭೋರ್ಗರೀಯಸೀ ।
ಅಹಂಕಾರಾತ್ಮಕತ್ವೇನ ವ್ಯಾಪ್ಯ ಸರ್ವಂ ವ್ಯವಸ್ಥಿತಾ ॥ ೯ ॥
ಸದ್ಯೋ ಜಾತಾಹ್ವಯಾ ಶಂಭೋಃ ಪಂಚಮೀ ಮೂರ್ತಿರುಚ್ಯತೇ ।
ಮನಸ್ತತ್ತ್ವಾತ್ಮಕತ್ವೇನ ಸ್ಥಿತಾ ಸರ್ವ ಶರೀರಿಷು ॥೧೦॥
ಈಶಾನಃ ಪರಮೋ ದೇವಃ ಪರಮೇಷ್ಠೀ ಸನಾತನಃ ।
ಶ್ರೋತ್ರೇಂದ್ರಿಯಾತ್ಮಕತ್ವೇನ ಸರ್ವಭೂತೇಷ್ವವಸ್ಥಿತಃ ॥೧೧॥
ಸ್ಥಿತಸ್ತತ್ಪುರುಷೋ ದೇವಃ ಶರೀರಿಷು ಶರೀರಿಣಾಂ ।
ತ್ವಗಿಂದ್ರಿಯಾತ್ಮಕತ್ವೇನ ತತ್ತ್ವವಿದ್ಭಿ ರುದಾಹೃತಃ ॥೧೨॥

---

ಶ್ರೇಷ್ಠವಾದುದು. ಧರ್ಮವೇ ಮೊದಲಾದ ಅಷ್ಟಾಂಗಗಳಿಂದ ಕೂಡಿದ ಆ ಮೂರ್ತಿಯು ಬುದ್ಧಿ ಸಂಬಂಧಿಯಾದುದೆಂದು ಹೇಳುತ್ತಾರೆ.

೯. ಶಂಭುವಿನ ನಾಲ್ಕನೆಯ ಮೂರ್ತಿಯಾದ ವಾಸುದೇವ ಎಂಬುದು ಮಿಗಿಲಾದುದು. ಅದು ಅಹಂಕಾರ ರೂಪದಿಂದ ಸಕಲವನ್ನೂ ವ್ಯಾಪಿಸಿಕೊಂಡು ಇರುತ್ತದೆ.

೧೦. ಈಶ್ವರನ ಐದನೆಯದಾದ ಸದ್ಯೋಜಾತ ಎಂದು ಪ್ರಸಿದ್ಧವಾದ ಮೂರ್ತಿಯು ಮನಸ್ಸಿನ ತತ್ವರೂಪದಿಂದ ಸಕಲ ಪ್ರಾಣಿಗಳಲ್ಲೂ ಇರುತ್ತದೆಯೆಂದು ಹೇಳುತ್ತಾರೆ.

೧೧. ಪರಬ್ರಹ್ಮನೂ, ಪುರಾತನನೂ, ಪರಪುರುಷನೂ ಆದ ಈಶಾನ ಮೂರ್ತಿಯು ಶ್ರವಣೇಂದ್ರಿಯ ರೂಪದಿಂದ ಸಕಲ ಜಂತುಗಳ ಶರೀರದಲ್ಲೂ ಇರುತ್ತಾನೆ.

೧೨. ಸ್ಪರ್ಶೇಂದ್ರಿಯ ರೂಪದಿಂದ ದೇಹಗಳಲ್ಲಿರುವ ತತ್ಪುರುಷನೆಂಬ ಮೂರ್ತಿಯು ಸಕಲ ಪ್ರಾಣಿಗಳ ಶರೀರದಲ್ಲಿಯೂ ಇರುತ್ತದೆಯೆಂದು ತತ್ವಜ್ಞಾನಿಗಳು ಹೇಳುತ್ತಾರೆ.

ಅಘೋರೋಽಪಿ ಮಹಾದೇವಃ ಚಕ್ಷುರಾತ್ಮತಯಾ ಬುಧೈಃ ।
ಕೀರ್ತಿತಃ ಸರ್ವ ಭೂತಾನಾಂ ಶರೀರೇಷು ವ್ಯವಸ್ಥಿತಃ ॥೧೩॥
ಜಿಹ್ವೇಂದ್ರಿಯಾತ್ಮಕ ತ್ವೇನ ವಾಮದೇವೋಽಪಿ ವಿಶ್ರುತಃ ।
ಅಂಗ ಭಾಜಾ ಮಶೇಷಾಣಾಂ ಅಂಗೇಷು ಪರಿಧಿಷ್ಠಿತಃ ॥೧೪॥
ಘ್ರಾಣೇಂದ್ರಿಯಾತ್ಮಕ ತ್ವೇನ ಸದ್ಯೋಜಾತಃ ಸ್ಮೃತೋ ಬುಧೈಃ ।
ಪ್ರಾಣ ಭಾಜಾಂ ಸಮಸ್ತಾನಾಂ ವಿಗ್ರಹೇಷು ವ್ಯವಸ್ಥಿತಃ ॥೧೫॥
ಸರ್ವೇಷ್ವೇವ ಶರೀರೇಷು ಪ್ರಾಣ ಭಾಜಾಂ ಪ್ರತಿಷ್ಠಿತಃ ।
ವಾಗಿಂದ್ರಿಯಾತ್ಮಕ ತ್ವೇನ ಬುಧೈರೀಶಾನ ಉಚ್ಯತೇ ॥೧೬॥
ಪಾಣೀಂದ್ರಿಯಾತ್ಮಕ ತ್ವೇನ ಸ್ಥಿತಸ್ತತ್ಪುರುಷೋ ಬುಧೈಃ ।
ಉಚ್ಯತೇ ವಿಗ್ರಹೇ ಷ್ವೇವ ಸರ್ವ ವಿಗ್ರಹಧಾರಿಣಾಂ ॥೧೭॥

---

೧೩. ಮಹಾದೇವನಾದ ಅಘೋರ ಮೂರ್ತಿಯು ತೈಜಸೇಂದ್ರಿಯ ರೂಪದಿಂದ ಸಕಲ ಪ್ರಾಣಿಗಳ ಶರೀರದಲ್ಲಿಯೂ ಇರುತ್ತಾನೆಂಬುದಾಗಿ ವಿದ್ವಾಂಸರು ಹೇಳುತ್ತಾರೆ.

೧೪. ವಾಮದೇವ ಮೂರ್ತಿಯು ಸಕಲ ಜಂತುಗಳ ಅವಯವಗಳಲ್ಲಿ ರಸನೇಂದ್ರಿಯ ರೂಪದಿಂದ ಇರುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ.

೧೫. ಸಕಲ ಜೀವರುಗಳ ಶರೀರಗಳಲ್ಲಿ ಸದ್ಯೋಜಾತ ಮೂರ್ತಿಯು ನಾಸಿಕಾರೂಪದಿಂದ ಇರುತ್ತಾನೆಂದು ಜ್ಞಾನಿಗಳುಹೇಳುತ್ತಾರೆ.

೧೬. ಸಕಲ ಪ್ರಾಣಿಗಳ ಶರೀರಗಳಲ್ಲಿ ಈಶಾನ ಮೂರ್ತಿಯು ಕರ್ಮೇಂದ್ರಿಯಗಳಲ್ಲಿ ವಾಗ್ರೂಪದಿಂದಿರುತ್ತಾನೆಂದೂ, ವಿದ್ವಾಂಸರು ಹೇಳುತ್ತಾರೆ.

೧೭. ತತ್ಪುರುಷ ಮೂರ್ತಿಯು ಕರ್ಮೇಂದ್ರಿಯವಾದ ಪಾಣಿ ರೂಪದಿಂದ ಸರ್ವ ಪ್ರಾಣಿಗಳ ಶರೀರಗಳಲ್ಲೂ ಇರುತ್ತಾನೆಂದು ಜ್ಞಾನಿಗಳು ತಿಳಿಯುತ್ತಾರೆ.

ಸರ್ವ ವಿಗ್ರಹಿಣಾಂ ದೇಹೇ ಹ್ಯಘೋರೋಽಪಿ ವ್ಯವಸ್ಥಿತಃ ।
ಪಾದೇಂದ್ರಿಯಾತ್ಮಕ ತ್ವೇನ ಕೀರ್ತಿತ ಸ್ತತ್ವ ವೇದಿಭಿಃ ॥೧೮॥

ಪಾಯ್ವಿಂದ್ರಿಯಾತ್ಮಕ ತ್ವೇನ ವಾಮದೇವೋ ವ್ಯವಸ್ಥಿತಃ ।
ಸರ್ವ ಭೂತ ನಿಕಾಯಾನಾಂ ಕಾಯೇಷು ಮುನಿಭಿಃ ಸ್ಮೃತಃ ॥೧೯॥

ಉಪಸ್ಥಾತ್ಮತಯಾ ದೇವ ಸ್ಸದ್ಯೋಜಾತಃ ಸ್ಥಿತಃ ಪ್ರಭುಃ ।
ಇಷ್ಯತೇ ವೇದ ಶಾಸ್ತ್ರಜ್ಞೈಃ ದೇಹೇಷು ಪ್ರಾಣಧಾರಿಣಾಂ ॥೨೦॥

ಈಶಾನಂ ಪ್ರಾಣಿನಾಂ ದೇವಂ ಶಬ್ದ ತನ್ಮಾತ್ರ ರೂಪಿಣಂ ।
ಆಕಾಶ ಜನಕಂ ಪ್ರಾಹುಃ ಮುನಿ ವೃಂದಾರಕ ಪ್ರಜಾಃ ॥೨೧॥

ಪ್ರಾಹುಸ್ತತ್ಪುರುಷಂ ದೇವಂ ಸ್ಪರ್ಶತನ್ಮಾತ್ರಕಾತ್ಮಕಂ ।
ಸಮೀರ ಜನಕಂ ಪ್ರಾಹು ರ್ಭಗವಂತಂ ಮುನೀಶ್ವರಾಃ ॥೨೨॥

---

೧೮. ಪ್ರಾಣಿಗಳೆಲ್ಲರ ದೇಹಗಳಲ್ಲಿ ಅಘೋರಮೂರ್ತಿಯು ಪಾದೇಂದ್ರಿಯ ರೂಪದಿಂದ ಇರುತ್ತಾನೆಂದು ತತ್ವವನ್ನು ತಿಳಿದಿರುವವರು ಹೇಳುತ್ತಾರೆ.

೧೯. ಸಕಲ ಪ್ರಾಣಿ ಸಮೂಹಗಳ ಶರೀರಗಳಲ್ಲಿ ಪಾಯ್ವಿಂದ್ರಿಯ ರೂಪದಿಂದ ವಾಮದೇವ ಮೂರ್ತಿಯು ಇರುತ್ತಾನೆಂದು ಋಷಿಗಳು ತಿಳಿಯುತ್ತಾರೆ.

೨೦. ಪ್ರಭುವಾದ ಸದ್ಯೋಜಾತ ಮೂರ್ತಿಯು ಜೀವರುಗಳ ಶರೀರಗಳಲ್ಲಿ ಉಪಸ್ಥೇಂದ್ರಿಯ ರೂಪದಿಂದ ಇರುತ್ತದೆಂದು ವೇದ ಮತ್ತು ಶಾಸ್ತ್ರಗಳನ್ನು ತಿಳಿದಿರುವವರು ಹೇಳುತ್ತಾರೆ.

೨೧. ಶಬ್ದರೂಪಿಯಾದ ಈಶಾನ ಮೂರ್ತಿಯನ್ನು ಋಷಿಗಳೂ ದೇವತೆಗಳೂ, ಸಕಲರೂ ಆಕಾಶಕ್ಕೆ ಕಾರಣವಾದ ಜನಕನನ್ನಾಗಿ ಹೇಳುತ್ತಾರೆ.

೨೨. ಸ್ಪರ್ಶ ಗುಣಾತ್ಮಕವಾದ ತತ್ಪುರುಷ ಮೂರ್ತಿಯನ್ನು ಮುನಿ ಶ್ರೇಷ್ಠರು ವಾಯು ಜನಕನನ್ನಾಗಿ ಹೇಳುತ್ತಾರೆ.

ರೂಪ ತನ್ಮಾತ್ರಕಂ ದೇವ ಮಘೋರಮಪಿ ಘೋರಕಂ ।
ಪ್ರಾಹು ರ್ವೇದ ವಿದೋ ಮುಖ್ಯಾ ಜನಕಂ ಜಾತವೇದಸಃ ॥೨೩॥
ರಸ ತನ್ಮಾತ್ರ ರೂಪತ್ವಾತ್ ಪ್ರಥಿತಂ ತತ್ತ್ವ ವೇದಿನಃ ।
ವಾಮದೇವ ಮಪಾಂ ಪ್ರಾಹು ರ್ಜನಕತ್ವೇನ ಸಂಸ್ಥಿತಂ ॥೨೪॥
ಸದ್ಯೋಜಾತಂ ಮಹಾದೇವಂ ಗಂಧ ತನ್ಮಾತ್ರ ರೂಪಿಣಂ ।
ಭೂಮ್ಯಾತ್ಮಾನಂ ಪ್ರಶಂಸಂತಿ ಸರ್ವ ತತ್ತ್ವಾರ್ಥವೇದಿನಃ ॥೨೫॥
ಆಕಾಶಾತ್ಮಾನ ಮೀಶಾನ ಮಾದಿದೇವಂ ಮುನೀಶ್ವರಾಃ ।
ಪರಮೇಣ ಮಹತ್ವೇನ ಸಂಭೂತಂ ಪ್ರಾಹುರದ್ಭುತಂ ॥೨೬॥
ಪ್ರಭುಂ ತತ್ಪುರುಷಂ ದೇವಂ ಪವನಂ ಪವನಾತ್ಮಕಂ ।
ಸಮಸ್ತ ಲೋಕವ್ಯಾಪಿತ್ವಾ ತ್ಪ್ರಥಿತಂ ಸೂರಯೋ ವಿದುಃ ॥೨೭॥

---

೨೩. ರೂಪ ತನ್ಮಾತ್ರಸ್ವರೂಪವಾದ ಅಘೋರ ಮೂರ್ತಿಯು ತೇಜಸ್ಸಿಗೆ ವಿಶೇಷ ಕಾರಣವಾದ ಜನಕನೆಂಬುದಾಗಿ ವೇದವನ್ನು ಬಲ್ಲವರಲ್ಲಿ ಮುಖ್ಯರು ಹೇಳುತ್ತಾರೆ.

೨೪. ರಸಾತ್ಮಕನಾದ ವಾಮದೇವನನ್ನು ಜಲಕ್ಕೆ ವಿಶೇಷ ಕಾರಣವಾದ ಜನಕನೆಂಬುದಾಗಿ ತತ್ತ್ವಜ್ಞಾನಿಗಳು ಹೇಳುತ್ತಾರೆ.

೨೫. ಸಕಲ ತತ್ತ್ವಗಳನ್ನೂ ತಿಳಿದಿರುವ ಜ್ಞಾನಿಗಳು ಪೃಥಿವೀಗುಣವಾದ ಗಂಧತನ್ಮಾತ್ರಸ್ವರೂಪನಾದ ಮಹಾದೇವನಾದ ಸದ್ಯೋಜಾತನನ್ನು ಭೂಮಿಯ ಜನಕನ್ನಾಗಿ ಹೇಳುತ್ತಾರೆ.

೨೬. ಆಕಾಶ ರೂಪಿಯಾದ ಆದಿದೇವನಾದ ಈಶಾನ ಮೂರ್ತಿಯನ್ನು ಹೆಚ್ಚಾದ ಮಹಾಪರಿಮಾಣದಿಂದ ಕೂಡಿದ ಆಶ್ಚರ್ಯ ಕಾರಿಯೆಂಬುದಾಗಿ ಮುನಿಶ್ರೇಷ್ಠರು ಹೇಳುತ್ತಾರೆ.

೨೭. ಪ್ರಭುವೂ, ತೇಜೋವಂತನೂ, ಆದ ತತ್ಪುರುಷ ಮೂರ್ತಿಯನ್ನು ಸಕಲ ಪ್ರಪಂಚದಲ್ಲೂ ವ್ಯಾಪಿಸಿರುವುದರಿಂದ ಪ್ರಸಿದ್ಧ ವಾಯುರೂಪಿಯನ್ನಾಗಿ ಜ್ಞಾನಿಗಳು ತಿಳಿಯುತ್ತಾರೆ.

ಅಥಾರ್ಚಿತ ತಯಾ ಖ್ಯಾತ ಮಘೋರಂ ದಹನಾತ್ಮಕಂ ।
ಕಥಯಂತಿ ಮಹಾತ್ಮಾನಂ ವೇದ ವಾಕ್ಯಾರ್ಥವೇದಿನಃ ॥೨೮॥

ತೋಯಾತ್ಮಕಂ ಮಹಾದೇವಂ ವಾಮದೇವಂ ಮನೋರಮಂ ।
ಜಗತ್ಸಂಜೀವನ ತ್ವೇನ ಕಥಿತಂ ಮುನಯೋ ವಿದುಃ ॥೨೯॥

ವಿಶ್ವಂ ಭರಾತ್ಮಕಂ ದೇವಂ ಸದ್ಯೋಜಾತಂ ಜಗದ್ಗುರುಂ ।
ಚರಾ ಚರೈಕ ಭರ್ತಾರಂ ಪರಂ ಕವಿವರಾ ವಿದುಃ ॥೩೦॥

ಪಂಚ ಬ್ರಹ್ಮಾತ್ಮಕಂ ಸರ್ವಂ ಜಗತ್ಸ್ಥಾವರ ಜಂಗಮಂ ।
ಶಿವಾನಂದಂ ತದಿತ್ಯಾಹುಃ ಮುನಯಸ್ತತ್ವ ದರ್ಶಿನಃ ॥೩೧॥

ಪಂಚ ವಿಂಶತಿ ತತ್ತ್ವಾತ್ಮಾ ಪ್ರಪಂಚೇ ಯಃ ಪ್ರದೃಶ್ಯತೇ ।
ಪಂಚ ಬ್ರಹ್ಮಾತ್ಮಕ ತ್ವೇನ ಸ ಶಿವೋ ನಾನ್ಯತಾಂ ಗತಃ ॥೩೨॥

---

೨೮. ವೇದಾರ್ಥಗಳನ್ನು ತಿಳಿದಿರುವ ಪಂಡಿತರು ಯಾಗಾದಿಗಳಲ್ಲಿ ಅರ್ಚಿಸುವುದರಿಂದ ಪ್ರಸಿದ್ಧನಾದ ದಾಹಕ ಸ್ವರೂಪನಾದ ಅಘೋರ ಮೂರ್ತಿಯನ್ನು ಮಹಾಮಹಿನಾದ ಅಗ್ನಿಯನ್ನಾಗಿ ಹೇಳುತ್ತಾರೆ.

೨೯. ಮಹಾದೇವನೂ, ಮನಸ್ಸಿಗೆ ಆಹ್ಲಾದವನ್ನುಂಟುಮಾಡುವವನೂ, ಜಲರೂಪಿಯೂ ಆದ ವಾಮದೇವ ಮೂರ್ತಿಯನ್ನು ಪ್ರಪಂಚಕ್ಕೆ ಚೇತನಕಾರಿಯೆಂದು ಋಷಿಗಳು ತಿಳಿಯುತ್ತಾರೆ.

೩೦. ಜಗತ್ತಿಗೆ ಉಪದೇಶಕನೂ, ಪೃಥಿವೀಸ್ವರೂಪನೂ ಆದ ಸದ್ಯೋಜಾತ ಮೂರ್ತಿಯು ಚರಾ ಚರ ಪ್ರಾಣಿಗಳಿಗೆ ಆಧಾರ ಭೂತವಾದುದು ಎಂಬುದನ್ನಾಗಿ ಜ್ಞಾನಿಗಳು ತಿಳಿಯುತ್ತಾರೆ.

೩೧. ತತ್ವ ಜ್ಞಾನಿಗಳಾದ ಋಷಿಗಳು ಈಶಾನಾದಿ ಪಂಚ ಬ್ರಹ್ಮಾತ್ಮಕವಾದ ಸ್ಥಾವರ ಜಂಗಮಾತ್ಮಕವಾದ ಸಕಲ ಜಗತ್ತೂ ಈಶ್ವರನ ಕ್ರೀಡೆ ಮತ್ತು ಆನಂದಾತ್ಮಕವಾದುದೆಂದು ಹೇಳುತ್ತಾರೆ.

೩೨. ಹಿಂದೆ ಹೇಳಲ್ಪಟ್ಟ ಕ್ಷೇತ್ರಜ್ಞಾದಿ ಇಪ್ಪತ್ತೈದು ಬಗೆಯ ತತ್ವಾತ್ಮಕನಾದ ಆ ಪರಮಾತ್ಮನು ಈಶಾನಾದಿ ಪಂಚ ಬ್ರಹ್ಮಸ್ವರೂಪದಿಂದ ಪ್ರಪಂಚದಲ್ಲಿ ಅಭೇದವನ್ನು ಹೊಂದಿದವನಾಗಿರುತ್ತಾನೆ.

ಪಂಚ ವಿಂಶತಿ ತತ್ತ್ವಾತ್ಮಾ ಪಂಚ ಬ್ರಹ್ಮಾತ್ಮಕಃ ಶಿವಃ ।
ಶ್ರೇಯೋऽರ್ಥಿಭಿ ರತೋ ನಿತ್ಯಂ ಚಿಂತನೀಯಃ ಪ್ರಯತ್ನತಃ ॥೩೩॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಪಂಚ ಬ್ರಹ್ಮ ಸ್ವರೂಪ ಕಥನಂ ನಾಮ ಚತುರ್ದಶೋऽಧ್ಯಾಯಃ

---

೩೩. ಈಶಾನಾದಿ ಪಂಚ ಬ್ರಹ್ಮಾತ್ಮಕನಾದ ಪರಶಿವನೇ ಕ್ಷೇತ್ರಜ್ಞಾದಿ ಇಪ್ಪತ್ತೈದು ಬಗೆಯ ತತ್ತ್ವಸ್ವರೂಪನೂ ಆಗಿರುವುದರಿಂದಲೇ ಶ್ರೇಯೋऽಪೇಕ್ಷಿಗಳು ಆ ಪರಮಾತ್ಮನನ್ನು ಧ್ಯಾನಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಪಂಚ ಬ್ರಹ್ಮಸ್ವರೂಪ ಕಥನ ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
पंचदशोऽध्यायः

॥ सनत्कुमार उवाच ॥

भूयोऽपि शिव माहात्म्यं समाचक्ष्व महामते ।
सर्वज्ञोह्यसि भूतानां अधिनाथ महागुण ॥ १ ॥

॥ शैलादि रुवाच ॥

शिव माहात्म्यमेकाग्रः शृणु वक्ष्यामि ते मुने ।
बहुभिर्बहुधा शब्दैः कीर्तितं मुनिसत्तमैः ॥ २ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನೈದನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :—ಸರ್ವಸ್ವರೂಪನಾದಂಥ ಮಹೇಶ್ವರನು ಹಲವು ಋಷಿಗಳಿಂದ ನಾನಾ ಪ್ರಕಾರವಾದ ಹೆಸರಿನಿಂದ ಹೇಳಲ್ಪಟ್ಟಿರುವನು, ಎಂಬ ವಿಷಯವು ಈ ಅಧ್ಯಾಯದಲ್ಲಿ ನಿರೂಪಿಸಲ್ಪಡುತ್ತದೆ. ಮಹಾ ಬುದ್ಧಿಶಾಲಿಯಾಗಿ ಸರ್ವಜ್ಞನಾಗಿಯೂ, ಸಮಸ್ತ ಪ್ರಾಣಿಗಳಿಗೂ ಒಡೆಯನಾಗಿಯೂ, ಅನೇಕ ಗುಣ ಸಂಪನ್ನನಾಗಿಯೂ ಇರುವ ನಂದಿಕೇಶ್ವರನನ್ನು ಕುರಿತು ಸನತ್ಕುಮಾರ ಮುನಿಯು ಶಿವನ ಮಾಹಾತ್ಮ್ಯವನ್ನು ಮತ್ತೂ ಹೇಳಬೇಕೆಂದು ಪ್ರಶ್ನೆ ಮಾಡಲು

೨. ನಂದಿಕೇಶ್ವರನು ಹೇಳಿದನು :—ಎಲೈ ಮುನಿಯೇ, ನಾನು ಹೇಳುವಂಥಾ ಶಿವಮಾಹಾತ್ಮ್ಯವನ್ನು ನೀನು ಸಾವಧಾನ ಮನಸ್ಸುಳ್ಳವನಾಗಿ ಕೇಳು. ಆ ಶಿವಮಾಹಾತ್ಮ್ಯವು ಅನೇಕ ಮುನಿಶ್ರೇಷ್ಠರಿಂದ ನಾನಾ ಪ್ರಕಾರವಾಗಿ ಅನೇಕ ಬಗೆಗಳಿಂದ ಹೇಳಲ್ಪಟ್ಟಿದೆ.

ಸದ ಸದ್ರೂಪ ಮಿತ್ಯಾಹುಃ ಸದಸತ್ಪತಿರಿತ್ಯಪಿ ।
ತಂ ಶಿವಂ ಮುನಯಃ ಕೇಚಿತ್ ಪ್ರವದಂತಿ ಚ ಸೂರಯಃ ॥ ೩ ॥

ಭೂತ ಭಾವ ವಿಕಾರೇಣ ದ್ವಿತೀಯೇನ ಸ ಉಚ್ಯತೇ ।
ವ್ಯಕ್ತಂ ತೇನ ವಿಹೀನತ್ವಾ ದವ್ಯಕ್ತ ಮಸದಿತ್ಯಪಿ ॥ ೪ ॥

ಉಭೇ ತೇ ಶಿವರೂಪೇ ಹಿ ಶಿವಾದನ್ಯ ನ್ನ ವಿದ್ಯತೇ ।
ತಯೋಃ ಪತಿತ್ವಾಚ್ಚ ಶಿವಃ ಸದಸತ್ಪತಿ ರುಚ್ಯತೇ ॥ ೫ ॥

---

೩. ಗೌತಮಾದಿ ಮುನಿಗಳು ಆ ವಿಶ್ವರೂಪನಾದ ಶಿವನನ್ನು ಸದ್ರೂಪ ( ಕಾರಣ ಭೂತವಾದ ನಿತ್ಯ ದ್ರವ್ಯರೂಪ ) ವನ್ನಾಗಿಯೂ, ಅ ಸದ್ರೂಪ ( ಕಾರ್ಯರೂಪವಾದ ಅನಿತ್ಯ ದ್ವ್ಯಣುಕಾದಿ ರೂಪ) ವನ್ನಾಗಿಯೂ, ಇನ್ನು ಪೌರಾಣಿಕರಾದ ಬೇರೆ ಕೆಲವರು ಮುನಿಗಳು ಅವನನ್ನು ಸದ್ದ್ರವ್ಯಕ್ಕೂ ಅಸದ್ದ್ರವ್ಯಕ್ಕೂ ಸ್ವಾಮಿಯನ್ನಾಗಿಯೂ ಹೇಳುತ್ತಾರೆ.

೪. ಈ ರೀತಿಯಾದ ಹೆಸರಿಗೆ ಕಾರಣವನ್ನೂ ಹೇಳುತ್ತಾರೆ. “ ಜಾಯತೇ, ಅಸ್ತಿ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ, ನಶ್ಯತಿ ” ಎಂದು ಮುಂತಾದ ಆರು ಭಾವ ವಿಕಾರಗಳು ಪಂಚ ಭೂತಗಳಿಗೆ ಇವೆ. ಇವುಗಳ ಪೈಕಿ ಎರಡನೆಯ ಅಸ್ತಿ ( ಸತ್ತಾ ) ಕಾರ್ಯರೂಪದಿಂದ ಇರುವಿಕೆ ಯೆಂಬ ಭಾವ ವಿಕಾರದಿಂದ ಆ ಶಿವನು ವ್ಯಕ್ತ ಸ್ವರೂಪನಾಗಿಯೂ, ಆ ಭಾವವಿಕಾರವು ಇಲ್ಲದೇ ಕಾರಣ ರೂಪನಾಗಿ ಇರುವಾಗ ಅವ್ಯಕ್ತ ಸ್ವರೂಪ ನಾಗಿಯೂ ಅಸದ್ರೂಪನಾಗಿಯೂ ಹೇಳಲ್ಪಡುತ್ತಾನೆ.

೫. ಆ ಎರಡು ರೂಪಗಳೂ ಶಿವನ ಸ್ವರೂಪವೇ ಆಗಿ ಶಿವನಿಗಿಂತ ಬೇರೆಯಾಗಿಲ್ಲದೆ ಇರುವುದರಿಂದಲೂ, ಆ ಎರಡು ರೂಪಗಳಿಗೆ ಸ್ವಾಮಿ ಯಾಗಿರುವುದರಿಂದಲೂ ಶಿವನು ಸದಸತ್ಪತಿಃ ಎಂಬುದಾಗಿ ಹೇಳಲ್ಪಡುತ್ತಾನೆ.

ಕ್ಷರಾ ಕ್ಷರಾತ್ಮಕಂ ಪ್ರಾಹುಃ ಕ್ಷರಾಕ್ಷರ ಪರಂ ತಥಾ ।
ಶಿವಂ ಮಹೇಶ್ವರಂ ಕೇಚಿ ನ್ಮುನಯ ಸ್ತತ್ವ ಚಿಂತಕಾಃ ॥ ೬ ॥

ಉಕ್ತಮಕ್ಷರ ಮವ್ಯಕ್ತಂ ವ್ಯಕ್ತಂ ಕ್ಷರ ಮುದಾಹೃತಂ ।
ರೂಪೇ ತೇ ಶಂಕರಸ್ಯೈವ ತಸ್ಮಾನ್ನ ಪರ ಉಚ್ಯತೇ ॥ ೭ ॥

ತಯೋಃ ಪರಶಿವಃ ಶಾಂತಃ ಕ್ಷರಾಕ್ಷರ ಪರೋ ಬುಧೈಃ ।
ಉಚ್ಯತೇ ಪರಮಾರ್ಥೇನ ಮಹಾದೇವೋ ಮಹೇಶ್ವರಃ ॥ ೮ ॥

ಸಮಸ್ತ ವ್ಯಕ್ತ ರೂಪಂ ತು ತತಃ ಸ್ಮೃತ್ವಾ ಸ ಮುಚ್ಯತೇ ।
ಸಮಷ್ಟಿ ವ್ಯಷ್ಟಿರೂಪಂ ತು ಸಮಷ್ಟಿ ವ್ಯಷ್ಟಿಕಾರಣಂ ॥ ೯ ॥

---

೬. ತತ್ವ ವಿಚಾರ ಮಾಡುವ ಕೆಲವು ಮುನಿಗಳು (ಸಾಂಖ್ಯರು) ಮಹೇಶ್ವರನಾದ ಶಿವನನ್ನು ಕ್ಷರಸ್ವರೂಪ (ಸರ್ವಭೂತ ಸ್ವರೂಪ) ನನ್ನಾಗಿಯೂ, ಅಕ್ಷರ ಸ್ವರೂಪ (ಮಾಯಾ ಶಕ್ತಿ ಸ್ವರೂಪ) ನನ್ನಾಗಿಯೂ ಹೇಳುತ್ತಾರೆ.

೭. ಅಕ್ಷರ ಎಂಬ ಪದದಿಂದ ಅವ್ಯಕ್ತ ಸ್ವರೂಪ (ಮಾಯಾಶಕ್ತಿ) ವೂ "ಕ್ಷರಂ" ಎಂಬ ಪದದಿಂದ ವ್ಯಕ್ತಿ ಸ್ವರೂಪ (ಸರ್ವ ಭೂತಗಳು) ವೂ ಹೇಳಲ್ಪಡುತ್ತದೆ. ಈ ಎರಡು ರೂಪಗಳು ಶಿವನಿಗಿಂತ ಬೇರೆಯಲ್ಲ.

೮. "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಎಂಬ ಭಗವದ್ಗೀತಾ ವಚನಾನುಸಾರವಾಗಿ ಪಾರಮಾರ್ಥಿಕ ದೃಷ್ಟಿಯಿಂದ ಶಾಂತಸ್ವರೂಪನಾಗಿಯೂ, ಮಂಗಳ ಸ್ವರೂಪನಾಗಿಯೂ, ಸರ್ವೇಶ್ವರ ನಾಗಿಯೂ, ಇರುವ ಮಹಾದೇವನು ವ್ಯಕ್ತಾ ವ್ಯಕ್ತ ಸ್ವರೂಪಕ್ಕಿಂತಲೂ ಭಿನ್ನನೆಂದು ವಿದ್ವಾಂಸರಿಂದ ಹೇಳಲ್ಪಡುತ್ತಾನೆ. ಎಂದರೆ ಮಾಯಾ ಶಕ್ತಿ ತತ್ಕಾರ್ಯಗಳ ಲೇಪವಿಲ್ಲದೆ ಅವೆರಡೂ ಪರಮಾತ್ಮನಿಗೆ ಅಧೀನಗಳೆಂದು ಮುಖ್ಯವಾದ ತಾತ್ಪರ್ಯವು.

೯–೧೦. ಶಿವನು ಸರ್ವ ಸ್ವರೂಪನಾಗಿರುವುದರಿಂದ ಸಮಸ್ತ ಭೂತಸ್ವರೂಪನಾದ ಶಿವನನ್ನು ಸ್ಮರಣೆ ಮಾಡಿದರೆ ಜೀವನು ಮುಕ್ತ

ವದಂತಿ ಕೇಚಿದಾಚಾರ್ಯಾಃ ಶಿವಂ ಪರಮ ಕಾರಣಂ ।
ಸಮಷ್ಟಿಂ ವಿದು ರವ್ಯಕ್ತಂ ವ್ಯಷ್ಟಿಂ ವ್ಯಕ್ತಂ ಮುನೀಶ್ವರಾಃ ॥೧೦॥
ರೂಪೇ ತೇ ಗದಿತೇ ಶಂಭೋ ರ್ನಾಸ್ತ್ಯನ್ಯ ದ್ವಸ್ತುಸಂಭವಂ ।
ತಯೋಃ ಕಾರಣ ಭಾವೇನ ಶಿವೋ ಹಿ ಪರಮೇಶ್ವರಃ ॥೧೧॥
ಉಚ್ಯತೇ ಯೋಗಶಾಸ್ತ್ರಜ್ಞೈಃ ಸಮಷ್ಟಿ ವ್ಯಷ್ಟಿಕಾರಣಂ ।
ಕ್ಷೇತ್ರ ಕ್ಷೇತ್ರಜ್ಞ ರೂಪೀ ಚ ಶಿವಃ ಕೈಶ್ಚಿ ದುದಾಹೃತಃ ॥೧೨॥
ಪರಮಾತ್ಮಾ ಪರಂ ಜ್ಯೋತಿ ರ್ಭಗವಾನ್ ಪರಮೇಶ್ವರಃ ।
ಚತುರ್ವಿಂಶತಿ ತತ್ತ್ವಾನಿ ಕ್ಷೇತ್ರ ಶಬ್ದೇನ ಸೂರಯಃ ॥೧೩॥

---

ನಾಗುತ್ತಾನೆ. ಮತ್ಸ್ಯೇಂದ್ರ ಮೊದಲಾದ ಕೆಲವು ಯೋಗಿ ಮತಾವಲಂಬಿಗಳು ಸಮಷ್ಟಿವ್ಯಷ್ಟಿ ಉಭಯ ರೂಪನಾದ ಶಿವನನ್ನು ಸಮಷ್ಟಿಗೂ (ಮಾಯಾ ಶಕ್ತಿಗೂ) ವ್ಯಷ್ಟಿ (ಸಮಸ್ತ ಭೂತಗಳು) ಗೂ ಕಾರಣವನ್ನಾಗಿ ಹೇಳುತ್ತಾರೆ. ಸಮಷ್ಟಿಯೆಂದರೆ ಅವ್ಯಕ್ತ (ಸಂಸಾರ ಬೀಜವಾದ ಮಾಯಾಶಕ್ತಿಯು). ವ್ಯಷ್ಟಿ ಎಂದರೆ ವ್ಯಕ್ತ (ಸಮಸ್ತ ಭೂತ ಪ್ರಪಂಚವು).

೧೧. ಆ ವ್ಯಕ್ತಾವ್ಯಕ್ತ ಸ್ವರೂಪಗಳೆರಡೂ ಶಿವನ ರೂಪವೇ ಹೊರತು ಬೇರೆಯಲ್ಲ. ಆದ್ದರಿಂದ ಶಿವನಿಗಿಂತ ಭಿನ್ನವಾದ ಜಗತ್ಕಾರಣವಾದ ಬೇರೇ ವಸ್ತುವು ಇಲ್ಲ. ಆ ಸಮಷ್ಟಿಗೂ, ವ್ಯಷ್ಟಿಗೂ ಕಾರಣನಾಗಿರುವುದರಿಂದ ಶಿವನು ಸಮಷ್ಟಿ ವ್ಯಷ್ಟಿ ಕಾರಣನು ಎಂದು ಯೋಗಶಾಸ್ತ್ರಜ್ಞರು ಹೇಳುತ್ತಾರೆ.

೧೨. ಪರಂಜ್ಯೋತಿಃ ಸ್ವರೂಪನಾದ ಭಗವಂತನಾದ ಪರಮೇಶ್ವರನನ್ನು ಕೆಲವರು (ವೇದಾಂತಿಗಳು) ಕ್ಷೇತ್ರಸ್ವರೂಪನನ್ನಾಗಿಯೂ, ಕ್ಷೇತ್ರಜ್ಞಸ್ವರೂಪನನ್ನಾಗಿಯೂ ಹೇಳುತ್ತಾರೆ.

೧೩–೧೪. "ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ" ಎಂದು ಭಗವದ್ಗೀತಾ ವಚನದಲ್ಲಿ ಹೇಳಿದ ಐದು ಮಹಾ ಭೂತ

ಪ್ರಾಹುಃ ಕ್ಷೇತ್ರಜ್ಞ ಶಬ್ದೇನ ಭೋಕ್ತಾರಂ ಪುರುಷಂ ತಥಾ ।
ಕ್ಷೇತ್ರ ಕ್ಷೇತ್ರ ವಿದಾವೇತೇ ರೂಪೇ ತಸ್ಯ ಸ್ವಯಂ ಭುವಃ ॥೧೪॥
ನ ಕಿಂಚಿಚ್ಚ ಶಿವಾದನ್ಯ ದಿತಿ ಪ್ರಾಹು ರ್ಮನೀಷಿಣಃ ।
ಮಹಾ ಭೂತಾನ್ಯಹಂಕಾರೋ ಬುದ್ಧಿ ರವ್ಯಕ್ತ ಮೇವಚ ।
ಅಪರ ಬ್ರಹ್ಮರೂಪಂ ತಂ ಪರಂ ಬ್ರಹ್ಮಾತ್ಮಕಂ ಶಿವಂ ॥೧೫॥
ಕೇಚಿದಾಹು ರ್ಮಹಾದೇವ ಮನಾದಿ ನಿಧನಂ ಪ್ರಭುಂ ।
ಭೂತೇಂದ್ರಿ ಯಾಂತಃ ಕರಣ ಪ್ರಧಾನ ವಿಷಯಾತ್ಮಕಂ ॥೧೬॥
ಅಪರ ಬ್ರಹ್ಮನಿರ್ದಿಷ್ಟಂ ಪರಂ ಬ್ರಹ್ಮ ಚಿದಾತ್ಮಕಂ ।
ಬ್ರಹ್ಮಣೇ ತೇ ಮಹೇಶಸ್ಯ ಶಿವಸ್ಯಾ ಸ್ಯ ಸ್ವಯಂಭುವಃ ॥೧೭॥

---

ಗಳೂ, ಒಂದು ಅಹಂಕಾರ, ಒಂದು ಬುದ್ಧಿ, ಒಂದು ಅವ್ಯಕ್ತ, ಮಾಯಾ ಶಕ್ತಿ, ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಒಂದು ಮನಸ್ಸು, ಐದು ಶಬ್ದಾದಿ ವಿಷಯಗಳು ಎಂದು ಇಪ್ಪತ್ತುನಾಲ್ಕು ತತ್ತ್ವಗಳನ್ನು ಕ್ಷೇತ್ರಶಬ್ದಕ್ಕೆ ಅರ್ಥವನ್ನಾಗಿ ವಿದ್ವಾಂಸರು ಹೇಳುತ್ತಾರೆ. ಭೋಕ್ತೃವಾದ ಪುರುಷನನ್ನು ಕ್ಷೇತ್ರಜ್ಞಶಬ್ದಕ್ಕೆ ಅರ್ಥವನ್ನಾಗಿ ಹೇಳುತ್ತಾರೆ. ಈ ಕ್ಷೇತ್ರ, ಕ್ಷೇತ್ರಜ್ಞರೂಪಗಳೆರಡೂ, ಸ್ವಯಂಭೂವಾದ ಶಿವನಿಗಿಂತ ಬೇರೆಯಲ್ಲ.

೧೫–೧೭. ಹುಟ್ಟು, ಸಾವು, ಇಲ್ಲದವನಾದ ಪ್ರಭುವಾದ ಶಿವನನ್ನು ಕೆಲವರು ಅಪರಬ್ರಹ್ಮ ( ಶಾಬ್ದಬ್ರಹ್ಮಾದಿ ) ಸ್ವರೂಪನೆಂತಲೂ, ಪರಂ ಬ್ರಹ್ಮಸ್ವರೂಪನೆಂತಲೂ, ಹೇಳುತ್ತಾರೆ. ಜೀವಗಳ ಇಂದ್ರಿಯಾಂತಃ ಕರಣಗಳಿಗೆ ಮುಖ್ಯ ವಿಷಯಗಳಾದ ಶಬ್ದಾದಿಸ್ವರೂಪವು ಅಪರಬ್ರಹ್ಮ ಎಂಬ ಪದಕ್ಕೆ ಅರ್ಥವಾಗುತ್ತದೆ. ಚಿತ್ಸ್ವರೂಪವು ( ಪ್ರಕಾಶಸ್ವರೂಪವು ) ಪರಂ ಬ್ರಹ್ಮಪದಕ್ಕೆ ಅರ್ಥವಾಗುತ್ತದೆ. ಆ ಪರಾಪರ ಬ್ರಹ್ಮಸ್ವರೂಪ ಗಳೆರಡೂ ಸ್ವಯಂಭೂವಾದ ಶಿವನನ್ನು ಬಿಟ್ಟು ಬೇರೆ ಇರುವುದಿಲ್ಲ.

**ಶಂಕರಸ್ಯ ಪರಸ್ಯೈವ ಶಿವಾದನ್ಯ ನ್ನ ವಿದ್ಯತೇ ।**
**ವಿದ್ಯಾಽವಿದ್ಯಾ ಸ್ವರೂಪೀ ಚ ಶಂಕರಃ ಕೈಶ್ಚಿದುಚ್ಯತೇ ॥೧೮॥**

**ಧಾತಾ ವಿಧಾತಾ ಲೋಕಾನಾಂ ಆದಿದೇವೋ ಮಹೇಶ್ವರಃ ।**
**ವಿದ್ಯೇತಿ ಚ ತಮೇವಾಹು ರವಿದ್ಯೇತಿ ಮುನೀಶ್ವರಾಃ ॥೧೯॥**

**ಪ್ರಪಂಚ ಜಾತ ಮಖಿಲಂ ತೇ ಸ್ವರೂಪೇ ಸ್ವಯಂ ಭುವಃ ।**
**ಭ್ರಾಂತಿರ್ವಿದ್ಯಾಪರಂ ಚೇತಿ ಶಿವರೂಪಮನುತ್ತಮಂ ॥೨೦॥**

**ಆಪಾಪು ರ್ಮುನಯೋ ಯೋಗಾ ತ್ಕೇಚಿದಾಗಮವೇದಿನಃ ।**
**ಅರ್ಥೇಷು ಬಹು ರೂಪೇಷು ವಿಜ್ಞಾನಂ ಭ್ರಾಂತಿ ರುಚ್ಯತೇ ॥೨೧॥**

---

೧೮–೧೯. ಕೆಲವರು ಶಿವನನ್ನು ವಿದ್ಯಾಸ್ವರೂಪನನ್ನಾಗಿಯೂ, ಅವಿದ್ಯಾಸ್ವರೂಪನನ್ನಾಗಿಯೂ, ಹೇಳುತ್ತಾರೆ. ಮತ್ತೂ ಆ ದೇವನಾದ ಮಹೇಶ್ವರನು ಲೋಕಗಳಿಗೆ ಸೃಷ್ಟಿಕರ್ತನಾಗಿಯೂ, ವಿಶೇಷರೂಪದ ಎಂದರೆ (ಪಂಚೀಕೃತ ಪಂಚ ಮಹಾಭೂತಗಳ) ಸೃಷ್ಟಿಕರ್ತನಾಗಿಯೂ, ಇರುವನು. ಎಂದು ಕೆಲವು ಮುನಿಶ್ರೇಷ್ಠರ ಅಭಿಪ್ರಾಯವು. (ಎಲ್ಲಾ ಪ್ರಪಂಚಸಮೂಹವೂ ಕೂಡ ಸ್ವಯಂಭೂವಾದ ಪರಮೇಶ್ವರನ ವಿದ್ಯಾಽವಿದ್ಯಾ ಸ್ವರೂಪಗಳಾಗಿವೆ.)

೨೦. ತಮ್ಮ ಯೋಗಮಾಹಾತ್ಮ್ಯದಿಂದ ಎಲ್ಲಾ ಪ್ರಪಂಚ ಸಮೂಹವೂ ಕೂಟಸ್ಥ ಸ್ವಯಂಭೂವಾದ ಪರಮೇಶ್ವರನ ವಿದ್ಯಾಜ್ಞಾನ ಸ್ವರೂಪವಾಗಿಯೂ, ಅವಿದ್ಯಾ (ಭ್ರಾಂತಿ) ಸ್ವರೂಪವಾಗಿಯೂ ಇದೆ. ವೇದಗಳ ತತ್ತ್ವವನ್ನು ಬಲ್ಲವರಾದ ಕೆಲವರು ಮುನಿಗಳು ಭ್ರಾಂತಿಃ ವಿದ್ಯಾ, ಪರಂ ಎಂಬ ಮೂರುಪದಗಳ ಅರ್ಥಜ್ಞಾನವನ್ನು, ಉತ್ತಮೋತ್ತ ಮನಾದ ಶಿವಸ್ವರೂಪವನ್ನು (ಸಾಕ್ಷಾತ್ಕಾರವನ್ನು) ತಮ್ಮ ಯೋಗ ಮಾಹಾತ್ಮ್ಯದಿಂದ ಹೊಂದಿದರು.

೨೧–೨೨. ಭ್ರಾಂತಿಃ ವಿದ್ಯಾ, ಪರಂ. ಎಂಬ ಮೂರುಪದಗಳ ಅರ್ಥವನ್ನು ವಿವರಿಸುತ್ತಾರೆ. ನಾನಾ ಪ್ರಕಾರಗಳಾದ ಅನಾತ್ಮ ಪದಾರ್ಥ

ಆತ್ಮಾಕಾರೇಣ ಸಂ ವಿತ್ತಿ ರ್ಬುಧೈ ರ್ವಿದ್ಯೇತಿ ಕೀರ್ತ್ಯತೇ ।
ವಿಕಲ್ಪ ರಹಿತಂ ತತ್ತ್ವಂ ಪರಮಿತ್ಯಭಿಧೀಯತೇ ॥೨೨॥
ತದೀಯ ರೂಪ ಮೀಶಸ್ಯ ನಾನ್ಯತ್ಕಿಂಚನ ಸರ್ವತಃ ।
ವ್ಯಕ್ತಾವ್ಯಕ್ತಜ್ಞ ರೂಪೀತಿ ಶಿವಃ ಕೈಶ್ಚಿನ್ನಿಗದ್ಯತೇ ॥೨೩॥
ವಿಧಾತಾ ಸರ್ವಲೋಕಾನಾಂ ಧಾತಾ ಚ ಪರಮೇಶ್ವರಃ ।
ತ್ರಯೋ ವಿಂಶತಿ ತತ್ವಾನಿ ವ್ಯಕ್ತ ಶಬ್ದೇನ ಸೂರಯಃ ॥೨೪॥
ವದಂತ್ಯವ್ಯಕ್ತ ಶಬ್ದೇನ ಪ್ರಕೃತಿಂ ಚ ಪರಾಂ ತಥಾ ।
ಕಥಯಂತಿ ಜ್ಞ ಶಬ್ದೇನ ಪುರುಷಂ ಗುಣಭೋಗಿನಂ ॥೨೫॥

---

ಗಳ ವಿಷಯವಾದ ಜ್ಞಾನವು ಭ್ರಾಂತಿಯೆಂಬ ಶಬ್ದಕ್ಕೆ ಅರ್ಥವಾಗುತ್ತದೆ. ಕೇವಲ, ಆತ್ಮಾಕಾರ, ಆತ್ಮಸ್ವರೂಪ ವಾದ ಸಮ್ಯಕ್ ಜ್ಞಾನವನ್ನು ವಿದ್ವಾಂಸರು ವಿದ್ಯಾ ಎಂಬುದಾಗಿ ಹೇಳುತ್ತಾರೆ. ವಿಕಲ್ಪರಹಿತವಾದ (ದ್ವಿತೀಯವಸ್ತುರಹಿತವಾದ) ತತ್ತ್ವದ ಸ್ವರೂಪವು ಪರಂ ಎಂಬ ಪದದಿಂದ ಹೇಳಲ್ಪಡುತ್ತದೆ.

೨೩. ಪಾರಮಾರ್ಥಿಕ ದೃಷ್ಟಿಯಿಂದ ವಿಚಾರಿಸಲು ಶಿವನ ಮೂರನೆಯ (ಪರ) ಸ್ವರೂಪವು ಹೊರತು ಬೇರೆ ಯಾವುದೂ ಇಲ್ಲ. ಇನ್ನು ಬೇರೆ ಕೆಲವರು ಶಿವನು ವ್ಯಕ್ತ ಸ್ವರೂಪನೂ, ಅವ್ಯಕ್ತ ಸ್ವರೂಪನೂ, ಜ್ಞಸ್ವರೂಪನೂ ಎಂದು ಹೇಳುತ್ತಾರೆ.

೨೪–೨೬. ಪರಮೇಶ್ವರನು ಸಮಸ್ತ ಲೋಕಗಳಿಗೆ ವಿಶೇಷ ರೂಪದಿಂದ (ಪಂಚೀ ಕೃತ ಮಹಾ ಭೂತಗಳ) ಸೃಷ್ಟಿ ಕರ್ತನಾಗಿಯೂ, ಸಾಮಾನ್ಯ ರೂಪೇಣ (ಅಪಂಚೀಕೃತ ಮಹಾಭೂತಗಳ) ಸೃಷ್ಟಿ ಕರ್ತನಾಗಿಯೂ, ಇರುವನು. ಪಂಚ ಮಹಾಭೂತಗಳು ಅಹಂಕಾರವು ಬುದ್ಧಿಯು, ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು, ಚಕ್ಷುಃ, ಶ್ರೋತ್ರ, ಜಿಹ್ವಾ, ಘ್ರಾಣ, ತ್ವಕ್, ಎಂಬ ಐದು ಜ್ಞಾನೇಂದ್ರಿಯಗಳು, ಮನಸ್ಸು, ಶಬ್ದಾದಿ ಪಂಚ ವಿಷಯಗಳು, ಹೀಗೆ ಇಪ್ಪತ್ತುಮೂರು ಮೂಲ ತತ್ವಗಳು ವ್ಯಕ್ತ, ಎಂಬ ಶಬ್ದ

ತತ್ತ್ರಯಂ ಶಾಂಕರಂ ರೂಪಂ ನಾನ್ಯತ್ಕಿಂಚಿದಶಾಂಕರಂ ॥೨೬॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಪಂಚದಶೋಽಧ್ಯಾಯಃ

---

ದಿಂದ ಹೇಳಲ್ಪಡುತ್ತವೆ. ಎಂದು ವಿದ್ವಾಂಸರು ಹೇಳುತ್ತಾರೆ. ಅವ್ಯಕ್ತ ಶಬ್ದಕ್ಕೆ ಮೂಲ ಪ್ರಕೃತಿ (ಮೂಲಶಕ್ತಿ) ಯು ಎಂದು ಅರ್ಥವಾಗುತ್ತದೆ. ಜ್ಞ ಎಂಬ ಶಬ್ದಕ್ಕೆ ಶಬ್ದಾದಿ ವಿಷಯಗಳ ಭೋಕ್ತೃವಾದ ಪುರುಷನು ಎಂದು ಅರ್ಥವಾಗುತ್ತದೆ. ವ್ಯಕ್ತ, ಅವ್ಯಕ್ತ, ಜ್ಞ, ಎಂಬ ಮೂರು ರೂಪಗಳೂ ಶಿವನ ರೂಪವೇ ಹೊರತು ಅವನಿಗಿಂತ ಬೇರೆಯಲ್ಲವು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನೈದನೆಯ ಅಧ್ಯಾಯವು ಮುಗಿಯಿತು.

अथ श्री लिंगमहापुराणे उत्तरभागे
षोडशोऽध्यायः

**ವರ್ಣ್ಯತೇ ಷೋಡಶಾಧ್ಯಾಯೇ ಬಹುಭಿಃ ಮುನಿಭಿಃ ಪೃಥಕ್ ।**
**ಪ್ರೋಕ್ತಾನಿ ನಾಮರೂಪಾಣಿ ಸರ್ವರೂಪ ಶಿವಸ್ಯ ತು ॥**

**॥ ಸನತ್ಕುಮಾರ ಉವಾಚ ॥**

**ಪುನರೇವ ಮಹಾ ಬುದ್ಧೇ ಶ್ರೋತುಮಿಚ್ಛಾಮಿ ತತ್ತ್ವತಃ ।**
**ಬಹುಭಿರ್ಬಹುಧಾ ಶಬ್ದೈಃ ಶಬ್ದಿತಾನಿ ಮುನೀಶ್ವರೈಃ ॥ ೧ ॥**

**॥ ಶೈಲಾದಿ ರುವಾಚ ॥**

**ಪುನಃ ಪುನಃ ಪ್ರವಕ್ಷ್ಯಾಮಿ ಶಿವರೂಪಾಣಿ ತೇ ಮುನೇ ।**
**ಬಹುಭಿ ರ್ಬಹುಧಾ ಶಬ್ದೈಃ ಶಬ್ದಿತಾನಿ ಮುನೀಶ್ವರೈಃ ॥ ೨ ॥**

---

**ಶ್ರೀ ಲಿಂಗಮಹಾಪುರಾಣದ ಉತ್ತರಾರ್ಧದಲ್ಲಿ ಹದಿನಾರನೆಯ ಅಧ್ಯಾಯವು.**

ಹದಿನಾರನೆಯ ಅಧ್ಯಾಯದಲ್ಲಿ ಸರ್ವಸ್ವರೂಪನಾದ ಶಿವನ ಹೆಸರುಗಳೂ, ಸ್ವರೂಪಗಳೂ, ಅನೇಕ ಮುನಿಗಳಿಂದ ನಾನಾ ಪ್ರಕಾರವಾಗಿ ಹೇಳಲ್ಪಡುತ್ತವೆ.

೧. ಸನತ್ಕುಮಾರ ಮುನಿಯು ವಿವರಗಳೊಡನೆ ಶಿವಸ್ವರೂಪವನ್ನು ಪ್ರಶ್ನೆಮಾಡುತ್ತಾನೆ. ಮಹಾ ಬುದ್ಧಿಶಾಲಿಯಾದ ಓ ನಂದಿಕೇಶ್ವರನೇ, ಅನೇಕ ಮುನಿಶ್ರೇಷ್ಠರುಗಳಿಂದ ಹಲವು ಶಬ್ದಗಳಿಂದ ನಾನಾ ಪ್ರಕಾರವಾಗಿ ಹೇಳಲ್ಪಟ್ಟ ಶಿವನ ಸ್ವರೂಪವನ್ನು ಯಥಾರ್ಥವಾಗಿ ವಿವರದೊಡನೆ ಕೇಳುವುದಕ್ಕೋಸ್ಕರ ಬಯಸುತ್ತೇನೆ.

೨-೩. ನಂದಿಕೇಶ್ವರನು ಹೇಳಿದನು. ಎಲೈ ಮುನಿಯೇ, ಅನೇಕ ಮುನಿಶ್ರೇಷ್ಠರಿಂದ ಹಲವು ಶಬ್ದಗಳಿಂದ ನಾನಾ ಪ್ರಕಾರವಾಗಿ ಹೇಳಲ್ಪಟ್ಟ ಶಿವನ ಸ್ವರೂಪಗಳನ್ನು ನಿನಗೆ ಹೆಚ್ಚು ವಿವರವಾಗಿ ಹೇಳುವೆನು. ವೇದವೆಂಬ ಸಮುದ್ರದ ಕೊನೆಯನ್ನು ಬಲ್ಲವರಾದ ಕೆಲವರು ಮುನಿವರ್ಯ

ಕ್ಷೇತ್ರಜ್ಞಃ ಪ್ರಕೃತಿ ರ್ವ್ಯಕ್ತಂ ಕಾಲಾತ್ಮೇತಿ ಮುನೀಶ್ವರೈಃ ।
ಉಚ್ಯತೇ ಕೈಶ್ಚಿ ದಾಚಾರ್ಯೈಃ ಆಗಮಾರ್ಣವ ಪಾರಗೈಃ ॥ ೩ ॥

ಕ್ಷೇತ್ರಜ್ಞಂ ಪುರುಷಂ ಪ್ರಾಹುಃ ಪ್ರಧಾನಂ ಪ್ರಕೃತಿಂ ಬುಧಾಃ ।
ವಿಕಾರ ಜಾತಂ ನಿಶ್ಶೇಷಂ ಪ್ರಕೃತೇರ್ವ್ಯಕ್ತ ಮಿತ್ಯಪಿ ॥ ೪ ॥

ಪ್ರಧಾನ ವ್ಯಕ್ತಯೋಃ ಕಾಲಃ ಪರಿಣಾಮೈಕ ಕಾರಣಂ ।
ತಚ್ಚತುಷ್ಟಯ ಮೀಶಸ್ಯ ರೂಪಾಣಾಂ ಹಿ ಚತುಷ್ಟಯಂ ॥ ೫ ॥

ಹಿರಣ್ಯ ಗರ್ಭಂ ಪುರುಷಂ ಪ್ರಧಾನಂ ವ್ಯಕ್ತರೂಪಿಣಂ ।
ಕಥಯಂತಿ ಶಿವಂ ಕೇಚಿತ್ ಆಚಾರ್ಯಾಃ ಪರಮೇಶ್ವರಂ ॥ ೬ ॥

---

ರಿಂದ ಶಿವನು ಕ್ಷೇತ್ರಜ್ಞಸ್ವರೂಪನೆಂತಲೂ, ಪ್ರಕೃತಿಸ್ವರೂಪನೆಂತಲೂ, ವ್ಯಕ್ತ ಸ್ವರೂಪನೆಂತಲೂ, ಕಾಲಸ್ವರೂಪನೆಂತಲೂ, ಹೇಳಲ್ಪಡುತ್ತಾನೆ.

೪-೫. ಕ್ಷೇತ್ರಜ್ಞ ಮೊದಲಾದ ಶಬ್ದಗಳ ಅರ್ಥವನ್ನು ವಿವರಿಸುತ್ತಾರೆ. ಕ್ಷೇತ್ರಜ್ಞನೆಂದರೆ ಶಬ್ದಾದಿ ಗುಣಗಳ ಭೋಕ್ತೃವಾದ ಪುರುಷನು (ಶರೀರಾಭಿಮಾನಿಯಾದ ಜೀವನು) ಎಂದೂ, ಪ್ರಕೃತಿಯೆಂದರೆ ಪ್ರಧಾನ, ಸಂಸಾರಕ್ಕೆ ಮೂಲಕಾರಣವಾದ ಮಾಯಾ ಶಕ್ತಿಯು, ಎಂದೂ, ವ್ಯಕ್ತ, ಎಂದರೆ ಮೂಲ ಪ್ರಕೃತಿಯ ಕಾರ್ಯವಾದ ಸಮಸ್ತ ಭೂತಪ್ರಕೃತಿಯ ಅಥವಾ ಪಂಚ ಭೂತಗಳ ಸಮೂಹವು ಎಂದೂ, ಕಾಲಾತ್ಮನೆಂದರೆ ಪ್ರಧಾನ ವ್ಯಕ್ತ, ಇವುಗಳ ವಿಸ್ತಾರಾದಿ ವಿಷಯಗಳಲ್ಲಿ ಅದ್ವಿತೀಯನಾದ ಕಾರಣನೆಂದೂ, ಅರ್ಥವಾಗುತ್ತದೆಯೆಂದು ವಿದ್ವಾಂಸರು ಹೇಳುತ್ತಾರೆ. ಕ್ಷೇತ್ರಜ್ಞ ಮೊದಲಾದ ನಾಲ್ಕು ಸ್ವರೂಪಗಳೂ ಶಿವನ ನಾಲ್ಕು ಸ್ವರೂಪಗಳೇ ಆಗಿವೆ.

೬. ಶಿವನಿಗೆ ಬೇರೆ ನಾಲ್ಕು ವಿಧಗಳಾದ ಹೆಸರುಗಳನ್ನು ಹೇಳುತ್ತಾರೆ. ಕೆಲವು ಮುನಿಗಳು ಸರ್ವೇಶ್ವರನಾದ ಶಿವನನ್ನು ಸಮಷ್ಟಿ, ಹಿರಣ್ಯಗರ್ಭ ನನ್ನಾಗಿಯೂ ವ್ಯಷ್ಟಿ, ಪುರುಷನನ್ನಾಗಿಯೂ, ಪ್ರಧಾನ ಗುಣಸಾಮ್ಯ ಸ್ವರೂಪನನ್ನಾಗಿಯೂ, ವ್ಯಕ್ತ, ಗುಣವೈಷಮ್ಯದಿಂದ ಆಗುವ ಪರಿಣಾಮಕಾರ್ಯ ಸ್ವರೂಪನನ್ನಾಗಿಯೂ ಹೇಳುತ್ತಾರೆ.

ಹಿರಣ್ಯ ಗರ್ಭಃ ಕರ್ತಾ ಸ್ಯಾತ್ ಭೋಕ್ತಾ ವಿಶ್ವಸ್ಯ ಪೂರುಷಃ ।
ವಿಕಾರ ಜಾತಂ ವ್ಯಕ್ತಾಖ್ಯಂ ಪ್ರಧಾನಂ ಕಾರಣಂ ಪರಂ ॥ ೭ ॥
ತೇಷಾಂ ಚತುಷ್ಟಯಂ ಬುದ್ಧೇಃ ಶಿವರೂಪ ಚತುಷ್ಟಯಂ ।
ಪ್ರೋಚ್ಯತೇ ಶಂಕರಾ ದನ್ಯತ್ ಅಸ್ತಿ ವಸ್ತು ನ ಕಿಂಚ ನ ॥ ೮ ॥
ಪಿಂಡ ಜಾತಿ ಸ್ವರೂಪೀ ತು ಕಥ್ಯತೇ ಕೈಶ್ಚಿ ದೀಶ್ವರಃ ।
ಚರಾ ಚರ ಶರೀರಾಣಿ ಪಿಂಡಾಖ್ಯಾನ್ಯಖಿಲಾನ್ಯಪಿ ॥ ೯ ॥
ಸಾಮಾನ್ಯಾನಿ ಸಮಸ್ತಾನಿ ಮಹಾ ಸಾಮಾನ್ಯ ಮೇವ ಚ ।
ಕಥ್ಯಂತೇಽಜಾದಿ ಶಬ್ದೇನ ತಾನಿ ರೂಪಾಣಿ ಧೀಮತಃ ॥೧೦॥

---

೭–೮. ಹಿರಣ್ಯಗರ್ಭ ಮೊದಲಾದವುಗಳ ಅರ್ಥವನ್ನು ವಿವರಿಸುತ್ತಾರೆ:- ಚತುರ್ಮುಖನೆಂದರೆ ಈ ಎಲ್ಲಾ ಪ್ರಪಂಚಕ್ಕೂ ಸೃಷ್ಟಿಕರ್ತೃವಾದ ನಾಲ್ಕು ಮುಖಗಳುಳ್ಳ ಬ್ರಹ್ಮನು. ಪುರುಷನೆಂದರೆ ಈ ಎಲ್ಲಾ ಪ್ರಪಂಚಕ್ಕೂ ಭೋಕ್ತೃವಾದ ಜೀವನು. ವ್ಯಕ್ತ ಸ್ವರೂಪ ನೆಂದರೆ ಕಾರ್ಯರೂಪವಾದ ಸಮಸ್ತ ಪ್ರಪಂಚಸಮೂಹವೂ, ಪ್ರಧಾನ ವೆಂದರೆ, ಸೂಕ್ಷ್ಮವಾಗಿಯೂ, ಕಾರಣ ರೂಪವಾಗಿಯೂ ಇರುವ ಮಾಯಾಶಕ್ತಿಯು, ಎಂದು ಅರ್ಥವಾಗುತ್ತದೆ. ಆ ಹಿರಣ್ಯಗರ್ಭನೇ ಮೊದಲಾದ ನಾಲ್ಕು ಸ್ವರೂಪಗಳೂ, ಬುದ್ಧಿ, ಚಿತ್ತ, ಅಹಂಕಾರ, ಮನಸ್ಸು, ಎಂಬ ಅಂತಃಕರಣದ ನಾಲ್ಕು ಸ್ವರೂಪಗಳೂ ಕೂಡ ಶಿವನ ನಾಲ್ಕು ಸ್ವರೂಪಗಳೇ ಆಗಿವೆಯೇ ಹೊರತು ಶಿವನಿಗಿಂತ ಬೇರೆ ಯಾವ ವಸ್ತುವೂ ಇರುವುದಿಲ್ಲ.

೯–೧೦. ಕೆಲವು ಮುನಿಗಳಿಂದ ಶಿವನು ಸಮಸ್ತ ವ್ಯಸ್ತ ಸ್ವರೂಪನಾಗಿಯೂ, ಸಮಸ್ತ ಜಾತಿ ಸ್ವರೂಪನಾಗಿಯೂ, ಹೇಳಲ್ಪಡುತ್ತಾನೆ. ಪಿಂಡವೆಂಬ ವ್ಯಕ್ತಿ ಶಬ್ದಕ್ಕೆ ಜ್ಞಾನ ಸ್ವರೂಪನಾದ ಶಿವನ ಎಲ್ಲಾ ಚರಾಚರ ಪ್ರಾಣಿಗಳ ಶರೀರಗಳು ಎಂದು ಅರ್ಥವಾಗುತ್ತದೆ. ಜಾತಿ ಶಬ್ದಕ್ಕೆ ಪೃಥಿವೀತ್ವ, ದ್ರವ್ಯತ್ವ ಮೊದಲಾದ ಸಮಸ್ತ ಸತ್ತಾ ಎಂಬ ಸಾಮಾನ್ಯಗಳು ಎಂದೂ,ಅರ್ಥವಾಗುತ್ತದೆ. ದ್ರವ್ಯಗುಣ, ಕರ್ಮಗಳೆಂಬ ಮೂರುಪದಾರ್ಥಗಳಲ್ಲಿರುವ ಸತ್ತೆಗೆ ಮಹಾ ಸಾಮಾನ್ಯವು ಎಂದು ಅರ್ಥವಾಗುತ್ತದೆ.

ವಿರಾಟ್ ಹಿರಣ್ಯಗರ್ಭಾತ್ಮಾ ಕೈಶ್ಚಿ ದೀಶೋ ನಿಗದ್ಯತೇ ।
ಹಿರಣ್ಯಗರ್ಭೋ ಲೋಕಾನಾಂ ಹೇತುಃ ಲೋಕಾತ್ಮಕೋ ವಿರಾಟ್ ॥

ಸೂತ್ರಾಽವ್ಯಾಕೃತ ರೂಪಂ ತಂ ಶಿವಂ ಶಂಸಂತಿ ಕೇಚನ ।
ಅವ್ಯಾಕೃತಂ ಪ್ರಧಾನಂ ಹಿ ತದ್ರೂಪಂ ಪರಮೇಷ್ಠಿನಃ ॥೧೨॥

ಲೋಕಾ ಯೇನೈವ ತಿಷ್ಠಂತಿ ಸೂತ್ರೇ ಮಣಿಗಣಾ ಇವ ।
ತತ್ಸೂತ್ರ ಮಿತಿ ವಿಜ್ಞೇಯಂ ರೂಪಮದ್ಭುತ ವಿಕ್ರಮಂ ॥೧೩॥

ಅಂತರ್ಯಾಮೀ ಪರಃ ಕೈಶ್ಚಿತ್ ಕೈಶ್ಚಿದೀಶಃ ಪ್ರಕೀರ್ತ್ಯತೇ ।
ಸ್ವಯಂ ಜ್ಯೋತಿ ಸ್ಸ್ವಯಂವೇದ್ಯಃ ಶಿವಃ ಶಂಭು ರ್ಮಹೇಶ್ವರಃ ॥

---

೧೧-೧೩. ಶಿವನ ಬೇರೆ ನಾಲ್ಕು ರೂಪಗಳನ್ನು ವರ್ಣಿಸುತ್ತಾರೆ:— ಪರಮೇಶ್ವರನು ವಿರಾಟ್ ಸ್ವರೂಪನೆಂತಲೂ, ಹಿರಣ್ಯಗರ್ಭಸ್ವರೂಪ ನೆಂತಲೂ, ಕೆಲವು ಮುನಿಗಳಿಂದ ಹೇಳಲ್ಪಡುತ್ತಾನೆ. ಹಿರಣ್ಯ ಗರ್ಭ ನೆಂದರೆ ಎಲ್ಲಾ ಲೋಕಗಳಿಗೂ, ಕಾರಣನು (ಸೃಷ್ಟಿಕರ್ತನು) ವಿರಾಟ್ ಎಂದರೆ ಸಮಸ್ತ ಲೋಕ (ಪ್ರಪಂಚ) ಸ್ವರೂಪನು. ಕೆಲವು ಮುನಿಗಳು ಆ ಶಿವನನ್ನು ಸೂತ್ರಸ್ವರೂಪನೆಂತಲೂ, ಅವ್ಯಾಕೃತ ಸ್ವರೂಪನೆಂತಲೂ ಹೇಳುತ್ತಾರೆ. ಸ್ವಯಂ ಭುವನಾದ ಶಿವನ ಅವ್ಯಾಕೃತ ರೂಪವೆಂದರೆ ಪ್ರಧಾನವು, ಮಾಯಾ ಶಕ್ತಿಯು. ದಾರದಲ್ಲಿ ಮಣಿಗಳ ಸಮೂಹಗಳೋ ಪಾದಿಯಲ್ಲಿ ಯಾವ ಶಿವನ ಧಾರದಲ್ಲಿ ಸಮಸ್ತ ಪ್ರಪಂಚಗಳೂ ಇರುತ್ತ ವೆಯೋ, ಆ ಶಿವನು ಆಶ್ಚರ್ಯಕರವಾದ ಪರಾಕ್ರಮವುಳ್ಳ ಸೂತ್ರ ಸ್ವರೂಪ ನೆಂದು ತಿಳಿಯಲ್ಪಡತಕ್ಕವನು.

೧೪-೧೫. ಮಹೇಶ್ವರನಾದ ಶಿವನನ್ನು ಕೆಲವರು ಅಂತರ್ಯಾಮಿ ಯನ್ನಾಗಿಯೂ, ಪರಸ್ವರೂಪನನ್ನಾಗಿಯೂ, ಇನ್ನೂ ಬೇರೆ ಕೆಲವರು ಸ್ವಯಂ ಜ್ಯೋತಿ ಸ್ವರೂಪನನ್ನಾಗಿಯೂ, (ಸರ್ವಾವ ಭಾಸಕನಾಗಿ ಇದ್ದುಕೊಂಡು ಸ್ವಯ ಪ್ರಕಾಶನಾಗಿ ಇರುವವನನ್ನಾಗಿಯೂ) ಸ್ವಯಂ ವೇದ್ಯನನ್ನಾಗಿಯೂ (ಪ್ರಮಾಣಾಂತರಗಳಿಂದ ತಿಳಿಯಲ್ಪಡ ತಕ್ಕವನಲ್ಲ ಎಂಬುದಾಗಿಯೂ) ಹೇಳುತ್ತಾರೆ. ಶಿವನು ಎಲ್ಲಾ ಪ್ರಾಣಿಗಳಿಗೂ ಅಂತ

ಸರ್ವೇಷಾ ಮೇವ ಭೂತಾನಾಂ ಅಂತರ್ಯಾಮೀ ಶಿವಃ ಸ್ಮೃತಃ ।
ಸರ್ವೇಷಾ ಮೇವ ಭೂತಾನಾಂ ಪರತ್ವಾತ್ ಪರ ಉಚ್ಯತೇ ॥೧೫॥
ಪರಮಾತ್ಮಾ ಶಿವಶ್ಶಂಭುಃ ಶಂಕರಃ ಪರಮೇಶ್ವರಃ ।
ಪ್ರಾಜ್ಞ ತೈಜಸ ವಿಶ್ವಾಖ್ಯಂ ತಸ್ಯ ರೂಪತ್ರಯಂ ವಿದುಃ ॥೧೬॥
ಸುಷುಪ್ತಿ ಸ್ವಪ್ನ ಜಾಗ್ರಂತಂ ಅವಸ್ಥಾತ್ರಯ ಮೇವ ತತ್ ।
ವಿರಾಟ್ ಹಿರಣ್ಯ ಗರ್ಭಾಖ್ಯ ಮವ್ಯಾಕೃತ ಪದಾ ಹ್ವಯಂ ॥೧೭॥
ತುರೀಯಸ್ಯ ಶಿವಸ್ಯಾಸ್ಯ ಅವಸ್ಥಾತ್ರಯ ಗಾಮಿನಃ ।
ಹಿರಣ್ಯ ಗರ್ಭಃ ಪುರುಷಃ ಕಾಲ ಇತ್ಯೇವ ಕೀರ್ತಿತಾಃ ॥೧೮॥

---

ರ್ಯಾಮಿಯಾಗಿ (ಮಾಯೋಪಾಧಿಕ ಚೈತನ್ಯ ಸ್ವರೂಪನಾಗಿ) ಇರೋಣದ ರಿಂದ ಅಂತರ್ಯಾಮಿಯೆಂದು ಹೇಳಲ್ಪಟ್ಟನು. ಶಿವನು ಎಲ್ಲಾ ಪ್ರಾಣಿ ಗಳಿಗೂ ಸುಖವನ್ನುಂಟುಮಾಡುವವನಾಗಿಯೂ, ಪರಮೇಶ್ವರನಾಗಿಯೂ ಪರಮಾತ್ಮನಾಗಿಯೂ ಇದ್ದು ಎಲ್ಲಾ ಪ್ರಾಣಿಗಳಿಗಿಂತಲೂ ಶ್ರೇಷ್ಠನಾಗಿ ರೋಣದರಿಂದ ಪರನೆಂದು ಹೇಳಲ್ಪಡುತ್ತಾನೆ.

೧೬–೧೭. ವಿದ್ವಾಂಸರು ವಸ್ತುತಃ ಆ ಅವಸ್ಥಾತ್ರಯ ರಹಿತನಾದ ಆ ಶಿವನಿಗೆ ಪ್ರಾಜ್ಞನು,ತೈಜಸನು,ವಿಶ್ವನು ಎಂಬ ಕಲ್ಪಿತಗಳಾದ ಮೂರು ರೂಪಗಳನ್ನು ತಿಳಿಯುತ್ತಾರೆ. ಎಂದರೆ ಶಿವನಿಗೆ ಸುಷುಪ್ತ್ಯವಸ್ಥೆಯಲ್ಲಿ ಪ್ರಾಜ್ಞನೆಂತಲೂ, ಸ್ವಪ್ನಾವಸ್ಥೆಯಲ್ಲಿ ತೈಜಸನೆಂತಲೂ, ಜಾಗ್ರದವಸ್ಥೆ ಯಲ್ಲಿ ವಿಶ್ವನೆಂತಲೂ ಹೆಸರುಗಳೆಂದು ತಿಳಿಯುತ್ತಾರೆ. ವಿರಾಟ್ ಹಿರಣ್ಯ ಗರ್ಭ, ಅವ್ಯಾಕೃತ, ಎಂಬ ಮೂರು ಪದಗಳಿಂದ ಹೇಳಲ್ಪಡತಕ್ಕ ಯಾವ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಿವೆಯೋ ಅವುಗಳೇ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನಾಗಿ ತಿಳಿಯು ತ್ತಾರೆ.

೧೮. ತುರೀಯನಾದ (ವಸ್ತುತಃ ಅವಸ್ಥಾತ್ರಯ ರಹಿತನಾದ) ಕಲ್ಪಿತಗಳಾದ ಮೂರು ಅವಸ್ಥೆಗಳುಳ್ಳ ಶಿವನಿಗೆ ಹಿರಣ್ಯಗರ್ಭ (ಬ್ರಹ್ಮನು)

ತಿಸ್ರೋಽವಸ್ಥಾ ಜಗತ್ಸೃಷ್ಟಿ ಸ್ಥಿತಿ ಸಂಹಾರಹೇತವಃ ।
ಭವ ವಿಷ್ಣು ವಿರಿಂಚಾಖ್ಯ ಮವಸ್ಥಾತ್ರಯ ಮೀಶಿತುಃ ॥೧೯॥
ಆರಾಧ್ಯ ಭಕ್ತ್ಯಾ ಮುಕ್ತಿಂ ಚ ಪ್ರಾಪ್ನುವಂತಿ ಶರೀರಿಣಃ
ಕರ್ತಾ ಕ್ರಿಯಾ ಚ ಕಾರ್ಯಂ ಚ ಕರಣಂ ಚೇತಿ ಸೂರಿಭಿಃ ॥೨೦॥
ಶಂಭೋ ಶ್ಚತ್ವಾರಿ ರೂಪಾಣಿ ಕೀರ್ತ್ಯಂತೇ ಪರಮೇಷ್ಠಿನಃ ।
ಪ್ರಮಾತಾ ಚ ಪ್ರಮಾಣಂ ಚ ಪ್ರಮೇಯಂ ಪ್ರಮಿತಿ ಸ್ತದಾ ॥೨೧॥
ಚತ್ವಾರ್ಯೇತಾನಿ ರೂಪಾಣಿ ಶಿವಸ್ಯೈವ ನ ಸಂಶಯಃ ।
ಈಶ್ವರಾಽವ್ಯಾಕೃತ ಪ್ರಾಣ ವಿರಾಟ್ ಭೂತೇಂದ್ರಿಯಾತ್ಮಕಂ ॥೨೨॥

---

ಪುರುಷ (ವಿಷ್ಣುವು) ಕಾಲ (ರುದ್ರನು) ಎಂಬುದಾಗಿ ಹೇಳಲ್ಪಟ್ಟ ಮೂರು ಅವಸ್ಥೆಗಳು ಲೋಕದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣಗಳಾಗಿ ಇವೆ.

೧೯. ಸ್ವಾಮಿಯಾದ ಶಿವನ, ರುದ್ರನು, ವಿಷ್ಣುವು, ಬ್ರಹ್ಮನು ಎಂಬ ಅವಸ್ಥಾತ್ರಯದಲ್ಲಿ ಅಭಿಮಾನಿಗಳಾಗಿರುವ ಮೂರು ಮೂರ್ತಿಗಳನ್ನು ಪ್ರಾಣಿಗಳು (ಜೀವರು) ಭಕ್ತಿಯಿಂದ ಆರಾಧನೆಮಾಡಿ ಮುಕ್ತಿಯನ್ನು (ಮೋಕ್ಷವನ್ನು) ಪಡೆಯುತ್ತಾರೆ.

೨೦–೨೧. ಶಿವನ ಬೇರೇ ರೂಪಗಳನ್ನು ಹೇಳುತ್ತಾರೆ :—ಕರ್ತೃವು ಕ್ರಿಯೆಯು, ಕಾರ್ಯವೂ, (ಪ್ರಯೋಜನವು) ಕರಣವು, ಸಾಧನವು, ಎಂಬ ನಾಲ್ಕು ರೂಪಗಳು ಸ್ವಯಂಭುವಾದ ಆ ಪರಮೇಶ್ವರನ ನಾಲ್ಕು ರೂಪಗಳೇ ಆಗಿವೆಯೆಂದು ವಿದ್ವಾಂಸರು ಹೇಳುತ್ತಾರೆ. ಪ್ರಮಾತೃವೂ, (ಪ್ರಮಾಣಗಳನ್ನು ತಿಳಿದು ಕೊಳ್ಳುವವನು) ಪ್ರಮಾಣಗಳು, ಪ್ರಮೇಯವು (ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲ್ಪಡತಕ್ಕವಸ್ತುವು) ಪ್ರಮಿತಿಯು (ಫಲರೂಪಗಳಾದ ಪ್ರತ್ಯಕ್ಷಾದಿ ಜ್ಞಾನಗಳು) ಎಂಬ ನಾಲ್ಕು ಕೂಡ ಶಿವನ ನಾಲ್ಕು ರೂಪಗಳೇ ಎಂಬ ವಿಷಯದಲ್ಲಿ ಸಂದೇಹವಿಲ್ಲ.

೨೨–೨೫. ಹೇಗೆ ಸಮುದ್ರದ ಅಲೆಗಳು ಸಮುದ್ರದ ನೀರಿನ ರೂಪಾಂತರಗಳೇ ಆಗಿವೆಯೋ ಹಾಗೆಯೇ ಈಶ್ವರ, ಅವ್ಯಾಕೃತ, ಪ್ರಾಣ

**ಶಿವಸ್ಯೈವ ವಿಕಾರೋಽಯಂ ಸಮುದ್ರ ಸ್ಯೇವ ವೀಚಯಃ ।**
**ಈಶ್ವರಂ ಜಗತಾಮಾಹು ರ್ನಿಮಿತ್ತಂ ಕಾರಣಂ ತಥಾ ॥೨೪॥**

**ಅವ್ಯಾಕೃತಂ ಪ್ರಧಾನಂ ಹಿ ತದುಕ್ತಂ ವೇದವಾದಿಭಿಃ ।**
**ಹಿರಣ್ಯ ಗರ್ಭಃ ಪ್ರಾಣಾಖ್ಯೋ ವಿರಾಟ್ ಲೋಕಾತ್ಮಕಃ ಸ್ಮೃತಃ ॥**

**ಮಹಾ ಭೂತಾನಿ ಭೂತಾನಿ ಕಾರ್ಯಾಣಿ ಇಂದ್ರಿಯಾಣಿ ಚ ।**
**ಶಿವಸ್ಯೈತಾನಿ ರೂಪಾಣಿ ಶಂಸಂತಿ ಮುನಿ ಸತ್ತಮಾಃ ॥೨೫॥**

**ಪರಮಾತ್ಮಾ ಶಿವಾದನ್ಯೋ ನಾಸ್ತೀತಿ ಕವಯೋ ವಿದುಃ ।**
**ಶಿವ ಜಾತಾನಿ ತತ್ವಾನಿ ಪಂಚ ವಿಂಶನ್ಮನೀಷಿಭಿಃ ॥೨೬॥**

---

ವಿರಾಟ್, ಭೂತಗಳು ಇಂದ್ರಿಯಗಳು ಎಂಬ ರೂಪಗಳು ಶಿವನ ರೂಪಗಳೇ ಆಗಿವೆ. ಈಶ್ವರ ನೆಂದರೆ ಲೋಕಗಳಿಗೆ ನಿಮಿತ್ತ (ಸಾಧಾರಣ) ಕಾರಣನೆಂದರ್ಥವಾಗುತ್ತದೆ. ಅವ್ಯಾಕೃತವೆಂದರೆ ಪ್ರಧಾನ (ಮಾಯಾ ಶಕ್ತಿ) ಎಂದು ಅರ್ಥವಾಗುತ್ತದೆ. ಆ ನಿಮಿತ್ತ ಕಾರಣವಾದ ಈಶ್ವರ ಸ್ವರೂಪವೇ ವೇದಜ್ಞರಿಂದ ಹೀಗೆ ಹೇಳಲ್ಪಟ್ಟಿತು. ಪ್ರಾಣನೆಂದರೆ ಹಿರಣ್ಯಗರ್ಭನು. ವಿರಾಟ್ ಎಂದರೆ ಪ್ರಪಂಚ ಸ್ವರೂಪನು. ಎಂದು ವಿದ್ವಾಂಸರಿಂದ ಹೇಳಲ್ಪಟ್ಟಿದೆ. ಭೂತಗಳೆಂದರೆ ಅಪಂಚೀಕೃತ (ಸೂಕ್ಷ್ಮ) ಪಂಚ ಮಹಾಭೂತಗಳೆಂದರ್ಥವು. ಇಂದ್ರಿಯಾತ್ಮಕನೆಂದರೆ ಕಾರ್ಯಗಳ ಸ್ವರೂಪನು (ಪಂಚೀಕೃತ ಪಂಚ ಮಹಾಭೂತವೇ ಮೊದಲಾದ ಕಾರ್ಯ ಸ್ವರೂಪನು ಎಂದರ್ಥವು.) ಈ ಪೂರ್ವೋಕ್ತರೂಪಗಳನ್ನು ಮುನಿ ಶ್ರೇಷ್ಠರು ಶಿವನ ರೂಪಗಳನ್ನಾಗಿಯೇ ಹೇಳುತ್ತಾರೆ.

೨೬–೨೭. ಪರಮಾತ್ಮನು ಶಿವನಿಗಿಂತ ಬೇರೆಯುವನಲ್ಲವೆಂದು ಪಂಡಿತರು ತಿಳಿಯುತ್ತಾರೆ. ಪುರುಷನು, ಮೂಲ ಪ್ರಕೃತಿಯು, ಮಹತ್ತತ್ವ, (ಬುದ್ಧಿ), ಅಹಂಕಾರವು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ತನ್ಮಾತ್ರಗಳು, ಒಂದು ಮನಸ್ಸು, ಐದು ಜ್ಞಾನೇಂದ್ರಿಯಗಳು

**ಉಕ್ತಾನಿ ನ ತದನ್ಯಾನಿ ಸಲಿಲಾ ದೂರ್ಮಿವೃಂದವತ್ ।**
**ಪಂಚ ವಿಂಶತ್ಪದಾರ್ಥೇಭ್ಯಃ ಶಿವ ತತ್ವಂ ಪರಂ ವಿದುಃ ॥೨೭॥**
**ತಾನಿ ತಸ್ಮಾದನನ್ಯಾನಿ ಸುವರ್ಣ ಕಟಕಾದಿವತ್ ।**
**ಸದಾ ಶಿವೇಶ್ವರಾ ದ್ಯಾನಿ ತತ್ತ್ವಾನಿ ಶಿವ ತತ್ತ್ವತಃ ॥೨೮॥**
**ಜಾತಾನಿ ನ ತದಾ ನ್ಯಾನಿ ಮೃದ್ದ್ರವ್ಯಂ ಕುಂಭ ಭೇದವತ್ ।**
**ಮಾಯಾ ವಿದ್ಯಾಕ್ರಿಯಾ ಶಕ್ತಿ ಜ್ಞಾನಶಕ್ತಿಃ ಕ್ರಿಯಾಮಯೀ ॥**
**ಜಾತಾ ಶಿವಾ ನ್ನ ಸಂದೇಹಃ ಕಿರಣಾ ಇವ ಸೂರ್ಯತಃ ।**
**ಸರ್ವಾತ್ಮಕಂ ಶಿವಂ ದೇವಂ ಸರ್ವಾಶ್ರಯ ವಿಧಾಯಿನಂ ॥೩೦॥**

---

ಐದು ಕರ್ಮೇಂದ್ರಿಯಗಳು ಐದು ಮಹಾ ಭೂತಗಳು ಹೀಗೆ ಇಪ್ಪತ್ತೈದು ತತ್ತ್ವಗಳು ಶಿವನಿಂದ ಉಂಟಾದವುಗಳೆಂದು ವಿದ್ವಾಂಸರಿಂದ (ಸಾಂಖ್ಯರಿಂದ) ಹೇಳಲ್ಪಟ್ಟಿದೆ. ಈ ತತ್ತ್ವಗಳು ಸಮುದ್ರದ ಅಲೆಗಳ ಸಮೂಹವು ಸಮುದ್ರದ ನೀರಿಗಿಂತ ಹೇಗೆ ಬೇರೆಯಲ್ಲವೋ ಹಾಗೆಯೇ ಶಿವನಿಗಿಂತ ಬೇರೆಯಲ್ಲವು. ಈ ಇಪ್ಪತ್ತೈದು ತತ್ತ್ವಗಳಿಗಿಂತಲೂ ಶಿವನ ಸ್ವರೂಪವು ಶ್ರೇಷ್ಠವೆಂದು ವಿದ್ವಾಂಸರು ತಿಳಿಯುತ್ತಾರೆ.

೨೮. ಉದಾಹರಣಾಂತರದಿಂದ ಹಿಂದೆ ಹೇಳಿದ ವಿಷಯವನ್ನು ಸಮರ್ಥನೆ ಮಾಡುತ್ತಾರೆ:—ಹ್ಯಾಗೆ ಸುವರ್ಣದ ಬಳೆಯು ಸುವರ್ಣವನ್ನು ಬಿಟ್ಟು ಬೇರೇ ಇರುವುದಿಲ್ಲವೋ ಹಾಗೆಯೇ ಈ ಇಪ್ಪತ್ತೈದು ತತ್ತ್ವಗಳು ಶಿವನನ್ನು ಬಿಟ್ಟು ಬೇರೆಯಿರುವುದಿಲ್ಲವು ಸದಾಶಿವೇಶ್ವರನಿಂದ ಯಾವ ತತ್ತ್ವಗಳು ಉಂಟಾದವೋ ಅವುಗಳಿಗಿಂತ ಶಿವಸ್ವರೂಪದಿಂದುಂಟಾದ ತತ್ತ್ವಗಳು ಬೇರೆಯಲ್ಲ. ಹೇಗೆ ಮಣ್ಣೆಂಬ ದ್ರವ್ಯವು ಅನೇಕ ಘಟಗಳಲ್ಲಿ ಅನುವರ್ತಿಸಿಕೊಂಡಿದ್ದು, ಆ ಮಣ್ಣೆಂಬ ವಸ್ತುವನ್ನು ಬಿಟ್ಟು ಅನೇಕ ಘಟಗಳು ಇರಲಾರವೋ ಆ ರೀತಿಯಲ್ಲಿ ಶಿವಸ್ವರೂಪವನ್ನು ಬಿಟ್ಟು ಯಾವ ತತ್ತ್ವಗಳೂ ಇರಲಾರವು.

೨೯-೩೧. ಮಾಯಾ ಮೊದಲಾದ ಐದು ಸ್ವರೂಪಗಳುಳ್ಳ ಗೌರೀ ದೇವಿಯೂ ಕೂಡ ಶಿವನಿಂದಲೇ ಉಂಟಾದಳು. ಎಂಬುದನ್ನು ದೃಷ್ಟಾಂತರ

ಭಜಸ್ವ ಸರ್ವ ಭಾವೇನ ಶ್ರೇಯಃ ಶ್ಚೇತ್ಪ್ರಾಪ್ತು ಮಿಚ್ಛಸಿ ॥೩೧॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಷೋಡಶೋಽಧ್ಯಾಯಃ

---

ವಾಗಿ ಹೇಳುತ್ತಾರೆ:—ಸೂರ್ಯನಿಂದುಂಟಾಗುವ ಕಿರಣಗಳೋಪಾದಿಯಲ್ಲಿ ಮಾಯಾ ಸ್ವರೂಪಳೂ, ವಿದ್ಯಾ ಸ್ವರೂಪಳೂ, ಕ್ರಿಯಾ ಶಕ್ತಿ ಸ್ವರೂಪಳೂ ಜ್ಞಾನ ಶಕ್ತಿ ಸ್ವರೂಪಳೂ, ಕ್ರಿಯಾ ಸ್ವರೂಪಳೂ ಆದ ಗೌರೀದೇವಿಯೂ ಶಿವನಿಂದಲೇ ಉಂಟಾದಳು. ಎಂಬುದರಲ್ಲಿ ಸಂದೇಹವಿಲ್ಲ. ಎಲೈ ಸನತ್ಕುಮಾರ ಮುನಿಯೇ, ನೀನು ಶ್ರೇಯಸ್ಸನ್ನು ಪಡೆಯ ಬೇಕೆಂಬ ಇಚ್ಛೆಯುಳ್ಳವನಾಗಿದ್ದ ಪಕ್ಷದಲ್ಲಿ ಎಲ್ಲಾ ಆಶ್ರಯಗಳನ್ನೂ ಮಾಡಿಕೊಡುವಂಥಾ ಸರ್ವ ಸ್ವರೂಪನಾದ ಶಿವನಸ್ವರೂಪವನ್ನು ಸರ್ವ ಪ್ರಕಾರದಿಂದ ಆರಾಧಿಸು. ಎಂದು ನಂದಿಕೇಶ್ವರನು ಸನತ್ಕುಮಾರ ಮುನಿಯನ್ನು ಕುರಿತು ಹೇಳಿದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನಾರನೆಯ
ಅಧ್ಯಾಯವು ಮುಗಿದುದು.

---

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಸಪ್ತದಶೋಽಧ್ಯಾಯಃ

**ಅಧ್ಯಾಯೇಽಸ್ಮಿನ್ ಸಪ್ತದಶೇ ಸಗುಣಾದ್ರುದ್ರ ವಿಗ್ರಹಾತ್ ।**
**ವಿಶ್ವೋದ್ಭವಶ್ಚ ದೇವಾನಾ ಮುಪದೇಶೋ ನಿರೂಪ್ಯತೇ ॥**

**॥ ಸನತ್ಕುಮಾರ ಉವಾಚ ॥**

**ಭೂಯೋ ದೇವಗಣ ಶ್ರೇಷ್ಠ ಶಿವಮಾಹಾತ್ಮ್ಯಮುತ್ತಮಂ ।**
**ಶೃಣ್ವತೋ ನಾಸ್ತಿ ಮೇ ತೃಪ್ತಿಃ ತ್ವದ್ವಾಕ್ಯಾಽಮೃತಪಾನತಃ ॥ ೧ ॥**
**ಕಥಂ ಶರೀರೀ ಭಗವಾನ್ ಕಸ್ಮಾದ್ರುದ್ರಃ ಪ್ರತಾಪವಾನ್ ।**
**ಸರ್ವಾತ್ಮಾ ಚ ಕಥಂ ಶಂಭುಃ ಕಥಂ ಪಾಶುಪತವ್ರತಂ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನೇಳನೆಯ ಅಧ್ಯಾಯವು.

ಈ ಹದಿನೇಳನೆಯ ಅಧ್ಯಾಯದಲ್ಲಿ ಸಗುಣ ಸ್ವರೂಪನಾದ ರುದ್ರ ಮೂರ್ತಿಯಿಂದ ಪ್ರಪಂಚ ಸೃಷ್ಟಿಯೂ, ದೇವತೆಗಳಿಗೆ ರುದ್ರನುಮಾಡುವ ಉಪದೇಶವೂ, ನಿರೂಪಿಸಲ್ಪಡುತ್ತದೆ.

೧ ಸನತ್ಕುಮಾರ ಮುನಿಯು ಶಿವನ ಸಗುಣ ಸ್ವರೂಪವು ಯಾವುದೆಂದು ನಂದಿಕೇಶ್ವರನನ್ನು ಕುರಿತು ಪ್ರಶ್ನೆಮಾಡುತ್ತಾನೆ:—ಎಲೈ ದೇವ ಗಣಗಳಲ್ಲಿಶ್ರೇಷ್ಠನಾದ ನಂದಿಕೇಶ್ವರನೇ, ಉತ್ತಮವಾದ ಶಿವಮಾಹಾತ್ಮ್ಯೆಯನ್ನು ಮತ್ತೂ ಕೇಳ ಲಿಚ್ಛಿಸುವ ನನಗೆ ನಿನ್ನವಾಕ್ಯವೆಂಬ ಅಮೃತವನ್ನು ಎಷ್ಟು ಪಾನಮಾಡಿದರೂ ಕೂಡ ತೃಪ್ತಿಯಿಲ್ಲ.

೨. ಭಗವಂತನಾದ ರುದ್ರನು ಶರೀರವುಳ್ಳವನಾಗಿ ಪ್ರತಾಪಶಾಲಿಯಾಗಿ ಯಾವನಿಂದ ಹೇಗೆ ಉಂಟಾದನು? ಮತ್ತು ಅವನ ಸರ್ವಸ್ವರೂಪವೂ ಹೇಗಿದೆ? ಪಾಶುಪತವ್ರತದ ಸ್ವರೂಪವು ಯಾವುದು? ಅವನು ಪ್ರಧಾನರಾದ ದೇವತೆಗಳಿಂದ ಹೇಗೆ ಕೇಳಲ್ಪಟ್ಟನು? ಮತ್ತೂ ನೋಡಲ್ಪಟ್ಟನು? ಎಂದು ಸನತ್ಕುಮಾರನು ಪ್ರಶ್ನೆಮಾಡಲು,

ಕಥಂ ವಾ ದೇವಮುಖ್ಯೈಶ್ಚ ಶ್ರುತೋ ದೃಷ್ಟಶ್ಚ ಶಂಕರಃ।

॥ ಶೈಲಾದಿ ರುವಾಚ ॥

ಅವ್ಯಕ್ತಾ ದಭವ ತ್ಸ್ಥಾಣುಃ ಶಿವಃ ಪರಮ ಕಾರಣಂ ॥ ೩ ॥

ಸ ಸರ್ವ ಕಾರಣೋ ಪೇತ ಋಷಿರ್ವಿಶ್ವಾಧಿಕಃ ಪ್ರಭುಃ ।

ದೇವಾನಾಂ ಪ್ರಥಮಂ ದೇವಂ ಜಾಯಮಾನಂ ಮುಖಾಂಬುಜಾತ್ ॥

ದದರ್ಶ ಚಾಗ್ರೇ ಬ್ರಹ್ಮಾಣಂ ಚಾಜ್ಞಯಾ ತಮ ವೈಕ್ಷತ ।

ಸೃಷ್ಟೋ ರುದ್ರೇಣ ದೇವೇಶಃ ಸಸರ್ಜ ಸಕಲಂ ಚ ಸಃ ॥ ೫ ॥

ವರ್ಣಾಶ್ರಮ ವ್ಯವಸ್ಥಾಶ್ಚ ಸ್ಥಾಪಯಾಮಾಸ ವೈ ವಿರಾಟ್ ।

ಸೋಮಂ ಸಸರ್ಜ ಯಜ್ಞಾರ್ಥಂ ಸೋಮಾದಿದಮಜಾಯತ ॥ ೬ ॥

---

೩–೪. ಪರಮಾತ್ಮ ರೂಪನಾದ ಕೂಟಸ್ಥನಿಂದ ಸಂಸಾರ ಮಂಡಪಕ್ಕೆ ಕಂಬವಾಗಿಯೂ, ಪರಮ ಕಾರಣನಾಗಿಯೂ ಮಂಗಳ ಸ್ವರೂಪನಾಗಿಯೂ, ಪ್ರಪಂಚಕ್ಕೆ ಜ್ಯೇಷ್ಠನಾಗಿಯೂ, ಸ್ವಾಮಿಯಾಗಿಯೂ, ಇರುವ ಮಹರ್ಷಿಯಾದ ರುದ್ರನು ಉಂಟಾದನು. ಆ ಮೇಲೆ ಅವನು ತನ್ನ ಮುಖದಿಂದ ಉಂಟಾದವನಾಗಿಯೂ ದೇವತೆಗಳಿಗೆಲ್ಲರಿಗೂ ಮೊದಲನೆಯವನಾಗಿಯೂ, ಇರುವ ಚತುರ್ಮುಖ ಬ್ರಹ್ಮನನ್ನು ನೋಡಿ ಸೃಷ್ಟಿಗೋಸ್ಕರ ಆಜ್ಞೆ ಮಾಡಿದನು. (ರುದ್ರದೇವನ ಆಜ್ಞಾನುಸಾರವಾಗಿ ದೇವತೆಗಳಿಗೆ ಸ್ವಾಮಿಯಾದ ಬ್ರಹ್ಮನು ಎಲ್ಲವನ್ನೂ ಸೃಷ್ಟಿಸಿ. ವರ್ಣಾಶ್ರಮಗಳ ವ್ಯವಸ್ಥೆಯನ್ನು ಸ್ಥಾಪಿಸಿದನು. ಅಲ್ಲದೇ ಪಾರ್ವತೀ ಸಮೇತನಾದ ಪರಮೇಶ್ವರನನ್ನು ಸೋಮಲತೆಯನ್ನು ಯಜ್ಞಕ್ಕೋಸ್ಕರ ಸೃಷ್ಟಿಸಿದನು).

೫–೬. ದೇವತೆಗಳಿಗೆ ಸ್ವಾಮಿಯಾಗಿಯೂ, ವಿರಾಟ್ ಸ್ವರೂಪನಾಗಿಯೂ, ಇರುವ ಬ್ರಹ್ಮನು ರುದ್ರದೇವನ ಆಜ್ಞಾನುಸಾರವಾಗಿ ಎಲ್ಲವನ್ನೂ ಸೃಷ್ಟಿಸಿ,ಬ್ರಾಹ್ಮಣಾದಿ ಜಾತಿಗಳ ಮತ್ತು ಬ್ರಹ್ಮಚರ್ಯಾದ್ಯಾಶ್ರಮಗಳ ವ್ಯವಸ್ಥೆಗಳನ್ನು ದೃಢಪಡಿಸಿದನು. ಅಲ್ಲದೇ ಪಾರ್ವತೀ ಸಮೇತನಾದ ಪರಮೇಶ್ವರನನ್ನು ಸೋಮದ್ರವ್ಯವನ್ನು ಯಜ್ಞಕ್ಕೋಸ್ಕರ ಸೃಷ್ಟಿಸಿದನು.

**ಚರುಶ್ಚ ವಹ್ನಿ ರ್ಯಜ್ಞಶ್ಚ ವಜ್ರಪಾಣಿಃ ಶಚೀಪತಿಃ ।**
**ವಿಷ್ಣುರ್ನಾರಾಯಣಃ ಶ್ರೀಮಾನ್ ಸರ್ವಂ ಸೋಮ ಮಯಂಜಗತ್॥**

**ರುದ್ರಾಧ್ಯಾಯೇನ ತೇ ದೇವಾ ರುದ್ರಂ ತುಷ್ಟುವುರೀಶ್ವರಂ ।**
**ಪ್ರಸನ್ನ ವದನಸ್ತಸ್ಥೌ ದೇವಾನಾಂ ಮಧ್ಯತಃ ಪ್ರಭುಃ ॥ ೮ ॥**

**ಅಪಹೃತ್ಯ ಚ ವಿಜ್ಞಾನ ಮೇಷಾ ಮೇವ ಮಹೇಶ್ವರಃ ।**
**ದೇವಾ ಹ್ಯ ಪೃಚ್ಛಂ ಸ್ತಂ ದೇವಂ ಕೋ ಭವಾ ನಿತಿ ಶಂಕರಂ ॥ ೯ ॥**

---

೭. ಆ ಸೋಮನಿಂದ (ಉಮಾ ಸಹಿತನಾದ ಪರಮೇಶ್ವರನಿಂದ) ಚರುವೂ, (ಹೋಮಮಾಡುವುದಕ್ಕೆ ಯೋಗ್ಯವಾದ ಹವೀರೂಪವಾದ ಸೋಮವೂ, ಅಗ್ನಿಯೂ, ಯಜ್ಞವೂ, ವಜ್ರಪಾಣಿಯಾಗಿಯೂ, ಶಚೀದೇವಿಯ ಗಂಡನಾಗಿಯೂ,ಇರುವ ದೇವೇಂದ್ರನೂ, ಶ್ರೀಮನ್ಮಹಾವಿಷ್ಣುವೂ ಉಂಟಾಗಿ ಎಲ್ಲಾಜಗತ್ತೂ ಸೋಮರೂಪನಾದ ರುದ್ರಮಯವಾಯಿತು.

೮. ದೇವತೆಗಳು ಈಶ್ವರನಾದ ರುದ್ರದೇವನನ್ನು ರುದ್ರಾಧ್ಯಾಯದಿಂದ ಸ್ತೋತ್ರಮಾಡುತ್ತಿರಲು ಮಹೇಶ್ವರನಾಗಿಯೂ, ಇರುವ ರುದ್ರದೇವನು ದೇವತೆಗಳ ಬುದ್ಧಿಯನ್ನು ಅಪಹರಿಸಿ ದೇವತೆಗಳ ಮಧ್ಯದಲ್ಲಿ ಪ್ರಸನ್ನ ಮುಖನಾಗಿ ನಿಂತುಕೊಂಡನು.

೯—೧೧. ದೇವತೆಗಳು ಶಂಕರನಾದ ರುದ್ರದೇವನನ್ನು ನೀನು ಯಾರೆಂದುಪ್ರಶ್ನೆಮಾಡಲು, ಭಗವಂತ ನಾದ ರುದ್ರದೇವನುಹೇಳುತ್ತಾನೆ. ಎಲೈ ದೇವತೆಗಳೇ, ನಾನು ಪುರಾತನನಾಗಿಯೂ, (ಸೃಷ್ಟಿಗಿಂತ ಪೂರ್ವಭಾವಿಯಾಗಿಯೂ,) ಅದ್ವಿತೀಯನಾಗಿಯೂ, ಮೊದಲನೆಯವನಾಗಿಯೂ ಇದ್ದು ವರ್ತಮಾನ ಕಾಲದಲ್ಲಿ (ಈಗನಡೆಯುವ ಕಾಲದಲ್ಲಿ) ಯೂ, ಇರುತ್ತೇನೆ. ಮುಂದೆ ಭವಿಷ್ಯತ್ಕಾಲದಲ್ಲಿಯೂ ಇರುವೆನು. ಲೋಕದಲ್ಲಿ ನನಗಿಂತಬೇರೆಯಾಗಿ ಚೇತನನು ಇನ್ನೊಬ್ಬನಿಲ್ಲ. ಅಚೇತನವಾದ ಘಟಪಟಾದಿವಸ್ತುಗಳೂ ನನಗಿಂತ ಬೇರೆಯಾಗಿಲ್ಲ. ಎಲ್ಲವೂ ಮಾಯಿಕ

**ಅಬ್ರವೀದ್ಭಗವಾನ್ ರುದ್ರೋ ಹ್ಯಹಮೇಕಃ ಪುರಾತನಃ ।**
**ಆಸಂ ಪ್ರಥಮ ಏವಾಹಂ ವರ್ತಾಮಿ ಚ ಸುರೋತ್ತಮಾಃ ॥೧೦॥**
**ಭವಿಷ್ಯಾಮಿ ಚ ಲೋಕೇಽಸ್ಮಿನ್ ಮತ್ತೋ ನಾನ್ಯಃ ಕುತಶ್ಚನ ।**
**ವ್ಯತಿರಿಕ್ತಂ ನ ಮತ್ತೋಽಸ್ತಿ ನಾನ್ಯತ್ಕಿಂಚಿತ್ ಸುರೋತ್ತಮಾಃ ॥**
**ನಿತ್ಯೋಽನಿತ್ಯೋಽಹಮನಘೋ ಬ್ರಹ್ಮಾಽಹಂ ಬ್ರಹ್ಮಣ ಸ್ಪತಿಃ ।**
**ದಿಶಶ್ಚ ವಿದಿ ಶಶ್ಚಾಽಹಂ ಪ್ರಕೃತಿಶ್ಚ ಪುಮಾನಹಂ ॥೧೨॥**
**ತ್ರಿಷ್ಟುಪ್ ಜಗತ್ಯನುಷ್ಟುಪ್ ಚ ಛಂದೋಽಹಂ ತನ್ಮಯಃ ಶಿವಃ ।**
**ಸತ್ಯೋಽಹಂ ಸರ್ವಗ ಶ್ಶಾಂತ ಸ್ತ್ರೇತಾಗ್ನಿಃ ಗೌರವಂ ಗುರುಃ ॥೧೩॥**
**ಗೌರಹಂ ಗಹ್ವರಶ್ಚಾಹಂ ನಿತ್ಯಂ ಗಹನಗೋಚರಃ ।**
**ಜ್ಯೇಷ್ಠೋಽಹಂ ಸರ್ವತತ್ವಾನಾಂ ವರಿಷ್ಠೋಽಹ ಮಪಾಂ ಪತಿಃ ॥**

---

ಪದಾರ್ಥಗಳಾಗಿರುವುದರಿಂದ ನನ್ನಲ್ಲಿ ಅವು ಆರೋಪಿತಗಳಾಗಿದ್ದು ನನ್ನ ತಾದಾತ್ಮ್ಯ ಭಾವವನ್ನು ಹೊಂದುವವುಗಳೆಂದು ತಾತ್ಪರ್ಯವು.

೧೨–೧೩. ನಾನು ನಿತ್ಯನಾಗಿಯೂ, (ಆತ್ಮಸ್ವರೂಪದಿಂದ ನಾಶ ವಿಲ್ಲದವನಾಗಿಯೂ, ಅನಿತ್ಯಗಳಾದ ಘಟಾದಿ ಸ್ವರೂಪದಿಂದ ಅನಿತ್ಯ ನಾಗಿಯೂ, ಅಹಂಕಾರವಿಲ್ಲದಿರೋಣದರಿಂದ ಪಾಪವಿಲ್ಲದವನಾಗಿಯೂ, ಹಿರಣ್ಯಗರ್ಭ ಸ್ವರೂಪನಾಗಿಯೂ, ವೇದಗಳಿಗೆ ಪಾಲಕನಾಗಿಯೂ, ಪೂರ್ವಾದಿ ದಿಕ್ಕುಗಳ ಸ್ವರೂಪನಾಗಿಯೂ, ಆಗ್ನೇಯಾದಿ ವಿದಿಕ್ಕುಗಳ ಸ್ವರೂಪನಾಗಿಯೂ, ಪ್ರಕೃತಿ (ಪ್ರಧಾನ) ಸ್ವರೂಪನಾಗಿಯೂ, ಹನ್ನೊಂದು ಅಕ್ಷರಗಳಿಂದ ಕೂಡಿದ ಪಾದವುಳ್ಳ ತ್ರಿಷ್ಟುಪ್‌ಛಂದಃ ಸ್ವರೂಪನಾಗಿಯೂ, ಹನ್ನೆರಡು ಅಕ್ಷರಗಳಿಂದಕೂಡಿದ ಪಾದವುಳ್ಳ ಜಗತೀ, ಅನುಷ್ಟುಪ್ ಛಂದಃ ಸ್ವರೂಪನಾಗಿಯೂ (ಇರುವೆನು). ಛಂದೋಮಯನಾದ ಶಿವ ಸ್ವರೂಪನಾಗಿಯೂ, ವಾಸ್ತವವಾದ ಸ್ವರೂಪದಲ್ಲಿ ಎಲ್ಲಾ ಕಡೆಯಲ್ಲಿಯೂ ಇರುವವನಾಗಿಯೂ, ಶಾಂತನಾಗಿಯೂ, ದಕ್ಷಿಣಾಗ್ನಿ ಆಹವನೀಯ ಗಾರ್ಹಪತ್ಯಗಳೆಂಬ ಶ್ರೌತಾಗ್ನಿ ಸ್ವರೂಪನಾಗಿಯೂ, ಅಧ್ಯಾಪನ ಸ್ವರೂಪನಾಗಿಯೂ, ಗುರು ಸ್ವರೂಪನಾಗಿಯೂ, ಹಿತೋಪದೇಶಕನಾಗಿಯೂ ಇರುವೆನು.

೧೪–೧೫. ಮತ್ತೂ ಭೂಮಿಸ್ವರೂಪನಾಗಿಯೂ, ಗುಹಾ (ಬುದ್ಧಿ) ಸ್ವರೂಪ ನಾಗಿಯೂ, ಆನಂದವನ ಮೊದಲಾದುವುಗಳಲ್ಲಿ ಯಾವಾಗಲೂ

**ಆಪೋಽಹಂ ಭಗವಾನೀಶ ಸ್ತೇಜೋಽಹಂ ವೇದಿ ರಪ್ಯಹಂ ।**
**ಋಗ್ವೇದೋಽಹಂ ಯಜುರ್ವೇದಃಸಾಮವೇದೋಽಹಮಾತ್ಮಭೂಃ॥**
**ಆಥರ್ವ ಣೋಽಹಂ ಮಂತ್ರೋಽಹಂ ತಥಾಚಾಂಗಿರಸಾಂ ವರಃ ।**
**ಇತಿಹಾಸ ಪುರಾಣಾನಿ ಕಲ್ಪೋಽಹಂ ಕಲ್ಪನಾಽಪ್ಯಹಂ ॥೧೬॥**
**ಅಕ್ಷರಂ ಚ ಕ್ಷರಂ ಚಾ ಹಂ ಕ್ಷಾಂತಿಃ ಶಾಂತಿ ರಹಂ ಕ್ಷಮಾ ।**
**ಗುಹ್ಯೋಽಹಂ ಸರ್ವವೇದೇಷು ವರೇಣ್ಯೋಽಹಮಜೋಽಪ್ಯಹಂ ॥**

---

ಪ್ರತ್ಯಕ್ಷನಾಗಿಯೂ, ಇಪ್ಪತ್ತೈದು ತತ್ವಗಳ ಪೈಕಿ ಜ್ಯೇಷ್ಠನು(ಮುಂಚಿನವನು) ಆಗಿಯೂ, ಗುಣಾಧಿಕನಾಗಿಯೂ, ಸಮುದ್ರ ಸ್ವರೂಪನಾಗಿಯೂ, ನೀರಿನ ಸ್ವರೂಪನಾಗಿಯೂ, ಭಗವಂತನಾದ ಪರಮಾತ್ಮ ಸ್ವರೂಪನಾಗಿಯೂ,ತೇಜೋರೂಪನಾಗಿಯೂ,ಪರಿಷ್ಕೃತವಾದ ಯಜ್ಞಭೂಮಿ ಸ್ವರೂಪನಾಗಿಯೂ, ಆಕಾಶ ಸ್ವರೂಪನಾಗಿಯೂ, ಋಗ್ವೇದ, ಯಜುರ್ವೇದ ಸಾಮವೇದ, ಮತ್ತು ಅಥರ್ವಣ ವೇದಗಳೆಂಬ ನಾಲ್ಕು ವೇದ ಸ್ವರೂಪನಾಗಿಯೂ, ಅಥರ್ವಣ ಶಾಖಾ ಪ್ರಭೇದವಾದ ಆಂಗಿರಸ್ಸೆಂಬ ಶಾಖಾ ಮಂತ್ರಗಳ ಪೈಕಿ ಶ್ರೇಷ್ಠವಾದ ಮಂತ್ರ ಸ್ವರೂಪನಾಗಿಯೂ, ಇರುವೆನು. ಇದರಂತೆಯೇ,

೧೬–೧೮. ಭಾರತ, ರಾಮಾಯಣ ಮೊದಲಾದ ಇತಿಹಾಸ ಸ್ವರೂಪನಾಗಿಯೂ, ಹದಿನೆಂಟು ಪುರಾಣ ಸ್ವರೂಪನಾಗಿಯೂ, ಕರ್ಮಗಳ ಸಿದ್ಧವಾದ ಪ್ರಯೋಗವನ್ನು ಹೇಳುವ ಬೋಧಾಯನ, ಆಪಸ್ತಂಬ, ಮೊದಲಾದ ಸೂತ್ರಕಾರಸ್ವರೂಪನಾಗಿಯೂ, ಜಗತ್ತಿನ ರಚನಾ ಸ್ವರೂಪನಾಗಿಯೂ ನಾಶವಿಲ್ಲದ ಕೂಟಸ್ಥ ಸ್ವರೂಪನಾಗಿಯೂ, ನಾಶವನ್ನು ಹೊಂದುವ ಸ್ವಭಾವವುಳ್ಳ ವಸ್ತುಸ್ವರೂಪನಾಗಿಯೂ, ಶಾಂತಿ ಸ್ವರೂಪನಾಗಿಯೂ, ಕ್ಷಮಾ ಸ್ವರೂಪನಾಗಿಯೂ, ಎಲ್ಲಾ ವೇದಗಳಲ್ಲಿಯೂ, ಸಂವೃತ್ (ಮುಚ್ಚಲ್ಪಟ್ಟ) ಸ್ವರೂಪವುಳ್ಳವನಾಗಿಯೂ, ಎಲ್ಲರಿಂದಲೂ ಸೇವಿಸಲು ಅರ್ಹನಾಗಿಯೂ, ಉತ್ಪತ್ತಿ ಇಲ್ಲದವನಾಗಿಯೂ, ಪರಿಶುದ್ಧವಾದ ಹೃದಯ ಕಮಲ ಸ್ವರೂಪನಾಗಿಯೂ, ಅದರ ಮಧ್ಯಭಾಗ ಸ್ವರೂಪನಾಗಿಯೂ, ಕೊನೆಯಭಾಗ ಸ್ವರೂಪನಾಗಿಯೂ, ಎಲ್ಲಾ ಪ್ರಾಣಿಗಳ

ಪುಷ್ಕರಂ ಚ ಪವಿತ್ರಂ ಚ ಮಧ್ಯಂ ಚಾಽಹಂ ತತಃ ಪರಂ ।
ಬಹಿ ಶ್ಚಾಹಂ ತಥಾ ಚಾಂತಃ ಪುರಾಸ್ತಾದಹ ಮವ್ಯಯಃ ॥೧೮॥

ಜ್ಯೋತಿಶ್ಚಾಹಂ ತಮಶ್ಚಾಹಂ ಬ್ರಹ್ಮಾ ವಿಷ್ಣುರ್ಮಹೇಶ್ವರಃ ।
ಬುದ್ಧಿಶ್ಚಾಹ ಮಹಂಕಾರ ಸ್ತನ್ಮಾತ್ರಾಣೀಂದ್ರಿಯಾಣಿ ಚ ॥೧೯॥

ಏವಂ ಸರ್ವಂ ಚ ಮಾಮೇವ ಯೋ ವೇದ ಸುರಸತ್ತಮಾಃ ।
ಸ ಏವ ಸರ್ವ ವಿತ್ಸರ್ವಂ ಸರ್ವಾತ್ಮಾ ಪರಮೇಶ್ವರಃ ॥೨೦॥

ಗಾಂ ಗೋಭಿ ರ್ಬ್ರಾಹ್ಮಣಾನ್ ಸರ್ವಾನ್ ಬ್ರಾಹ್ಮಣ್ಯೇನ ಹವೀಂ ಷಿ ಚ ।
ಆಯುಷಾಽಯುಸ್ತಥಾ ಸತ್ಯಂ ಸತ್ಯೇನ ಸುರಸತ್ತಮಾಃ ॥೨೧॥

---

ಒಳಗೂ ಹೊರಗೂ, ಮುಂದುಗಡೆಯೂ ಇರುವವನಾಗಿಯೂ, ನಾಶರಹಿತ ನಾಗಿಯೂ ಇರುವೆನು.

೧೯–೨೦. ಮತ್ತು ನಾನು ಜ್ಯೋತಿಃ ಸ್ವರೂಪನಾಗಿಯೂ, ಅಂಧ ಕಾರ ಸ್ವರೂಪನಾಗಿಯೂ, ಸೃಷ್ಟಿಕರ್ತನಾದ ಬ್ರಹ್ಮಸ್ವರೂಪನಾಗಿಯೂ, ಪಾಲಕನಾದ ವಿಷ್ಣು ಸ್ವರೂಪನಾಗಿಯೂ, ಸಂಹಾರ ಕರ್ತನಾದ ಮಹೇ ಶ್ವರ ಸ್ವರೂಪನಾಗಿಯೂ, ಬುದ್ಧಿ ಸ್ವರೂಪನಾಗಿಯೂ, ಅಹಂಕಾರ ಸ್ವರೂಪನಾಗಿಯೂ, ಶಬ್ದತನ್ಮಾತ್ರೆ ಮೊದಲಾದ ತನ್ಮಾತ್ರ ಸ್ವರೂಪ ನಾಗಿಯೂ, ಕರ್ಮೇಂದ್ರಿಯ, ಜ್ಞಾನೇಂದ್ರಿಯ ಸ್ವರೂಪನಾಗಿಯೂ (ಸರ್ವಸ್ವರೂಪನಾಗಿಯೂ) ಇರುವೆನು. ಎಲೈ ದೇವತೋತ್ತಮರುಗಳಿರಾ, ಈ ಪ್ರಕಾರವಾಗಿ ವಿಶ್ವರೂಪನಾದ ನನ್ನನ್ನು ಯಾವಾತನು ತಿಳಿಯು ತ್ತಾನೋ ಅವನೇ ಎಲ್ಲವನ್ನೂ ತಿಳಿದವನಾಗಿ ಸರ್ವಾತ್ಮನಾದ ಪರಮಾತ್ಮ ಸ್ವರೂಪನಾಗಿರುವನು.

೨೧–೨೪. ಎಲೈ ಮುನಿಶ್ರೇಷ್ಠರಾದ ದೇವತೆಗಳೇ, ನಾನು ವೇದ ಸ್ವರೂಪನಾಗಿದ್ದು, ಆ ವೇದದಿಂದ ಮಾತುಗಳನ್ನೂ, ಬ್ರಾಹ್ಮಣ್ಯಜಾತಿ ಸ್ವರೂಪನಾಗಿದ್ದುಕೊಂಡು ಆ ಬ್ರಾಹ್ಮಣಜಾತಿಯಿಂದ ಎಲ್ಲಾ ಬ್ರಾಹ್ಮಣ ರನ್ನೂ, ಹವಿಃ ಸ್ವರೂಪನಾಗಿದ್ದುಕೊಂಡು ಆ ಹವಿಸ್ಸಿನಿಂದ ಎಲ್ಲ ಹವಿಸ್ಸು

ಧರ್ಮಂ ಧರ್ಮೇಣ ಸರ್ವಾಂಶ್ಚ ತರ್ಪಯಾಮಿ ಸ್ವತೇಜಸಾ ।
ಇತ್ಯಾದೌ ಭಗವಾನುಕ್ತ್ವಾ ತತ್ರೈವಾಂತರಧೀಯತ ॥೨೨॥
ತೇ ದೇವಾಃ ಪರಮಾತ್ಮಾನಂ ರುದ್ರಂ ಧ್ಯಾಯಂತಿ ಶಂಕರಂ ॥೨೩॥
ಸ ನಾರಾಯಣಕಾ ದೇವಾ ಸ್ಸೇಂದ್ರಾಶ್ಚ ಮುನಯಸ್ತಥಾ ।
ತಥೋರ್ಧ್ವ ಬಾಹವೋ ದೇವಾ ರುದ್ರಂ ಸ್ತುನ್ವಂತಿ ಶಂಕರಂ ॥೨೪॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಸಪ್ತದಶೋಽಧ್ಯಾಯಃ

---

ಗಳನ್ನೂ, ಆಯುಸ್ಸ್ವರೂಪನಾಗಿದ್ದುಕೊಂಡು ಆಯುಸ್ಸುಗಳನ್ನೂ, ಆ ಸತ್ಯರೂಪದಿಂದ ಇರುತ್ತಾ ಯಥಾರ್ಥವನ್ನೂ, ಧರ್ಮಸ್ವರೂಪನಾಗಿದ್ದು ಆ ಧರ್ಮದಿಂದ ಎಲ್ಲ ಧರ್ಮವನ್ನೂ, ಹಾಗೂ ನನ್ನ ಸಾಮರ್ಥ್ಯದಿಂದ ಎಲ್ಲವನ್ನೂ, ತೃಪ್ತಿಪಡಿಸುವೆನು. ಶಿವನು ಈ ಪ್ರಕಾರವಾಗಿ ತನ್ನ ಸರ್ವಾತ್ಮಭಾವವನ್ನು ಹೇಳಿ ಅಲ್ಲಿಯೇ ಅಂತರ್ಧಾನವಾದನು. ಆ ಬಳಿಕ ಶ್ರೀಮನ್ನಾರಾಯಣನು, ಮತ್ತೂ ದೇವೇಂದ್ರನು ಮೊದಲಾದ ದೇವತೆಗಳೂ ಮೇಲಕ್ಕೆ ಎತ್ತಿರುವ ಕೈಗಳುಳ್ಳವರಾಗಿ ಪರಮ ಕಾರಣನಾಗಿಯೂ, ಪರಮಾತ್ಮನಾಗಿಯೂ, ಇರುವ, ಶುಭಕರನಾದ ರುದ್ರದೇವನನ್ನು ಧ್ಯಾನಿಸುತ್ತಾ ಸ್ತುತಿಸಿದರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನೇಳನೆಯ
ಅಧ್ಯಾಯವು ಮುಗಿಯಿತು.



## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಅಷ್ಟಾದಶೋಽಧ್ಯಾಯಃ

**ಅಷ್ಟಾದಶೇ ಮಹೇಶಸ್ಯ ಸ್ತುತಿ ರ್ಬ್ರಹ್ಮಾದಿಭಿಃ ಕೃತಾ ।**
**ವ್ರತಂ ಪಾಶುಪತಂ ಚೈವ ಪ್ರಸಾದಶ್ಚ ನಿರೂಪ್ಯತೇ ॥**

**॥ ದೇವಾ ಊಚುಃ ।**

**ಯ ಏಷ ಭಗವಾನ್ರುದ್ರೋ ಬ್ರಹ್ಮ ವಿಷ್ಣು ಮಹೇಶ್ವರಾಃ ।**
**ಸ್ಕಂದಶ್ಚಾಪಿ ತಥಾ ಚೇಂದ್ರೋ ಭುವನಾನಿ ಚತುರ್ದಶ ।**
**ಅಶ್ವಿನೌ ಗ್ರಹ ತಾರಾಶ್ಚ ನಕ್ಷತ್ರಾಣಿ ಚ ಖಂ ದಿಶಃ ॥ ೧ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನೆಂಟನೆಯ ಅಧ್ಯಾಯವು.

ಈ ಹದಿನೆಂಟನೆಯ ಅಧ್ಯಾಯದಲ್ಲಿ ಶಿವನನ್ನು ಕುರಿತು ಬ್ರಹ್ಮಾದಿ ದೇವತೆಗಳು ಮಾಡಿದ ಸ್ತೋತ್ರವೂ, ಪಾಶುಪತವ್ರತದ ವಿಧಿಯೂ, ಶಿವನು ಬ್ರಹ್ಮಾದಿ ದೇವತೆಗಳಿಗೆ ಕೊಟ್ಟ ವರ ಪ್ರಸಾದವೂ, ನಿರೂಪಿಸಲ್ಪಡುತ್ತದೆ. ದೇವತೆಗಳು ಸರ್ವಸ್ವರೂಪನಾದ ಶಿವನನ್ನು ಸ್ತೋತ್ರಮಾಡುತ್ತಾರೆ:—

೧. ಯಾವ ಭಗವಂತನಾದ ರುದ್ರದೇವನು ಬ್ರಹ್ಮಾ, ವಿಷ್ಣು, ಮಹೇಶ್ವರ ಸ್ವರೂಪನಾಗಿಯೂ, ಸುಬ್ರಹ್ಮಣ್ಯ ದೇವ ಸ್ವರೂಪನಾಗಿಯೂ ಇಂದ್ರದೇವ ಸ್ವರೂಪನಾಗಿಯೂ, ಅತಲ, ವಿತಲ, ಸುತಲ, ತಲಾತಲ, ಮಹಾತಲ, ಪಾತಾಲ, ಭೂರ್ಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳೆಂಬ ಹದಿನಾಲ್ಕು ಲೋಕಗಳ ಸ್ವರೂಪನಾಗಿಯೂ, ಅಶ್ವಿನೀ ದೇವತೆಗಳ ಸ್ವರೂಪನಾಗಿಯೂ,ನವಗ್ರಹಗಳೆಂಬ ತಾರಾ (ನಕ್ಷತ್ರ) ಸ್ವರೂಪನಾಗಿಯೂ, ಅಶ್ವಿನ್ಯಾದಿ ನಕ್ಷತ್ರ ಸ್ವರೂಪನಾಗಿಯೂ, ಆಕಾಶ ಸ್ವರೂಪನಾಗಿಯೂ, ಪೂರ್ವಾದಿ ದಿಕ್ಕುಗಳ ಸ್ವರೂಪನಾಗಿಯೂ, (ಪಂಚ ಭೂತ ಸ್ವರೂಪ

**ಭೂತಾನಿ ಚ ತಥಾ ಸೂರ್ಯಃ ಸೋಮಶ್ಚಾಷ್ಟೌ ಗ್ರಹಾಸ್ತಥಾ ।**
**ಪ್ರಾಣಃ ಕಾಲೋ ಯಮೋ ಮೃತ್ಯು ರಮೃತಃ ಪರಮೇಶ್ವರಃ ॥**

**ಭೂತಂ ಭವ್ಯಂ ಭವಿಷ್ಯಚ್ಚ ವರ್ತಮಾನಂ ಮಹೇಶ್ವರಃ ।**
**ವಿಶ್ವಂ ಕೃತ್ಸ್ನಂ ಜಗತ್ಸರ್ವಂ ಸತ್ಯಂ ತಸ್ಮೈ ನಮೋನಮಃ ॥ ೩ ॥**

**ತ್ವಮಾದೌ ಚ ತಥಾ ಭೂತಃ ಭೂರ್ಭುವಸ್ಸ್ವಸ್ತಥೈವ ಚ ।**
**ಅಂತೇ ತ್ವಂ ವಿಶ್ವರೂಪೋಽಸಿ ಶೀರ್ಷಂ ತು ಜಗತಃ ಸದಾ ॥ ೪ ॥**

---

ನಾಗಿಯೂ, ಸೂರ್ಯದೇವ ಸ್ವರೂಪನಾಗಿಯೂ, ಪ್ರಾಣ, ಘ್ರಾಣ, ವಾಕ್, ಜಿಹ್ವಾ,ಚಕ್ಷುಸ್ಸು, ಶ್ರೋತ್ರ,ಮನಸ್ಸು, ತ್ವಕ್, ಎಂಬ ಎಂಟುಗ್ರಹಗಳ ( ಇಂದ್ರಿಯಗಳ ಸ್ವರೂಪನಾಗಿಯೂ, ) ಇರುವನೋ,

೨–೩. ಮತ್ತು ಪಂಚಭೂತ ಸ್ವರೂಪನಾಗಿಯೂ, ಸೂರ್ಯದೇವ ಸ್ವರೂಪನಾಗಿಯೂ, ಚಂದ್ರದೇವಸ್ವರೂಪನಾಗಿಯೂ, ಅಷ್ಟಗ್ರಹಗಳ, ಎಂದರೆ, ಪ್ರಾಣ, ಘ್ರಾಣ ವಾಕ್, ಜಿಹ್ವಾ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ತ್ವಕ್, ಎಂಬ ಎಂಟು ಇಂದ್ರಿಯಗಳ ಸ್ವರೂಪನಾಗಿಯೂ ಪಂಚಪ್ರಾಣ ಸ್ವರೂಪನಾಗಿಯೂ, ಯಮದೇವ ಸ್ವರೂಪನಾಗಿಯೂ, ಮೃತ್ಯುದೇವ ಸ್ವರೂಪನಾಗಿಯೂ, ಮೋಕ್ಷಸ್ವರೂಪನಾಗಿಯೂ, ಮತ್ತು ಭೂತಕಾಲದಲ್ಲಿಯೂ, ವರ್ತಮಾನ ಕಾಲದಲ್ಲಿಯೂ, ಭವಿಷ್ಯತ್ಕಾಲ ದಲ್ಲಿಯೂ, ಇರುವ ಸಮಸ್ತ ಪ್ರಪಂಚವೂ ಕೂಡ ನಿಜವಾದ ಯಾವ ಪರಮೇಶ್ವರನ ಸ್ವರೂಪವಾಗಿರುವುದೋ ಆ ಪರಮೇಶ್ವರನಿಗೆ ನಮಸ್ಕಾ ರವು.

೪. ಓ ರುದ್ರದೇವನೇ, ನೀನು '' ಭೂಃ, ಭುವಃ, ಸುವಃ '' ಎಂಬ ವ್ಯಾಹೃತಿತ್ರಯ ರೂಪನಾಗಿ, ಸೃಷ್ಟಿಗೆ ಪೂರ್ವಕಾಲದಲ್ಲಿಯೂ, ಅವಸಾನ (ಪ್ರಳಯ) ಕಾಲದಲ್ಲಿಯೂ, ಇರುವನಾಗಿ ವಿಶ್ವರೂಪನಾಗಿ ಇರುವುದದ ರಿಂದ ನಿನ್ನಲ್ಲಿ ಸಮಸ್ತ ಪ್ರಪಂಚವೂ ಲಯವನ್ನು ಹೊಂದುವುದು.

ಬ್ರಹ್ಮೈಕಸ್ತ್ವಂ ದ್ವಿತ್ರಿಧಾಽರ್ಥ ಮಧಶ್ಚ ತ್ವಂ ಸುರೇಶ್ವರಃ ।
ಶಾಂತಿಶ್ಚ ತ್ವಂ ತಥಾ ಪುಷ್ಟಿಃ ತುಷ್ಟಿಶ್ಚಾಪ್ಯಹುತಂ ಹುತಂ ॥ ೫ ॥

ವಿಶ್ವಂ ಚೈವ ತಥಾಽವಿಶ್ವಂ ದತ್ತಂ ವಾಽದತ್ತ ಮೀಶ್ವರಂ ।
ಕೃತಂ ಚಾ ಪ್ಯಕೃತಂ ದೇವಂ ಪರಮಪ್ಯಪರಂ ಧ್ರುವಂ ।
ಪರಾಯಣಂ ಸತಾಂ ಚೈವ ಹ್ಯಸತಾಮಪಿ ಶಂಕರಂ ॥ ೬ ॥

ಅಪಾಮ ಸೋಮ ಮಮೃತಾ ಅಭೂಮಾಽ
ಗನ್ಮ ಜ್ಯೋತಿ ರವಿದಾ ಮ ದೇವಾನ್ ।
ಕಿಂ ನೂನ ಮಸ್ಮಾನ್ ಕೃಣವದರಾತಿಃ
ಕಿಮು ಧೂರ್ತಿ ರಮೃತಂ ಮರ್ತ್ಯಸ್ಯ ॥ ೭ ॥

---

೫–೬. ಓ ರುದ್ರದೇವನೇ, ನೀನು ಒಬ್ಬನೇ ಅದ್ವಿತೀಯನಾಗಿಯೂ, ಪ್ರಕೃತಿ ಪುರುಷ ಎಂಬ ದ್ವಿಸ್ವರೂಪನಾಗಿಯೂ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿ ಸ್ವರೂಪನಾಗಿಯೂ, ಎಲ್ಲಾ ವಸ್ತುಗಳಿಗೂ ಅಧಿಷ್ಠಾನ (ಆಧಾರ) ಸ್ವರೂಪನಾಗಿಯೂ, ದೇವತೆಗಳಿಗೆ ಒಡೆಯನಾಗಿಯೂ, ಶಾಂತಿಸ್ವರೂಪನಾಗಿಯೂ, ಪುಷ್ಟಿಸ್ವರೂಪನಾಗಿಯೂ, ಸಂತೋಷ ಸ್ವರೂಪನಾಗಿಯೂ, ಹೋಮ ಮಾಡಲ್ಪಟ್ಟ ದ್ರವ್ಯಸ್ವರೂಪನಾಗಿಯೂ, ವಸ್ತುತಃ ತದತಿರಿಕ್ತನಾಗಿಯೂ ಇರುವೆ. ಎಲ್ಲಾ ಪದಾರ್ಥಗಳೂ ಮಾಯಿಕವಾಗಿ ಕೋರಿಕೆಯಾಗಿ ಇರುವುದರಿಂದ ಎರಡು ರೂಪಗಳಿಂದಲೂ ಸ್ತೋತ್ರ ಮಾಡುತ್ತಾರೆ :—ಓ ರುದ್ರದೇವನೇ, ನೀನು ಪ್ರಪಂಚಸ್ವರೂಪನಾಗಿದ್ದರೂ ವಾಸ್ತವವಾಗಿ ಪ್ರಪಂಚಸ್ವರೂಪಕ್ಕಿಂತ ಅತಿರಿಕ್ತನಾಗಿಯೂ, ಹಾಗೆಯೇ ಕೊಡಲ್ಪಟ್ಟ ದ್ರವ್ಯಸ್ವರೂಪನಾಗಿಯೂ, ವಸ್ತುತಃ ತದತಿರಿಕ್ತನಾದ ಈಶ್ವರ ಸ್ವರೂಪನಾಗಿಯೂ, ಕಾರ್ಯಸ್ವರೂಪನಾಗಿಯೂ ವಸ್ತುತಃ ತದತಿರಿಕ್ತನಾದ ದೇವನಾಗಿಯೂ, ನಿರ್ಗುಣ ಸ್ವರೂಪನಾಗಿಯೂ ಗುಣಸ್ವರೂಪನಾಗಿಯೂ, ನಿತ್ಯ (ಶಾಶ್ವತ) ನಾಗಿಯೂ, ದ್ರವ್ಯಗಳಿಗೆ ಆಶ್ರಯನಾಗಿಯೂ, ಅನಿರ್ವಾಚ್ಯವಾದ ಭ್ರಾಂತಿ ಜನ್ಯ ಪದಾರ್ಥಗಳಿಗೆ ಆಶ್ರಯನಾಗಿಯೂ, ವ್ಯಾವಹಾರಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳಿಗೆ ನೀನು ತೋರುತ್ತಾ ಇರುವೆ.

೭. ನಾವು ಪಾರ್ವತೀ ದೇವಿಯಿಂದೊಡಗೂಡಿದ ಶಿವ ದೇವನನ್ನು ಕಣ್ಣುಗಳಿಂದ ನೋಡುವೆವು. ಆವನನ್ನು ನೋಡಿದ್ದರಿಂದ ಮುಕ್ತ

ಏತಜ್ಜಗದ್ಧಿತಂ ದಿವ್ಯಂ ಅಕ್ಷರಂ ಸೂಕ್ಷ್ಮಮವ್ಯಯಂ ॥ ೮ ॥
ಪ್ರಾಜಾಪತ್ಯಂ ಪವಿತ್ರಂ ಚ ಸೌಮ್ಯಮಗ್ರಾಹ್ಯ ಮವ್ಯಯಂ ।
ಅಗ್ರಾಹ್ಯೇಣಾಪಿ ವಾ ಗ್ರಾಹ್ಯಂ ವಾಯವ್ಯೇನ ಸಮೀರಣಃ ॥ ೯ ॥
ಸೌಮ್ಯೇನ ಸೌಮ್ಯಂ ಗ್ರಸತಿ ತೇಜಸಾ ಸ್ವೇನ ಲೀಲಯಾ ।
ತಸ್ಮೈ ನಮೋಽಪಸಂಹರ್ತ್ರೇ ಮಹಾಗ್ರಾಸಾಯ ಶೂಲಿನೇ ॥೧೦॥

---

ರಾಗಿ ಇರುವೆವು. ಜಯಿಸಬೇಕೆಂಬ ಇಚ್ಛೆಯುಳ್ಳ ಕಾಮಾದಿ ಶತ್ರುಗಳನ್ನು ಜಯಿಸುವುದನ್ನೂ ತಿಳಿಯುವೆವು. ಶಿವನನ್ನು ಆರಾಧಿಸುತ್ತಿರುವ ನಮ್ಮನ್ನು ಕಾಮಾದಿ ಶತ್ರುಗಳು ಏನನ್ನು ಮಾಡುವುವು? ವಿನಾಶ ಸ್ವಭಾವವುಳ್ಳ ಶರೀರ ಮೊದಲಾದದ್ದಕ್ಕೆ ಕಾಮಾದಿ ಶತ್ರುಗಳಿಂದ ಹಿಂಸೆಯು. ಅದು ನನಗೆ ಹೇಗೆತಾನೆ ಉಂಟಾದೀತು?

೮–೯. ಲೋಕಕ್ಷೇಮಕರವಾಗಿಯೂ, ಸ್ವಯಂ ಪ್ರಕಾಶವಾಗಿಯೂ, ನಿರ್ವಿಕಾರವಾಗಿಯೂ, ಸೂಕ್ಷ್ಮವಾಗಿಯೂ, ನಾಶರಹಿತವಾಗಿಯೂ ಸಮಸ್ತಕ್ಕೂ ಜನಕವಾಗಿಯೂ, ಪರಿಶುದ್ಧವಾಗಿಯೂ, ಶಾಂತ ಸ್ವರೂಪವಾಗಿಯೂ, ಅಪ್ರತ್ಯಕ್ಷವಾಗಿಯೂ, ಇರುವ ಈ ಶಿವಸ್ವರೂಪವು ಅಪ್ರತ್ಯಕ್ಷವಾಗಿ. ಮನಸ್ಸಿನಿಂದ ಅಗ್ರಾಹ್ಯವಾಗಿರುವುದಾದರೂ ಕೂಡ ವಾಯುವನ್ನು ಹೇಗೆ ಸ್ಪರ್ಶಗುಣದಿಂದ ಊಹಿಸ ಬೇಕಾಗಿರುವುದೋ ಹಾಗೆಯೇ ಇದನ್ನೂ ಊಹಿಸತಕ್ಕಂಥಾದ್ದು.

೧೦. ಯಾವ ಶಿವದೇವನು ತನ್ನ ಲೀಲೆಯಿಂದ ಚಂದ್ರತೇಜಸ್ಸಿನಿಂದ ಶಾಂತರಾದ ತನ್ನ ಭಕ್ತರ ಮನಸ್ಸನ್ನು ತನ್ನಲ್ಲಿ ಲಯಿಸುವಂಥಾದ್ದನ್ನಾಗಿ ಮಾಡುತ್ತಾನೋ ಮತ್ತು ಮಹತ್ತತ್ವವನ್ನೂ ಗ್ರಾಸ(ಕಬಳ) ವಾಗಿ ಉಳ್ಳವನಾದ ತ್ರಿಶೂಲಧಾರಿಯಾದ ಪ್ರಳಯ ಕಾಲದಲ್ಲಿ ಸಮಸ್ತ ಪ್ರಪಂಚವನ್ನೂ ಉಪಸಂಹಾರ ಮಾಡುವವನಾದ ಆ ಶಿವದೇವನಿಗೋಸ್ಕರ ನಮಸ್ಕಾರವು.

ಹೃದಿಸ್ಥಾ ದೇವತಾ ಸ್ಸರ್ವಾ ಹೃದಿ ಪ್ರಾಣೇ ಪ್ರತಿಷ್ಠಿತಾಃ ।
ಹೃದಿ ತ್ವಮಸಿ ಯೋ ನಿತ್ಯಂ ತಿಸ್ರೋ ಮಾತ್ರಾಃ ಪರಸ್ತು ಸಃ ॥೧೧॥
ಶಿರಶ್ಚೋತ್ತರ ತ ಶ್ಚೈವ ಪಾದೌ ದಕ್ಷಿಣ ತ ಸ್ತಥಾ ।
ಯೋ ವೈ ಚೋತ್ತರ ತ ಸ್ಸಾಕ್ಷಾತ್ ಸ ಓಂಕಾರಃ ಸನಾತನಃ ॥
ಓಂಕಾರೋ ಯಃ ಸ ಏವೇಹ ಪ್ರಣವೋ ವ್ಯಾಪ್ಯ ತಿಷ್ಠತಿ ।
ಅನಂತಸ್ತಾರ ಸೂಕ್ಷ್ಮಂ ಚ ಶುಕ್ಲಂ ವೈದ್ಯುತ ಮೇವಚ ॥೧೩॥

---

೧೧. ಹೃದಯದಲ್ಲಿರುವಂಥಾ ಅಕಾರ ಉಕಾರ ಮಕಾರಗಳೆಂಬ ಮೂರು ಮಾತ್ರೆಗಳೂ, ಎಲ್ಲಾ ದೇವತೆಗಳೂ, ಹೃದಯವು ಆಧಾರವಾಗಿ ವುಳ್ಳ ಪಾಣನಲ್ಲಿ ಪ್ರತಿಷ್ಠಿತಗಳಾಗಿವೆ. ಇದರಿಂದ ರುದ್ರನಿಗೆ ಸರ್ವದೇವ ತಾಧಿಷ್ಠಾನತ್ವವನ್ನು ಹೇಳಿದ ಹಾಗಾಯಿತು. ಯಾವ ಪ್ರಾಣರೂಪನಾಗಿ ರುವ ನೀನು ಹೃದಯದಲ್ಲಿ ನಿತ್ಯವೂ ಇರುವೆಯೋ ಆ ನೀನು ನಾದವೆಂಬ ಅರ್ಧಮಾತ್ರಾ ರೂಪನಾಗಿರುತ್ತೀಯೆ.

೧೨. ಶಿವನಿಗೆ ಓಂಕಾರ ಸ್ವರೂಪತ್ವವನ್ನು ಹೇಳುತ್ತಾರೆ : ಶಿರಸ್ಸ್ಥಾನಾಪನ್ನವಾದ ಅಕಾರವು ಮೇಲಿನ ಭಾಗವಾಗಿಯೂ ಪಾದಸ್ಥಾನಾಪನ್ನವಾದ ಮಕಾರವು ಕೆಳಭಾಗವಾಗಿಯೂ, ಉಕಾರವು ಮೇಲಿನಭಾಗಕ್ಕೆ ಸೇರಿಕೊಂಡಿರುವಂಥಾದ್ದಾಗಿಯೂ, ಇರುವ ಹೃದಯ ಕೇಂದ್ರದಲ್ಲಿ ತೋರುವ ಯಾವ ಓಂಕಾರವುಂಟೋ ಆ ಓಂಕಾರವೇ ನಿತ್ಯನಾದ ಶಿವನು.

೧೩. ಯಾವ ಓಂಕಾರವುಂಟೋ ಅದೇ ಇಲ್ಲಿ 'ಪ್ರಣವ' ಎಂಬ ಶಬ್ದವಾಚ್ಯವಾಗಿಯೂ. ಸರ್ವವ್ಯಾಪಿಯಾಗಿಯೂ ನಾಶರಹಿತವಾಗಿಯೂ ನಾದವೆಂಬ ಅರ್ಧಮಾತ್ರಾಸ್ವರೂಪವಾಗಿಯೂ, ದುರ್ವಿಜ್ಞೇಯವಾಗಿಯೂ, ಶುದ್ಧಸ್ವರೂಪವಾಗಿಯೂ, ಸ್ವಯಂ ಪ್ರಕಾಶವಾಗಿಯೂ, ಇರುವ ನಿರ್ಗುಣವಾದ ಬ್ರಹ್ಮವಸ್ತುವು. ಆ ಬ್ರಹ್ಮವಸ್ತುವೇ ಸರ್ವವಿದ್ಯೆಗಳಿಗೂ ಅಧಿಪತಿಯಾದ ಅದ್ವಿತೀಯವಾದ ರುದ್ರಭಗವಂತನು. ಅವನೇ ಸಾಕ್ಷಾತ್ ಮಹೇಶ್ವರನೂ, ಮಹಾದೇವನೂ ಆಗಿದಾನೆ. ಎಂಬುದರಲ್ಲಿ ಸಂದೇಹವಿಲ್ಲ.

ಪರಂ ಬ್ರಹ್ಮ ಸ ಈಶಾನ ಏಕೋ ರುದ್ರಂ ಸ ಏವ ಚ ।
ಭವಾನ್ ಮಹೇಶ್ವರ ಸ್ಸಾಕ್ಷಾತ್ ಮಹಾದೇವೋ ನ ಸಂಶಯಃ ॥
ಊರ್ಧ್ವ ಮುನ್ನಾಮಯತ್ಯೇವ ಸ ಓಂಕಾರಃ ಪ್ರಕೀರ್ತಿತಃ ।
ಪ್ರಾಣಾ ನವತಿ ಯಸ್ತಸ್ಮಾತ್ಪ್ರಣವಃ ಪರಿಕೀರ್ತಿತಃ ॥೧೫॥
ಸರ್ವಂ ವ್ಯಾಪ್ನೋತಿ ಯಸ್ತಸ್ಮಾತ್ಸರ್ವ ವ್ಯಾಪೀ ಸನಾತನಃ ।
ಬ್ರಹ್ಮಾ ಹರಿಶ್ಚ ಭಗವಾನ್ ಆದ್ಯಂತಂ ನೋಪಲಬ್ಧವಾನ್ ॥೧೬॥
ತಥಾಽನ್ಯೇ ಚ ತತೋಽನಂತೋ ರುದ್ರಃ ಪರಮ ಕಾರಣಂ ।
ಯಸ್ಮಾತ್ತಾರಯತಿ ಸಂಸಾರಾತ್ತಾರ ಇತ್ಯಭಿಧೀಯತೇ ॥೧೭॥
ಸೂಕ್ಷ್ಮೋ ಭೂತ್ವಾ ಶರೀರಾಣಿ ಸರ್ವದಾ ಹೃದಿ (ಹ್ಯಧಿ) ತಿಷ್ಠತಿ ।
ತಸ್ಮಾತ್ಸೂಕ್ಷ್ಮಃ ಸಮಾಖ್ಯಾತೋ ಭಗವಾನ್ನೀಲಲೋಹಿತಃ ॥೧೮॥

---

೧೫. ಓಂಕಾರ ಮೊದಲಾದ ಶಬ್ದಗಳಿಗೆ ವ್ಯುತ್ಪತ್ತ್ಯರ್ಥವನ್ನು ಹೇಳುತ್ತಾರೆ:—ಉಚ್ಚರಿಸಲ್ಪಟ್ಟ ಓಂಕಾರದಿಂದ ಕಾಲಕ್ರಮೇಣ ಸಂಪೂರ್ಣವಾಗಿ ನಾದವು ಮೇಲಕ್ಕೆ ಹೋಗುವುದರಿಂದ ಓಂಕಾರವೆಂದು ಹೇಳಲ್ಪಟ್ಟಿತು. ಉಚ್ಚರಿಸಲ್ಪಟ್ಟ ಓಂಕಾರವು ಪ್ರಾಣಗಳನ್ನು ರಕ್ಷಿಸುವುದರಿಂದ ಓಂಕಾರಕ್ಕೆ ಪ್ರಣವ ಎಂದು ಹೆಸರಾಯಿತು. ಯಾವ ರುದ್ರಪರಮಾತ್ಮನು ಸರ್ವತ್ರ ವ್ಯಾಪನಶೀಲನಾದ್ದರಿಂದ ಸರ್ವವ್ಯಾಪೀ ಎಂದು ಹೆಸರು ಗೊಂಡನು.

೧೬-೧೭. ಚತುರ್ಮುಖ ಬ್ರಹ್ಮನೂ,ಭಗವಂತನಾದ ಹರಿದೇವನೂ ಹಾಗೆಯೇ ಇಂದ್ರ ಮುಂತಾದ ಬೇರೇ ದೇವತೆಗಳೂ ಕೂಡ, ರುದ್ರ ಪರಮಾತ್ಮನ ಆದಿಯನ್ನೂ ಅಂತ್ಯವನ್ನೂ ತಿಳಿಯಲಿಲ್ಲವು. ಆದ್ದರಿಂದ ನಾಶರಹಿತನಾದ ರುದ್ರದೇವನು ಪರಮ ಕಾರಣನೆಂದು ಹೇಳಲ್ಪಟ್ಟನು. ಯಾವ ರುದ್ರ ಪರಮಾತ್ಮನು ಸಂಸಾರ ಸಾಗರದ ದೆಸೆಯಿಂದ ದಾಟಿಸುವನೋ, ಅದರಿಂದ ಅವನು ತಾರ ಎಂದು ವ್ಯವಹರಿಸಲ್ಪಟ್ಟನು.

೧೮-೧೯. ರುದ್ರದೇವನು ಸೂಕ್ಷ್ಮರೂಪನಾಗಿದ್ದು ಎಲ್ಲಾ ಪ್ರಾಣಿಗಳ ಶರೀರಗಳನ್ನೂ ಪ್ರವೇಶಿಸಿ ಯಾವಾಗಲೂ ಹೃದಯದಲ್ಲಿ ವಾಸಮಾಡಿ

ನೀಲಶ್ಚ ಲೋಹಿತ ಶ್ಚೈವ ಪ್ರಧಾನ ಪುರುಷಾನ್ವಯಾತ್ ।
ಸ್ಕಂದತೇಽಸ್ಯ ಯತಃ ಶುಕ್ರಂ ತಥಾ ಶುಕ್ರಮುಪೈತಿ ಚ ॥೧೯॥

ವಿದ್ಯೋತಯತಿ ಯಸ್ತಸ್ಮಾತ್ ವೈದ್ಯುತಃ ಪರಿಗೀಯತೇ ।
ಬೃಹತ್ವಾತ್ ಬೃಹಂಣತ್ವಾಚ್ಚ ಬೃಹತೇ ಚ ಪರಾಽಪರೇ ॥೨೦॥

ತಸ್ಮಾ ದ್ಬೃಂಹತಿ ಯಸ್ಮಾದ್ಧಿ ಪರಂ ಬ್ರಹ್ಮೇತಿ ಕೀರ್ತಿತಂ ।
ಅದ್ವಿತೀಯೋಽಥ ಭಗವಾನ್ ತುರೀಯಃ ಪರಮೇಶ್ವರಃ ॥೨೧॥

---

ಕೊಂಡಿರುವುದರಿಂದ ಸೂಕ್ಷ್ಮನು (ದುರ್ವಿಜ್ಞೇಯನು) ಎಂದು ಹೆಸರು ಗೊಂಡನು. ಭಗವಂತನಾದ ರುದ್ರದೇವನು ಕತ್ತಿನಲ್ಲಿ ನೀಲವರ್ಣವುಳ್ಳವನಾಗಿಯೂ, ಕೇಶದಲ್ಲಿ ಕೆಂಪು ಬಣ್ಣವುಳ್ಳವನಾಗಿಯೂ ಇರುವುದರಿಂದ ನೀಲಲೋಹಿತನೆಂದು ಹೇಳಲ್ಪಟ್ಟನು. ಪ್ರಧಾನ, (ಮೂಲ ಪ್ರಕೃತಿ) ಮತ್ತು ಪುರುಷ ಇವರ ಪರಸ್ಪರ ಸಂಯೋಗದಿಂದ ರುದ್ರದೇವನ ಶುಕ್ರವು (ವೀರ್ಯವು) ಚಲಿಸಿ ವ್ಯಾಪಿಸಿ ಬಿಟ್ಟು ಪುನಃ ಸ್ವಸ್ಥಾನವನ್ನು ಹೊಂದಿಕೊಂಡುದರಿಂದ ಶುಕ್ರನೆಂದು ಹೆಸರು ಗೊಂಡನು.

೨೦. ತಾನು ಸ್ವಯಂ ಪ್ರಕಾಶನಾಗಿದ್ದುಕೊಂಡು ಇತರ ವಸ್ತುಗಳನ್ನು ಪ್ರಕಾಶಗೊಳಿಸುವುದರಿಂದ ವೈದ್ಯುತನೆಂದು ಹೇಳಲ್ಪಟ್ಟನು. ರುದ್ರಪರಮಾತ್ಮನು ವ್ಯಾಪಕನಾಗಿರುವುದರಿಂದಲೂ, ಶರೀರವರ್ಧಕ ನಾಗಿರುವುದರಿಂದಲೂ, ಮಹತ್ತಾದ (ಶ್ರೇಷ್ಠವಾದ) ಐಹಿಕಾಮುಷ್ಮಿಕ ಫಲ (ಪಶುಪುತ್ರ, ಸ್ವರ್ಗಾದಿ) ಗಳನ್ನು ಪುಷ್ಟಿಪಡಿಸುವುದರಿಂದಲೂ, ಪರಂ ಬ್ರಹ್ಮನೆಂದು ಹೆಸರು ಗೊಂಡನು.

೨೧-೨೨. ಭಗವಂತನಾದ ರುದ್ರನು ಅದ್ವಿತೀಯನಾಗಿಯೂ, (ತನಗೆ ಸಮಾನ ಜಾತೀಯವಾದ ದ್ವಿತೀಯ ವಸ್ತು ವಿಲ್ಲದವನಾಗಿಯೂ) ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಾ ತೀತನಾಗಿಯೂ, ಸರ್ವೇಶ್ವರನಾಗಿಯೂ ಇದ್ದಾನೆ. ರುದ್ರದೇವನಿಗೆ ಈಶಾನ ಎಂಬ ಹೆಸರು

ಈಶಾನ ಮಸ್ಯ ಜಗತಃ ಸ್ವದೃಶಾಂ ಚಕ್ಷುರೀಶ್ವರಂ ।
ಈಶಾನ ಮಿಂದ್ರ ಸೂರಯಃ ಸರ್ವೇಷಾಮಪಿ ಸರ್ವದಾ ॥೨೨॥

ಈಶಾನ ಸ್ಸರ್ವ ವಿದ್ಯಾನಾಂ ಯತ್ತದೀಶಾನ ಉಚ್ಯತೇ ।
ಯದೀಕ್ಷತೇ ಚ ಭಗವಾನ್ ನಿರೀಕ್ಷ್ಯಮಿತಿ ಚಾಜ್ಞಯಾ ॥೨೩॥

ಆತ್ಮಜ್ಞಾನಂ ಮಹಾದೇವೋ ಯೋಗಂ ಗಮಂಯತಿ ಸ್ವಯಂ ।
ಭಗವಾಂಶ್ಚೋಚ್ಯತೇ ದೇವೋ ದೇವದೇವೋ ಮಹೇಶ್ವರಃ ॥೨೪॥

ಸರ್ವಾನ್ ಲೋಕಾನ್ ಕ್ರಮೇಣೈವ ಯೋ ಗೃಹ್ಣಾತಿ ಮಹೇಶ್ವರಃ ।
ವಿಸೃಜತ್ಯೇಷ ದೇವೇಶೋ ವಾಸಯತ್ಯಪಿ ಲೀಲಯಾ ॥೨೫॥

---

ಬಂದುದಕ್ಕೆ ಕಾರಣವನ್ನು ಹೇಳುತ್ತಾರೆ—ಈ ಭೂಲೋಕದಲ್ಲಿರುವವರಿಗೆ ಈ ಜಗತ್ತಿಗೆ ಸ್ವಾಮಿಯಾಗಿಯೂ, ಸ್ವರ್ಗಲೋಕವನ್ನು ನೋಡುವವರಿಗೆ ಕಣ್ಣಿಗೆ ಸದೃಶನಾದ ಸ್ವಾಮಿಯಾಗಿಯೂ, ಯಾವಾಗಲೂ ಎಲ್ಲರಿಗೂ ಸ್ವಾಮಿಯಾಗಿಯೂ, ಇದಾನೆಂದು ರುದ್ರದೇವನನ್ನು ಇಂದ್ರಾದಿದೇವತೆಗಳೂ ಯಾವ ಕಾರಣದಿಂದ ಹೇಳುವರೋ ಮತ್ತು ಎಲ್ಲಾ ವಿದ್ಯೆಗಳಿಗೂ ಯಾವಕಾರಣದಿಂದ ರುದ್ರನು ಸ್ವಾಮಿಯಾಗಿರುವನೋ, ಆ ಕಾರಣದಿಂದ ಅವನು ಈ ಶಾನ ಎಂದು ಹೇಳಲ್ಪಡುತ್ತಾನೆ.

೨೩-೨೫. ಭಗವಾನ್ ಎಂಬಹೆಸರಿಗೆ ಕಾರಣವನ್ನು ಹೇಳುತ್ತಾರೆ.-ಎಲ್ಲಾದೇವತೆಗಳಿಗೂ ದೇವನಾದ ರುದ್ರನು, ತನ್ನ ಆಜ್ಞೆಯಿಂದ ನಿರೀಕ್ಷ್ಯಂ ಎಂಬಯೋಗಮಾಹಾತ್ಮ್ಯೆಯನ್ನೂ (ಎಂದರೆ ತಾನು ಇತರರನು ನೋಡುತ್ತಿದ್ದು, ತನ್ನನ್ನು ಇತರರು ನೋಡದೇ ಇರುವಂಥ ಯೋಗಮಹಿಮೆಯನ್ನೂ,) ಮತ್ತು ಆತ್ಮಜ್ಞಾನವನ್ನೂ ಯಾವಕಾರಣದಿಂದ ತಿಳಿಯ ಹೇಳತ್ತಾನೋ (ಉಪದೇಶಮಾಡುತ್ತಾನೋ) ಆ ಕಾರಣದಿಂದ ಭಗವಾನ್ ಎಂದು ಹೇಳಲ್ಪಡುತ್ತಾನೆ. ಮಹೇಶ್ವರನೆಂಬ ಹೆಸರು ಹೇಗೆ ಬಂತೆಂದರೆ, ಎಲ್ಲಾ ಪ್ರಾಣಿಗಳನ್ನೂ ತನ್ನ ಲೀಲೆಯಿಂದ ಕ್ರಮವಾಗಿ ಸೃಷ್ಟಿಸಿ, ರಕ್ಷಣೆ ಮಾಡಿ, ಕೊನೆಗೆ ತಾನೇ ಅವುಗಳನ್ನು ಸ್ವೀಕರಿಸಿಕೊಳ್ಳುವುದರಿಂದ ಮಹೇಶ್ವರನೆಂಬ ಹೆಸರು ರುದ್ರನಿಗೆ ಬಂದಿದೆ.

ಏಷೋ ಹಿ ದೇವಃ ಪ್ರದಿಶೋ ನು ಸರ್ವಾಃ
ಪೂರ್ವೋ ಹಿ ಜಾತಃ ಸ ಉ ಗರ್ಭೇ ಅಂತಃ ।
ಸ ಏವ ಜಾತಃ (ಜಾಯಮಾನಃ) ಸ ಜನಿಷ್ಯಮಾಣಃ
ಪ್ರತ್ಯಙ್ಮುಖಾಸ್ತಿಷ್ಠತಿ ಸರ್ವತೋ ಮುಖಃ ॥೨೬॥

ಉಪಾಸಿತವ್ಯಂ ಯತ್ನೇನ ತದೇತ ತ್ಸದ್ಭಿರವ್ಯಯಂ ।
ಯತೋ ವಾಚೋ ನಿವರ್ತಂತೇ ಹ್ಯಪ್ರಾಪ್ಯ ಮನಸಾ ಸಹ ॥೨೭॥

ತದಗ್ರಹಣ ಮೇವೇಹ ಯದ್ವಾ ಗ್ವದತಿ ಯತ್ನತಃ ।
ಅಪರಂ ಚ ಪರಂ ವೇತಿ ಪರಾಯಣ ಮಿತಿ ಸ್ವಯಂ ॥೨೮॥

---

೨೬. ಎಲೈ ಅನೃತಾ ಹಂಕಾರಾದಿಗಳಿಂದ ಭಿನ್ನ ದೃಷ್ಟಿಗಳಾದ ಜೀವಾತ್ಮರೇ, ಈ ಪೂರ್ವೋಕ್ತ ಮಹೇಶ್ವರನು ಈ ಪ್ರಪಂಚ ರೂಪದಿಂದ ಕ್ರೀಡಿಸುವಂತಹ ರುದ್ರ ದೇವನು. ಸಮಸ್ತ ದಿಗ್ರೂಪನಾಗಿಯೂ, ಸರ್ವಕಾಲ ವ್ಯಾಪಕನಾಗಿಯೂ,ಇರುತ್ತಾ,ಅನಾದಿ ಸಿದ್ಧನಾದ ಈ ರುದ್ರ ದೇವನು ನಿಶ್ಚಯವಾಗಿ ಬ್ರಹ್ಮಾಂಡೋದರದಲ್ಲಿ ಪ್ರವೇಶಿಸಿ, ಇದುವರೆಗೆ ಜನಿಸಿರುವ, ಇನ್ನು ಮೇಲೆ ಜನಿಸುವ ಪ್ರಪಂಚ ರೂಪನಾಗಿ ಇರುತ್ತಾನೆ. ಅಲ್ಲದೆ ಬ್ರಹ್ಮಸ್ವರೂಪನಾಗಿಯೂ, ನಾಶರಹಿತನಾಗಿಯೂ, ಇರುವ ಈ ರುದ್ರದೇವನನ್ನು ಸಜ್ಜನರು ಪ್ರಯತ್ನ ಪೂರ್ವಕವಾಗಿ ಉಪಾಸನೆ ಮಾಡತಕ್ಕದ್ದು.

೨೭–೨೮. ಯಾವ ಕಾರಣದಿಂದ ಬ್ರಹ್ಮಸ್ವರೂಪನಾದ ರುದ್ರದೇವನು ಶಬ್ದಪ್ರಯೋಕ್ತೃಗಳ ಮಾತುಗಳಿಗೂ, ಮನಸ್ಸುಗಳಿಗೂ ಅಗೋಚರ (ಅವಿಷಯ) ನೋ ಆ ಕಾರಣದಿಂದಲೇ ಈ ಪ್ರಕರಣದಲ್ಲಿಯೂ ಹೇಳಿರುವ ಶಿವನು ದುರ್ವಿಜ್ಞೇಯನೆಂದು ವೇದ ವಚನವು ಪ್ರಯತ್ನ ಪೂರ್ವಕವಾಗಿ ಹೇಳುತ್ತದೆ. ಸರ್ವಜ್ಞನಾಗಿಯೂ, ಲೋಕಕ್ಕೆ ಸುಖವನ್ನುಂಟುಮಾಡುವವನಾಗಿಯೂ, ಅರ್ಧನಾರೀಶ್ವರನಾಗಿಯೂ ಇರುವ ಯಾವ ಶಿವದೇವನನ್ನು ಶ್ರುತಿವಾಕ್ಯಗಳು ಸಗುಣ ಬ್ರಹ್ಮ ಸ್ವರೂಪನನ್ನಾಗಿಯೂ, ನಿರ್ಗುಣ ಬ್ರಹ್ಮಸ್ವರೂಪನನ್ನಾಗಿಯೂ, ಶ್ರೇಷ್ಠವಾದ

ವದಂತಿ ವಾಚಃ ಸರ್ವಜ್ಞಂ ಶಂಕರಂ ನೀಲಲೋಹಿತಂ ।
ಏಷ ಸರ್ವೋ ನಮಸ್ತಸ್ಮೈ ಪುರುಷಃ ಪಿಂಗಲಃ ಶಿವಃ ॥೨೯॥

ಸ ಏಷ ಸ ಮಹಾರುದ್ರೋ ವಿಶ್ವಂ ಭೂತಂ ಭವಿಷ್ಯತಿ ।
ಭುವನಂ ಬಹುಧಾ ಜಾತಂ ಜಾಯಮಾನ ಮಿತಸ್ತತಃ ॥೩೦॥

ಹಿರಣ್ಯ ಬಾಹು ರ್ಭಗವಾನ್ ಹಿರಣ್ಯಪತಿ ರೀಶ್ವರಃ ।
ಅಂಬಿಕಾಪತಿ ರೀಶಾನೋ ಹೇಮರೇತಾ ವೃಷಧ್ವಜಃ ॥೩೧॥

---

ಅಧಿಷ್ಠಾನ ಸ್ವರೂಪನನ್ನಾಗಿಯೂ, ಹೇಳುತ್ತವೆಯೋ ಆ ಈ ಸರ್ವ ಪುರುಷ ಸ್ವರೂಪನಾಗಿಯೂ ಪಿಂಗಲ ವರ್ಣವುಳ್ಳವನಾಗಿಯೂ, ಇರುವ ಶಿವದೇವನಿಗೋಸ್ಕರ ನಮಸ್ಕಾರವು.

೩೦. "ಸ ಏಷ ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್" ಎಂದು ಮುಂತಾದ ಶ್ರುತಿಯಲ್ಲಿ ಹೇಳಲ್ಪಟ್ಟ ರುದ್ರದೇವನು ಜಡವಾದ ಪ್ರಪಂಚ ಸ್ವರೂಪನಾಗಿಯೂ, ಚೇತನವಾದ ಪ್ರಾಣಿ ಸಮೂಹ ಸ್ವರೂಪನಾಗಿಯೂ,ಹದಿನಾಲ್ಕು ಲೋಕಗಳ ಸ್ವರೂಪ ನಾಗಿಯೂ, ನಾನಾ ಪ್ರಕಾರವಾಗಿ ಮೊದಲು ಹುಟ್ಟಿದ ಪ್ರಾಣಿ ಸ್ವರೂಪ ನಾಗಿಯೂ, ಈಗ ವರ್ತಮಾನಕಾಲದಲ್ಲಿ ಅಲ್ಲಿ ಇಲ್ಲಿ ಹುಟ್ಟುತ್ತಿರುವ ಪ್ರಾಣಿ ಸ್ವರೂಪನಾಗಿಯೂ, ಭವಿಷ್ಯತ್ಕಾಲದಲ್ಲಿ ಹುಟ್ಟುವ ಪ್ರಾಣಿ ಸ್ವರೂಪನಾಗಿಯೂ ಇರುತ್ತಾನೆ.

೩೧. "ನಮೋ ಹಿರಣ್ಯ ಬಾಹವೇ" ಎಂಬ ಶ್ರುತ್ಯರ್ಥವನ್ನು ಇಲ್ಲಿ ಅನುವಾದ ಮಾಡಿರುತ್ತದೆ. ಭಗವಂತನಾದ ಈಶ್ವರನು ಚಿನ್ನದ ಕೈಗಳುಳ್ಳನಾಗಿಯೂ, ಭಂಗಾರಕ್ಕೆ ಸ್ವಾಮಿಯಾಗಿಯೂ, ಅಂಬಿಕಾದೇವಿಗೆ ಗಂಡನಾಗಿಯೂ. ಎಲ್ಲಾ ವಿದ್ಯೆಗಳಿಗೂ ಸ್ವಾಮಿಯಾಗಿಯೂ,ಸುವರ್ಣವೇ ರೇತಸ್ಸು (ವೀರ್ಯವು) ಆಗಿ ಉಳ್ಳವನಾಗಿಯೂ ವೃಷಭವೇ ಧ್ವಜವಾಗುಳ್ಳವನಾಗಿಯೂ, ಪಾರ್ವತೀದೇವಿಗೆ ಪತಿಯಾಗಿಯೂ, ಮೂರು ಕಣ್ಣುಗ

ಉಮಾಪತಿ ರ್ವಿರೂಪಾಕ್ಷೋ ವಿಶ್ವಸೃ ಗ್ವಿಶ್ವವಾಹನಃ ।
ಬ್ರಹ್ಮಾಣಂ ವಿದಧೇ ಯೋಽಸೌ ಪುತ್ರಮಗ್ರೇ ಸನಾತನಂ ॥೩೨॥

ಪ್ರಹಿಣೋತಿ ಸ್ಮ ತಸ್ಯೈವ ಜ್ಞಾನಮಾತ್ಮ ಪ್ರಕಾಶಕಂ ।
ತಮೇಕಂ ಪುರುಷಂ ರುದ್ರಂ ಪುರು ಹೂತಂ ಪುರುಷ್ಟುತಂ ॥೩೩॥

ವಾಲಾಗ್ರಮಾತ್ರಂ ಹೃದಯಸ್ಯಮಧ್ಯೇ
ವಿಶ್ವಂ ದೇವಂ ವಹ್ನಿರೂಪಂ ವರೇಣ್ಯಂ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ
ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ ॥೩೪॥

---

ಳುಳ್ಳವನಾಗಿಯೂ, ಲೋಕಕ್ಕೆ ಸೃಷ್ಟಿ ಕರ್ತನಾಗಿಯೂ, ಲೋಕವೇ ವಾಹನವಾಗಿ ಉಳ್ಳವನಾಗಿಯೂ ಇರುತ್ತಾನೆ.

೩೨–೩೪, "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ" ಎಂಬ ಶ್ರುತ್ಯರ್ಥವನ್ನು ಇಲ್ಲಿ ಹೇಳಿದೆ. ಯಾವ ರುದ್ರದೇವನು ಮಗನಾಗಿಯೂ, ಬಹಳ ಕಾಲದವರೆಗೆ ಇರುವಂಥವನಾಗಿಯೂ, ಇರುವ ಚತುರ್ಮುಖ ಬ್ರಹ್ಮನನ್ನು ಮೊದಲು ಸೃಷ್ಟಿಸಿ, ಅವನಿಗೆ ಸ್ವರೂಪವನ್ನು ಪ್ರಕಾಶ ಗೊಳಿಸುವ ಜ್ಞಾನವನ್ನು ಉಪದೇಶಮಾಡಿದನೋ, ಅದ್ವಿತೀಯನಾಗಿಯೂ, ವ್ಯಾಪಕನಾಗಿಯೂ, ದೇವೇಂದ್ರ ಸ್ವರೂಪನಾಗಿಯೂ, ಹೆಚ್ಚಾಗಿ ಸ್ತುತಿಸಲ್ಪಟ್ಟವನಾಗಿಯೂ, ಮೃಗಗಳ ಬಾಲಗಳ, ಕೇಶಗಳ ಅಗ್ರಭಾಗ (ಕೊನೇ ಭಾಗ) ದಂತೆ ಸೂಕ್ಷ್ಮಸ್ವರೂಪನಾಗಿಯೂ, ಹೃದಯದ ಮಧ್ಯದಲ್ಲಿ ಹೃದಯ ಕಮಲದಲ್ಲಿ ಅನುಭವಕ್ಕೆ ಬರುವವನಾಗಿಯೂ, ಅಗ್ನಿಸ್ವರೂಪನಾಗಿಯೂ, ಎಲ್ಲಾ ಪ್ರಪಂಚ ಸ್ವರೂಪನಾಗಿಯೂ, ಸಮಸ್ತರಿಂದ ಸೇವಿಸಲು ಯೋಗ್ಯನಾಗಿಯೂ, ಇರುವ ರುದ್ರದೇವನನ್ನು ಯಾವಧೈರ್ಯಶಾಲಿಗಳು ತಿಳಿಯುವರೋ ಅವರಿಗೇ ಶಾಶ್ವತವಾದ (ಸ್ಥಿರವಾದ) ಶಾಂತಿಯು (ಮನಸ್ಸಮಾಧಾನವು) ಇರುವುದೇ ಹೊರತು ಇತರರಿಗೆ ಇರಲಾರದು.

ಮಹತೋ ಯೋ ಮಹೀಯಾಂಶ್ಚ ಹ್ಯಣೋರಪ್ಯಣು ರವ್ಯಯಃ ।
ಗುಹಾಯಾಂ ನಿಹಿತ ಶ್ಚಾತ್ಮಾ ಜಂತೋರಸ್ಯ ಮಹೇಶ್ವರಃ ॥ ೩೫॥

ವೇಶ್ಮಭೂತೋಽಸ್ಯ ವಿಶ್ವಸ್ಯ ಕಮಲಸ್ಥೋ ಹೃದಿ ಸ್ವಯಂ ।
ಗಹ್ವರಂ ಗಹನಂ ತತ್ಸ್ಥಂ ತಸ್ಯಾಂತಶ್ಚೋರ್ಧ್ವತಃ ಸ್ಥಿತ ॥ ೩೬॥

ತತ್ರಾಪಿ ದಹ್ರಂ ಗಗನಮೋಂಕಾರಂ ಪರಮೇಶ್ವರಂ ।
ಬಾಲಾಗ್ರ ಮಾತ್ರಂ ತನ್ಮಧ್ಯೇ ಋತಂ ಪರಮ ಕಾರಣಂ ॥ ೩೭॥

ಸತ್ಯಂ ಬ್ರಹ್ಮ ಮಹಾದೇವಂ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತ ಸ ಮೀಶಾನಂ ವಿರೂಪಾಕ್ಷ ಮಜೋದ್ಭವಂ ॥ ೩೮॥

---

೩೫. "ಅಣೋ ರಣೀಯಾ಼ ಮಹತೋ ಮಹೀಯಾನ್" ಎಂಬ ಶ್ರುತಿಯಲ್ಲಿ ಹೇಳಿರುಹಾಗೆ, ಯಾವಆತ್ಮನು ನಾಶರಹಿತನೂ, ಮಹತ್ಪರಿಮಾಣವುಳ್ಳವಸ್ತುಗಳಿಗೆ ಆಧಾರ ಭೂತನೂ ಆಗಿರುವುದರಿಂದ ಮಹತ್ಪರಿಮಾಣವುಳ್ಳ ಪದಾರ್ಥಗಳಿಗಿಂತಲೂ ಮಹತ್ತ್ವವುಳ್ಳವನೂ, ಮತ್ತು ಅಣುತರ ಪದಾರ್ಥಗಳಲ್ಲೂ ವ್ಯಾಪಿಸಿ ಆಧಾರ ಭೂತನಾದುದರಿಂದ ಅಣು ಪದಾರ್ಥಗಳಿಗಿಂತಲೂ ಸೂಕ್ಷ್ಮನಾಗಿ ದುರ್ವಿಜ್ಞೇಯನಾಗಿಯೂ, ಇರುವನೋ ಅಂತಹ ಆತ್ಮನು ಈ ಪ್ರಾಣಿ ಸಮುದಾಯದ ಹಾರ್ದಾಕಾಶದಲ್ಲಿ ವಾಸಿಸುತ್ತಾನೆ. ಹಾರ್ದಾಕಾಶವು ಇವನ ಉಪಲಬ್ಧಿಸ್ಥಾನವಾಗಿರುತ್ತದೆ. ಎಂದರ್ಥವು.

೩೬–೩೭. ನಿಖಿಲ ಭೂತಗಳಿಗೂ ಆಶ್ರಯ ಸ್ಥಾನವಾದ ಆ ಆತ್ಮನು ಪ್ರಾಣಿಗಳ ಹೃದಯ ಪುಂಡರೀಕದಲ್ಲಿ ಯೋಗಿಗಳಲ್ಲದವರಿಗೆ ದುರ್ವಿಜ್ಞೇಯವಾದ ಆಕಾಶವು ಇರುವುದು. ಆ ಆಕಾಶದಲ್ಲಿ ವಹ್ನಿಶಿಖೆಯು (ಅಗ್ನಿಜ್ವಾಲೆಯು) ಊರ್ಧ್ವಾಗ್ರವಾಗಿ ಇರುವುದು. ("ತಸ್ಯಮಧ್ಯೇ ವಹ್ನಿಶಿಖಾ ಅಣೀಯೋ ರ್ಧ್ವಾ ವ್ಯವಸ್ಥಿತಾಃ" ಎಂದು ವೇದದಲ್ಲಿ ಹೇಳಿರುತ್ತದೆ). ಆ ವಹ್ನಿ ಶಿಖೆಯಲ್ಲಿಯೂ ದಹರವೆಂಬ ಸಂಜ್ಞೆಯುಳ್ಳ ಆಕಾಶವಿರುತ್ತದೆ. ಅದರಲ್ಲಿ ಪರಮಾರ್ಥತಃ ಸತ್ಯಸ್ವರೂಪನಾದ ಜಗತ್ಕಾರಣನೂ, ಓಂಕಾರ ಸ್ವರೂಪನೂ ಆದ ಪರಮಾತ್ಮನು ಇರುತ್ತಾನೆ.

೩೮–೩೯. ಸತ್ಯಸ್ವರೂಪವೂ ದೇದೀಪ್ಯಮಾನವಾದುದೂ, ಸಂಪೂರ್ಣ ಸ್ವರೂಪವೂ, ಅರ್ಧನಾರೀಶ್ವರ ಸ್ವರೂಪವನ್ನು ಧರಿಸಿರುವುದೂ,

**ಅಧಿತಿಷ್ಠತಿ ಯೋನಿಂ ಯೋ ಯೋನಿಂ ವಾಚೈಕ ಈಶ್ವರಃ ।**
**ದೇಹಂ ಪಂಚವಿಧಂ ಯೇನ ತಮೀಶಾನಂ ಪುರಾತನಂ ॥೩೯॥**

**ಪ್ರಾಣೇಷ್ವಂತ ರ್ಮನಸೋ ಲಿಂಗಮಾಹು**
**ರಸ್ಮಿನ್ ಕ್ರೋಧೋ ಯಾ ಚ ತೃಷ್ಣಾ ಕ್ಷಮಾ ಚ ।**
**ತೃಷ್ಣಾಂ ಛಿತ್ವಾ ಹೇತು ಜಾಲಸ್ಯ ಮೂಲಂ ।**
**ಬುದ್ಧ್ಯಾ ಚಿಂತ್ಯಂ ಸ್ಥಾಪಯಿತ್ವಾ ಚ ರುದ್ರೇ ॥೪೦॥**

**ಏಕಂ ತಮಾಹು ರ್ವೈ ರುದ್ರಂ ಶಾಶ್ವತಂ ಪರಮೇಶ್ವರಂ ।**
**ಪರಾತ್ಪರತರಂ ಚಾಪಿ ಪರಾತ್ಪರತರಂ ಧ್ರುವಂ ॥೪೧॥**

**ಬ್ರಹ್ಮಣೋ ಜನಕಂ ವಿಷ್ಣೋರ್ವಹ್ನೇರ್ವಾಯೋಃ ಸದಾಶಿವಂ ।**
**ಧ್ಯಾತ್ವಾಽಗ್ನಿನಾ ಚ ಶೋಧ್ಯಾಂಗಂ ವಿಶೋಧ್ಯ ಚ ಪೃಥಕ್ಪೃಥಕ್ ॥**

---

ವಿರೂಪಾಕ್ಷನೆಂಬ ಔಪಾಧಿಕ ಸಂಜ್ಞೆಯುಳ್ಳದ್ದೂ, ಸಕಲವಾದ ಎಂದರೆ ದೇವ ತಿರ್ಯಗಾದಿ ಯೋನಿಗಳನ್ನು ಜೀವರೂಪದಿಂದ ಪ್ರವೇಶಿಸಿ, ಯಾವ ಸದ್ರೂಪವು ಅನ್ನಮಯ ಪ್ರಾಣಮಯಾದಿ ಪಂಚ ಕೋಶಾತ್ಮಕವಾದ ಶರೀರವನ್ನು ಪಡೆದಿರುವುದೋ, ಅಂತಹ ಪರಬ್ರಹ್ಮಸ್ವರೂಪವನ್ನು ತಿಳಿಯುವವರೇ ಶಾಶ್ವತವಾದ ಆನಂದವನ್ನು ಅನುಭವಿಸುವರು.

೪೦. ಪ್ರಾಣಕೋಶದ ಒಳಭಾಗದಲ್ಲಿ ಮನಸ್ಸಿನ ಲಿಂಗ ಶರೀರವು ಇರುವುದೆಂದು ಯೋಗಿಗಳು ಹೇಳುತ್ತಾರೆ. ಆ ಮನಸ್ಸಿನಲ್ಲಿಕ್ರೋಧವೂ, ಆಶೆಯೂ, ಕ್ಷಮೆಯೂ, ಇರುವುವು. ಹೀಗಿರುವಲ್ಲಿ ಸಕಲ ವಿಷಯ ಸುಖದುಃಖಗಳಿಗೂ ಕಾರಣವಾದ ಆಶೆಯನ್ನು ತೊರೆದು ಅದನ್ನು ರುದ್ರನಲ್ಲಿ ಸ್ಥಾಪಿಸಿ ರುದ್ರನನ್ನು ಮನಸ್ಸಿನಿಂದ ಧ್ಯಾನಮಾಡಬೇಕು.

೪೧. ಆ ರುದ್ರನನ್ನೇ ತ್ರಿಕಾಲಗಳಲ್ಲಿ ಅಬಾಧ್ಯನನ್ನಾಗಿಯೂ, ಜಗನ್ನಿಯಾಮಕನನ್ನಾಗಿಯೂ, ಅವಿಕಾರಿ ಸ್ವರೂಪನನ್ನಾಗಿಯೂ, ದೃಶ್ಯ ಜಗತ್ತಿಗಿಂತಲೂ ಭಿನ್ನನನ್ನಾಗಿಯೂ, ಉತ್ತಮವಾದ ತತ್ವಗಳಿಂತ ಉತ್ತಮನನ್ನಾಗಿಯೂ, ಜ್ಞಾನಿಗಳು ಹೇಳುತ್ತಾರೆ.

೪೨. ಬ್ರಹ್ಮ, ವಿಷ್ಣು ಮತ್ತು ಅಗ್ನಿ ಇವರಿಗೆ ಜನಕನೂ, ಸದಾ ಕಲ್ಯಾಣರೂಪನೂ,ಆದ ಆ ರುದ್ರನನ್ನು ಧ್ಯಾನಮಾಡಿ,ಪೂರ್ವೋಕ್ತ ಭೂತ

ಪಂಚ ಭೂತಾನಿ ಸಂಯಮ್ಯ ಮಾತ್ರಾ ಗುಣ ವಿಧಿ ಕ್ರಮಾತ್ ।
ಮಾತ್ರಾಃ ಪಂಚ ಚತಸ್ರಶ್ಚ ತ್ರಿಮಾತ್ರಾದಿ ಸ್ತತಃ ಪರಂ ॥೪೩॥
ಏಕಮಾತ್ರ ಮಮಾತ್ರಂ ಹಿ ದ್ವಾದಶಾಂತೇ ವ್ಯವಸ್ಥಿತಂ ।
ಸ್ಥಿತ್ವಾ ಸ್ಥಾಪ್ಯಾ ಮೃತೋ ಭೂತ್ವಾ ವ್ರತಂ ಪಾಶುಪತಂ ಚರೇತ್ ॥
ಏತದ್ವ್ರತಂ ಪಾಶುಪತಂ ಚರಿಷ್ಯಾಮಿ ಸಮಾಸತಃ ।
ಅಗ್ನಿ ಮಾಧಾಯ ವಿಧಿವತ್ ಋಗ್ಯಜುಃ ಸಾಮ ಸಂಭವೈಃ ॥೪೫॥
ಉಪೋಷಿತಃ ಶುಚಿಃ ಸ್ನಾತಃ ಶುಕ್ಲಾಂಬರ ಧರಃ ಸ್ವಯಂ ।
ಶುಕ್ಲ ಯಜ್ಞೋಪವೀತೀ ಚ ಶುಕ್ಲ ಮಾಲ್ಯಾನು ಲೇಪನಃ ॥೪೬॥

---

ಶುದ್ಧಿ ಕ್ರಮದಿಂದ ಸಕಲ ಭೂತಗಳನ್ನೂ ರಂಬೀಜವೆಂಬ ಅಗ್ನಿಯಿಂದ ದಹಿಸಿ ಎಂದರೆ ಸಕಲ ಭೂತ ಭೌತಿಕವಾದ ಪ್ರಪಂಚವನ್ನು ಮಿಥ್ಯಾ ಭೂತವೆಂದು ತಿಳಿದುಕೊಂಡು, ಸಕಲ ಪದಾರ್ಥಗಳ ಸ್ವರೂಪವನ್ನು ಮತ್ತು ರುದ್ರನ ಪಾರಮಾರ್ಥಿಕ ಸ್ವರೂಪವನ್ನೂ ವಿಂಗಡಿಸಿ ತಿಳಿದು ಕೊಂಡು ಜ್ಞಾನಾಗ್ನಿಯಿಂದ ಬಾಧಿಸಿ,ಪಾಶುಪತ ವ್ರತವನ್ನು ಅನುಷ್ಠಾನ ಮಾಡಬೇಕು. ತನ್ನ ದೇಹಾರಂಭಕವಾದ ಪಂಚಭೂತಗಳ ತನ್ಮಾತ್ರಗಳನ್ನೂ, ಶಬ್ದಾದಿ ಗುಣಗಳನ್ನೂ, ಕಾರ್ಯಗಳನ್ನೂ ಕಾರಣಗಳಲ್ಲಿ ಲಯ ಮಾಡಬೇಕು. ಓಂಕಾರ ಪ್ರತಿಪಾದ್ಯನೂ ನಿರ್ಗುಣನೂ ಆಗಿರುವ ಪರಶಿವ ತತ್ವವನ್ನು ದ್ವಾದಶ ತತ್ವಾಂತವಾಗಿ ಉಪಾಸನೆಮಾಡುತ್ತಾ, ಏಕಾಗ್ರವಾದ ಸಮಾಧಿಯಲ್ಲಿ ನಿಲ್ಲಿಸಿ, ಪರತತ್ವ ಸಾಕ್ಷಾತ್ಕಾರ ದಿಂದ ಮೋಕ್ಷವನ್ನು ಪಡೆಯಬೇಕು.

೪೩–೪೪. ಈ ಪಾಶುಪತ ವ್ರತ ಸಂಕಲ್ಪವನ್ನು ಹೇಳುತ್ತಾರೆ. ಪೂರ್ವೋಕ್ತ ಪಾಶುಪತವ್ರತವನ್ನು ವಿಧಿವತ್ತಾಗಿ ಸಂಗ್ರಹವಾಗಿ ಅನುಷ್ಠಾನ ಮಾಡುತ್ತೇನೆ. (ಹೀಗೆಂದು ಸಂಕಲ್ಪಮಾಡಬೇಕು).

೪೫–೪೬. (ವ್ರತದ ವಿಧಿಯನ್ನು ಹೇಳುತ್ತಾರೆ). ಋಗ್ವೇದಾದಿ ನಾಲ್ಕು ವೇದಗಳಲ್ಲೂ ಹೇಳಿರುವ ಮಂತ್ರಗಳಿಂದ ಆಯಾ ಶಾಖೋಕ್ತವಾದ ಪ್ರಕಾರದಿಂದ ಅಗ್ನಿಯನ್ನು ಆಧಾನಮಾಡಿ, ಉಪವಾಸ ವ್ರತವನ್ನು ಸ್ವೀಕರಿಸಿ, ಸ್ನಾನ ಮಾಡಿ ಶುದ್ಧನಾಗಿ, ಯಜ್ಞೋಪವೀತಧಾರಣ ಶುಕ್ಲ ವರ್ಣದ ಮಾಲ್ಯಾನುಲೇಪನಗಳನ್ನು ಮಾಡಿ, ವಿರಜಾಹೋಮವನ್ನು ಮಾಡಬೇಕು. ಪೂರ್ವೋಕ್ತವಾದ ವಿಧಿಯಿಂದ ಹೋಮವನ್ನು ಮಾಡುವವನು ಪಾಪರಹಿತನಾಗುತ್ತಾನೆ.

ಜುಹುಯಾ ದ್ವಿರಜೋ ವಿದ್ವಾ ನ್ವಿರಜಾಶ್ಚ ಭವಿಷ್ಯತಿ ।
ವಾಯವಃ ಪಂಚ ಶುದ್ಧ್ಯಂತಾಂ ವಾಙ್ಮನ ಶ್ಚರಣಾದಯಃ ॥೪೭॥

ಶ್ರೋತ್ರಂ ಜಿಹ್ವಾ ತತಃ ಘ್ರಾಣಸ್ತತೋ ಬುದ್ಧಿ ಸ್ತಥೈವ ಚ ।
ಶಿರಃ ಪಾಣಿಸ್ತಥಾ ಪಾರ್ಶ್ವಂ ಪೃಷ್ಠೋದರ ಮನಂತರಂ ॥೪೮॥

ಜಂಘೇ ಶಿಶ್ನ ಮುಪಸ್ಥಂ ಚ ಪಾಯುಃ ಮೇಢ್ರಂ ತಥೈವ ಚ ।
ತ್ವಚಾ ಮಾಂಸಂ ಚ ರುಧಿರಂ ಮೇದೋಽಸ್ಥೀನಿ ತಥೈವ ಚ ॥೪೯॥

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ ।
ಭೂತಾನಿ ಚೈವ ಶುದ್ಧ್ಯಂತಾಂ ದೇಹೇ ಮೇಧಾದಯಸ್ತಥಾ ॥೫೦॥

ಅನ್ನಂ ಪ್ರಾಣಂ ಮನೋ ಜ್ಞಾನಂ ಶುದ್ಧ್ಯಂತಾಂ ವೈ ಶಿವೇಚ್ಛಯಾ ।
ಹುತ್ವಾಽಽಜ್ಯೇನ ಸಮಿದ್ಭಿಶ್ಚ ಚರುಣಾ ಚ ಯಥಾ ಕ್ರಮಂ ॥೫೧॥

---

೪೭–೪೮. ಹೋಮಕಾಲದಲ್ಲಿ ಹೇಳುವರೀತಿಯಲ್ಲಿ ''ಪ್ರಾಣಾಪಾನವ್ಯಾನೋದಾನ ಸಮಾನಾ ಮೇ ಶುದ್ಧ್ಯಂತಾಂ'' ಎಂದು ಶ್ರುತಿ, ಯಲ್ಲಿರುವಂತೆ ಸಂಕಲ್ಪವನ್ನು ಮಾಡಬೇಕು. ನನ್ನ ಪ್ರಾಣಾಪಾನಾದಿ ಪಂಚವಾಯುಗಳೂ ಶುದ್ಧಿಯನ್ನು ಹೊಂದಲಿ. ವಾಗಿಂದ್ರಿಯವೂ, ಮನಸ್ಸೂ, ಚರಣಗಳೂ ಶುದ್ಧಿಯನ್ನು ಹೊಂದಲಿ. ಇದಲ್ಲದೇ ಶ್ರೋತ್ರೇಂದ್ರಿಯವೂ, ರಸನೇಂದ್ರಿಯವೂ, ಘ್ರಾಣವೂ ತದನಂತರದಲ್ಲಿ ಬುದ್ಧಿಯೂ, ( ಬುದ್ಧಿ ಎಂದರೆ ನಿಶ್ಚಯಾತ್ಮಕವಾದ ವೃತ್ತಿಯಿಂದೊಡಗೂಡಿದ ಅಂತಃಕರಣವೂ ) ಶಿರಸ್ಸೂ, ಕೈಗಳೂ, ಎಡಬಲ ಪಾರ್ಶ್ವಗಳೂ, ಅನಂತರದಲ್ಲಿ ಪೃಷ್ಠವೂ ಮತ್ತು ಉದರವೂ ಶುದ್ಧವಾಗಲಿ.

೪೯–೫೦. ಮೊಳಕಾಲುಗಳೂ, ಶಿಶ್ನವೂ, ಉಪಸ್ಥವೂ, ಗುದವೂ, ಅಂಡವೂ, ಇದರಂತೆ ಚರ್ಮವೂ, ಮಾಂಸವೂ, ರಕ್ತವೂ, ಮೇದಸ್ಸೂ, ಮೂಳೆಗಳೂ ಶಬ್ದಸ್ಪರ್ಶರೂಪ ರಸಗಂಧಗಳೂ, ದೇಹದಲ್ಲಿರುವ ಸಕಲ ಭೂತಗಳೂ ಶುದ್ಧಿಯನ್ನು ಹೊಂದಲಿ.

೫೧. ಆ ಪರಶಿವನ ಇಷ್ಟಾನುಸಾರವಾಗಿ ಅನ್ನಮಯಕೋಶವೂ, ಪ್ರಾಣಮಯ ಕೋಶವೂ, ಮನೋಮಯಕೋಶವೂ, ವಿಜ್ಞಾನಮಯ

ಉಪಸಂ ಹೃತ್ಯ ರುದ್ರಾಗ್ನಿಂ ಗೃಹೀತ್ವಾ ಭಸ್ಮ ಯತ್ನತಃ ।
ಅಗ್ನಿರಿತ್ಯಾದಿನಾ ಧೀಮಾನ್ ವಿಮೃಜ್ಯಾಂಗಾನಿ ಸಂಸ್ಪೃಶೇತ್ ।
ಏತತ್ಪಾಶುಪತಂ ದಿವ್ಯಂ ವ್ರತಂ ಪಾಶವಿಮೋಚನಂ ॥೫೨॥

ಬ್ರಾಹ್ಮಣಾನಾಂ ಹಿತಂ ಪ್ರೋಕ್ತಂ ಕ್ಷತ್ರಿಯಾಣಾಂ ತಥೈವ ಚ ॥೫೩॥

ವೈಶ್ಯಾನಾಮಪಿ ಯೋಗ್ಯಾನಾಂ ಯತೀನಾಂ ತು ವಿಶೇಷತಃ ।
ವಾನಪ್ರಸ್ಥಾಶ್ರಮ ಸ್ಥಾನಾಂ ಗೃಹಸ್ಥಾನಾಂ ಸತಾಮಪಿ ॥೫೪॥

---

ಕೋಶವೂ, ಶುದ್ಧವಾಗಲಿ. ಘೃತದಿಂದಲೂ, ಸಮಿತ್ತುಗಳಿಂದಲೂ ಚರುವಿನಿಂದಲೂ, ಹೋಮವನ್ನು ಮಾಡಿ, ಹೋಮವು ಮುಗಿದ ತರುವಾಯ ಅಗ್ನಿಯನ್ನು ಸೂಕ್ತಕ್ರಮದಿಂದ ವಿಸರ್ಜಿಸಿ ಪ್ರಯತ್ನ ಪುರಃಸರವಾಗಿ ಭಸ್ಮವನ್ನು ತೆಗೆದುಕೊಳ್ಳಬೇಕು.

೫೨. "ಅಗ್ನಿರಿತಿ ಭಸ್ಮ" ಎಂಬೀ ಮಂತ್ರದಿಂದ ಆ ಭಸ್ಮಗಳನ್ನು ಅಂಗಗಳಲ್ಲಿ ಲೇಪಿಸಿ, ಅಂಗಗಳನ್ನು ಮುಟ್ಟಬೇಕು. ಇದು ದಿವ್ಯವಾದ ಪಾಶುಪತವ್ರತವು. ಇದು ಉಪಾಸಕರನ್ನು ಸಂಸಾರ ಬಂಧನದಿಂದ ಪಾರುಗಾಣಿಸುವುದಾಗಿರುತ್ತದೆ.

೫೩-೫೪. ಪೂರ್ವೋಕ್ತ ಶ್ಲೋಕದಲ್ಲಿ ಪಾಶುಪತ ವ್ರತದ ಮಾಹಾತ್ಮ್ಯೆಯನ್ನು ಹೇಳಿ ಈ ಶ್ಲೋಕದಲ್ಲಿ ಆ ವ್ರತದ ಅಧಿಕಾರಿಗಳನ್ನು ಹೇಳುತ್ತಾರೆ. ಈ ಪಾಶುಪತವ್ರತವು ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ, ಯೋಗ್ಯರಾದ ವೈಶ್ಯರಿಗೂ, ವಿಶೇಷವಾಗಿ ಸಂನ್ಯಾಸಿಗಳಿಗೂ, ಸತ್ಪುರುಷರಾದ ಗೃಹಸ್ಥರಿಗೂ, ವಾನಪ್ರಸ್ಥಾಶ್ರಮಿಗಳಿಗೂ, ಹಿತಪ್ರದವಾಗಿರುತ್ತದೆ. ಹಿಂದೆ ಹೇಳಿದ ರೀತಿಯಲ್ಲಿ ವಿರಜಾಹೋಮ ಪೂರ್ವಕವಾಗಿ ಭಸ್ಮಧಾರಣೆಯನ್ನು ಮಾಡುವ ಬ್ರಹ್ಮಚಾರಿಗಳಿಗೂ ಸಂಸಾರಪಾಶದಿಂದ ಮುಕ್ತಿಯು ಬರುತ್ತದೆ.

ವಿಮುಕ್ತಿ ರ್ವಿಧಿನಾಽನೇನ ದೃಷ್ಟ್ವಾ ವೈ ಬ್ರಹ್ಮಚಾರಿಣಾಂ ।
ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ಹ್ಯಗ್ನಿಹೋತ್ರಜಂ ॥೫೫॥
ಸೋಽಪಿ ಪಾಶುಪತೋ ವಿಪ್ರೋ ವಿಮೃಜ್ಯಾಂಗಾನಿ ಸಂಸ್ಪೃಶೇತ್ ।
ಭಸ್ಮಚ್ಛನ್ನೋ ದ್ವಿಜೋ ವಿದ್ವಾನ್ ಮಹಾಪಾತಕ ಸಂಭವೈಃ ॥೫೬॥
ಪಾಪೈ ರ್ವಿಮುಚ್ಯತೇ ಸದ್ಯೋ ಮುಚ್ಯತೇ ಚ ನ ಸಂಶಯಃ ।
ವೀರ್ಯಮಗ್ನೇರ್ಯತೋ ಭಸ್ಮ ವೀರ್ಯವಾನ್ ಭಸ್ಮಸಂಯುತಃ ॥೫೭॥
ಭಸ್ಮಸ್ನಾನ ರತೋ ವಿಪ್ರೋ ಭಸ್ಮಶಾಯೀ ಜಿತೇಂದ್ರಿಯಃ ।
ಸರ್ವ ಪಾಪ ವಿನಿರ್ಮುಕ್ತಃ ಶಿವಸಾಯುಜ್ಯ ಮಾಪ್ನುಯಾತ್ ॥

---

೫೫. ಕೇವಲ ಭಸ್ಮಧಾರಣೆಯಿಂದುಂಟಾಗುವ ಮಾಹಾತ್ಮ್ಯೆಯನ್ನು ಹೇಳುತ್ತಾರೆ. ಅಗ್ನಿಹೋತ್ರದಿಂದುಂಟಾದ ಭಸ್ಮವನ್ನು ಹಸ್ತದಲ್ಲಿ ತೆಗೆದುಕೊಂಡು "ಅಗ್ನಿರಿತಿ ಭಸ್ಮ" ಎಂಬೀ ಮಂತ್ರಗಳಿಂದ ಯಾವನು ತನ್ನ ಅಂಗಗಳನ್ನು ಲೇಪನ ಮಾಡಿಕೊಳ್ಳುವನೋ ಅವನೂ, ಆ ಬ್ರಾಹ್ಮಣನೂ, ಪಾಶುಪತನೆಂದು ಕರೆಯಿಸಿ ಕೊಳ್ಳಲ್ಪಡುತ್ತಾನೆ. ವ್ರತಾನುಷ್ಠಾನವನ್ನು ಆಚರಿಸದಿದ್ದರೂ ಭಸ್ಮ ಲೇಪನ ಮಾತ್ರದಿಂದ ಪಾಶುಪತ ವ್ರತವನ್ನು ಮಾಡಿರುವವನ ಫಲವನ್ನು ಹೊಂದುತ್ತಾನೆಂದರ್ಥವು.

೫೬. ಹಿಂದೆ ಹೇಳಿದಂತೆ ಕೇವಲ ಭಸ್ಮಲಿಪ್ತನಾದ ತ್ರೈವರ್ಣಿಕನೂ ಸಹ ಮಹಾಪಾತಕಗಳಿಂದುಂಟಾಗುವ ಅನರ್ಥ ಪರಂಪರೆಗಳಿಂದ ಬಿಡಲ್ಪಟ್ಟು ಶೀಘ್ರವಾಗಿ ಸಂಸಾರ ಪಾಶದಿಂದ ವಿಮುಕ್ತನಾಗುತ್ತಾನೆ.

೫೭-೫೮. ಭಸ್ಮವು ಅಗ್ನಿಯ ವೀರ್ಯವಾಗಿರುವುದು. ಆದುದರಿಂದ ಅಗ್ನಿಯ ವೀರ್ಯವಾದ ಭಸ್ಮವನ್ನು ಯಾವನು ಧರಿಸುವನೋ ಅವನು ವೀರ್ಯದಿಂದ ಯುಕ್ತನಾಗುವನು. ಭಸ್ಮಸ್ನಾನವನ್ನು ಮಾಡತಕ್ಕವನೂ, ಭಸ್ಮದ ಮೇಲೆ ಮಲಗತಕ್ಕವನೂ, ಜಿತೇಂದ್ರಿಯನೂ ಆದ ಬ್ರಾಹ್ಮಣನು ಸಕಲ ಪಾಪಗಳಿಂದಲೂ ಮುಕ್ತನಾಗಿ ಶಿವಸಾಯುಜ್ಯವನ್ನು ಪಡೆಯುವನು.

ತಸ್ಮಾತ್ಸರ್ವ ಪ್ರಯತ್ನೇನ ಭೂತ್ಯಂಗಂ ಪೂಜಯೇದ್ಬುಧಃ ।
ರೇರೇಕಾರೋ ನ ಕರ್ತವ್ಯ ಸ್ತುಂತುಂಕಾರ ಸ್ತಥೈವ ಚ ॥೫೯॥

ನತತ್ಕ್ಷಮತಿ ದೇವೇಶೋ ಬ್ರಹ್ಮಾವಾ ಯದಿ ಕೇಶವಃ ।
ಮಮ ಪುತ್ರೋ ಭಸ್ಮಧಾರೀ ಗಣೇಶಶ್ಚ ವರಾನನೇ ॥೬೦॥

ತೇಷಾಂ ವಿರುದ್ಧಂ ಯತ್ಪ್ರಾಜ್ಯಂ ಸ ಯಾತಿ ನರಕಾರ್ಣವಂ ।
ಗೃಹಸ್ಥೋ ಬ್ರಹ್ಮಹೀನೋಽಪಿ ತ್ರಿಪುಂಡ್ರಂ ಯೋ ನ ಕಾರಯೇತ್ ॥

ಪೂಜಾ ಕರ್ಮಕ್ರಿಯಾ ತಸ್ಯ ದಾನಂ ಸ್ನಾನಂ ತಥೈವ ಚ ।
ನಿಷ್ಫಲಂ ಜಾಯತೇ ಸರ್ವಂ ಯಥಾ ಭಸ್ಮನಿ ವೈ ಹುತಂ ॥೬೨॥

ತಸ್ಮಾಚ್ಚ ಸರ್ವ ಕಾರ್ಯೇಷು ತ್ರಿಪುಂಡ್ರಂ ಧಾರಯೇ ದ್ಬುಧಃ ।
ಇತ್ಯುಕ್ತ್ವಾ ಭಗವಾನ್ ಬ್ರಹ್ಮಾ ಸ್ತುತ್ವಾ ದೇವೈಃ ಸಮಂ ಪ್ರಭುಃ ॥

---

೫೯–೬೦. ಆದುದರಿಂದ ಜ್ಞಾನಿಯು ಅಗ್ನಿಹೋತ್ರಜನ್ಯವಾದ ಭಸ್ಮವನ್ನೇ ಲೇಪನಮಾಡಿಕೊಳ್ಳಬೇಕು. ಮಧ್ಯದಲ್ಲಿ ರೇರೇ ಎಂಬ ಶಬ್ದೋಚ್ಚಾರಣೆಯನ್ನಾಗಲೀ ತುಂತುಂ ಎಂಬ ಅನುಕರಣ ಶಬ್ದೋಚ್ಚಾರಣೆಯನ್ನಾಗಲೀ ಮಾಡಬಾರದು. ಹೀಗೆ ಮಾಡಿದರೆ ಬ್ರಹ್ಮ, ವಿಷ್ಣು, ಮಹೇಶ್ವರರೂ ಭಸ್ಮಧಾರಿಯಾದ ಗಣೇಶನೂ ಇದನ್ನು ಸಹಿಸಲಾರರು.

೬೧–೬೨. ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳಿಗೆ ವಿರುದ್ಧವಾದ ರೇರೇಕಾರ ಮತ್ತು ತುಂತುಂಕಾರವನ್ನು ಉಚ್ಚರಿಸಿದವನು ನರಕವನ್ನು ಪಡೆಯುತ್ತಾನೆ. ತಪಸ್ಸೇ ಮುಂತಾದ ಆಚರಣೆಗಳಿಲ್ಲದವನಾದರೂ ಗೃಹಸ್ಥನು ತ್ರಿಪುಂಡ್ರಧಾರಣೆಯನ್ನು ಮಾಡದಿದ್ದಲ್ಲಿ ಅವನು ಆಚರಿಸತಕ್ಕ ಪೂಜಾ ಕರ್ಮವೂ, ದಾನವೂ, ಸ್ನಾನವೂ, ಮುಂತಾದುವುಗಳೆಲ್ಲವೂ ಬೂದಿಯಲ್ಲಿ ಮಾಡಿದ ಹೋಮದಂತೆ ನಿಷ್ಫಲವಾಗುವುದು.

೬೩. ಆದುದರಿಂದ ಎಲೈ ಪ್ರಜಾಧಿಪನೇ, ತಿಳಿದಿರುವವನು ಸಕಲ ಕಾರ್ಯಗಳಲ್ಲಿಯೂ ಮೊದಲು ತ್ರಿಪುಂಡ್ರಧಾರಣೆಯನ್ನು ಮಾಡಬೇಕು. ಹೀಗೆಂದು ಹೇಳಿ ಭಗವಂತನಾದ, ಭಸ್ಮಧಾರಣವನ್ನು ಮಾಡಿರುವ ಬ್ರಹ್ಮನು ಭಸ್ಮಧಾರಿಗಳಾದ ದೇವತೆಗಳೊಂದಿಗೆ ಧ್ಯಾನಾಸಕ್ತನಾದನು.

ಭಸ್ಮ ಚ್ಛನ್ನೈಃ ಸ್ವಯಂ ಚ್ಛನ್ನೋ ವಿರರಾಮ ವಿಶಾಂಪತೇ ।
ಅಥ ತೇಷಾಂ ಪರೀಕ್ಷಾರ್ಥಂ ಪಶೂನಾಂ ಪತಿರೀಶ್ವರಃ ॥೬೪॥

ಸಗಣಾ ಶ್ಚಾಂಬಯಾ ಸಾರ್ಧಂ ಸಾನ್ನಿಧ್ಯಮಕರೋತ್ಪ್ರಭುಃ ।
ಅಥ ಸನ್ನಿಹಿತಂ ರುದ್ರಂ ತುಷ್ಟುವುಃ ಸುರಪುಂಗವಂ ॥೬೫॥

ರುದ್ರಾಧ್ಯಾಯೇನ ದೇವೇಶಂ ದೇವದೇವ ಮುಮಾಪತಿಂ ।
ದೇವೋಽಪಿ ದೇವಾನಾಲೋಕ್ಯ ಘೃಣಯಾ ವೃಷಭಧ್ವಜಃ ॥೬೬॥

ತುಷ್ಟೋಽಸ್ಮೀತ್ಯಾಹ ದೇವೇಭ್ಯೋ ವರಂ ದಾತುಂ ಸುರಾರಿಹಾ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಅಷ್ಟಾದಶೋಽಧ್ಯಾಯಃ

---

೬೪. ತರುವಾಯ ಆ ದೇವತೆಗಳನ್ನು ಅನುಗ್ರಹಿಸಲು ಪಶುಪತಿಯಾದ ಈಶ್ವರನು ಪಾರ್ವತಿಯೊಂದಿಗೂ ಮತ್ತು ಪ್ರಮಥಗಣಗಳೊಂದಿಗೂ ಕೂಡಿದವನಾಗಿ ದೇವತೆಗಳ ಸಾಮೀಪ್ಯವನ್ನು ಪಡೆದನು.

೬೫. ಬಳಿಕ ಅವರು ತಮ್ಮ ಸಾನ್ನಿಧ್ಯವನ್ನು ಪಡೆದ ಪಾರ್ವತೀಪತಿಯಾದ ಶಿವನನ್ನು ರುದ್ರಾಧ್ಯಾಯದಿಂದ ಸ್ತೋತ್ರಮಾಡಿದರು.

೬೬-೬೭. ವೃಷಭಾರೂಢನಾದ ರುದ್ರನೂ ಸಹ ದೇವತೆಗಳನ್ನು ಕರುಣಾ ಪೂರಿತ ದೃಷ್ಟಿಗಳಿಂದ ನೋಡಿ ಅವರಿಗೆ ವರಗಳನ್ನು ಅನುಗ್ರಹಿಸುವುದಕ್ಕೋಸ್ಕರ ನಿಮ್ಮ ಸ್ತೋತ್ರಗಳಿಂದ ಸಂತುಷ್ಟನಾಗಿರುವೆನು. ನಿಮಗೆ ಬೇಕಾದ ವರಗಳನ್ನು ಕೇಳಿ. ಎಂದು ಹೇಳಿದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿಯಿತು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಏಕೋನ ವಿಂಶತಿತಮೋಽಧ್ಯಾಯಃ

**॥ ಶೈಲಾದಿ ರುವಾಚ ॥**

**ತಂ ಪ್ರಭುಂ ಪ್ರೀತಮಾನಸಂ ಪ್ರಣಿಪತ್ಯ ವೃಷಧ್ವಜಂ ।**
**ಅಪೃಚ್ಛನ್ಮುನಯೋ ದೇವಾಃ ಪ್ರೀತಿ ಕಂಟಕಿತತ್ವಚಃ ॥ ೧ ॥**

**॥ ದೇವಾ ಊಚುಃ ॥**

**ಭಗವನ್ಕೇನ ಮಾರ್ಗೇಣ ಪೂಜನೀಯೋ ದ್ವಿಜಾತಿಭಿಃ ।**
**ಕುತ್ರ ವಾ ಕೇನ ರೂಪೇಣ ವಕ್ತುಮರ್ಹಸಿ ಶಂಕರ ॥ ೨ ॥**

**ಕಸ್ಯಾಧಿಕಾರಃ ಪೂಜಾಯಾಂ ಬ್ರಾಹ್ಮಣಸ್ಯ ಕಥಂ ಪ್ರಭೋ ।**
**ಕ್ಷತ್ರಿಯಾಣಾಂ ಕಥಂ ದೇವ ವೈಶ್ಯಾನಾಂ ವೃಷಭಧ್ವಜ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹತ್ತೊಂಬತ್ತನೆಯ ಅಧ್ಯಾಯವು.

೧. ನಂದಿಕೇಶ್ವರನು ಹೇಳಿದನು :—ಎಲೈ ಸನತ್ಕುಮಾರನೇ, ಋಷಿಗಳು ಮತ್ತು ದೇವತೆಗಳು ಪ್ರೀತಿಯಿಂದ ರೋಮಾಂಚಿತರಾಗಿ ಸಂತೋಷಗೊಂಡಿರುವ ಪ್ರಭುವಾದ ವೃಷಭವಾಹನನಾದ ಪರಮೇಶ್ವರನನ್ನು ಕೇಳಿದರು.

೨-೪. ಓ ಪರಮೇಶನೇ, ದ್ವಿಜರು ನಿನ್ನನ್ನು ಯಾವ ಪ್ರಕಾರದಿಂದ ಎಲ್ಲಿ ಯಾವ ರೂಪದಿಂದ ಪೂಜಿಸಬೇಕು.? ಪೂಜೆಯನ್ನು ಮಾಡುವುದರಲ್ಲಿ ಯಾರಿಗೆ ಯಾವ ಪ್ರಕಾರದ ಅಧಿಕಾರವುಂಟು.? ಬ್ರಾಹ್ಮಣನು ಪೂಜೆಯನ್ನು ಯಾವಪ್ರಕಾರದಲ್ಲಿ ಮಾಡಬೇಕು? ಕ್ಷತ್ರಿಯರು ಹೇಗೆಮಾಡಬೇಕು? ವೈಶ್ಯರಿಗೆ ವಿಧಿಸಿರುವ ಮಾರ್ಗವು ಯಾವುದು? ಸ್ತ್ರೀಯರೂ ಮತ್ತು ಶೂದ್ರರೂ ನಿನ್ನನ್ನು ಹೇಗೆ ಪೂಜಿಸಬೇಕು? ಓ ವೃಷಭಧ್ವಜನೇ,

ಸ್ತ್ರೀ ಶೂದ್ರಾಣಾಂ ಕಥಂ ವಾಽಪಿ ಕುಂಡ ಗೋಲಾದಿನಾಂ ತು ವಾ ।
ಹಿತಾಯ ಜಗತಾಂ ಸರ್ವ ಮಸ್ಮಾಕಂ ವಕ್ತು ಮರ್ಹಸಿ ॥ ೪ ॥

॥ ಸೂತ ಉವಾಚ ॥

ತೇಷಾಂ ಭಾವಂ ಸಮಾಲೋಕ್ಯ ಮುನೀನಾಂ ನೀಲಲೋಹಿತಃ ।
ಪ್ರಾಹ ಗಂಭೀರಯಾ ವಾಚಾ ಮಂಡಲಸ್ಥಃ ಸದಾಶಿವಃ ॥ ೫ ॥

ಮಂಡಲೇ ಜಾಗ್ರತೋಽಪಶ್ಯ ನ್ದೇವದೇವಂ ಸಹೋಮಯಾ ।
ದೇವಾಶ್ಚ ಮುನಯ ಸ್ಸರ್ವೇ ವಿದ್ಯುತ್ಕೋಟಿ ಸಮಪ್ರಭಂ ॥ ೬ ॥

ಅಷ್ಟಬಾಹುಂ ಚತುರ್ವಕ್ತ್ರಂ ದ್ವಾದಶಾಕ್ಷಂ ಮಹಾ ಭುಜಂ ।
ಅರ್ಧ ನಾರೀಶ್ವರಂ ದೇವಂ ಜಟಾ ಮುಕುಟ ಧಾರಿಣಂ ॥ ೭ ॥

ಸರ್ವಾ ಭರಣ ಸಂಯುಕ್ತಂ ರಕ್ತ ಮಾಲ್ಯಾನು ಲೇಪನಂ ।
ರಕ್ತಾಂಬರಧರಂ ಸೃಷ್ಟಿ ಸ್ಥಿತಿ ಸಂಹಾರ ಕಾರಕಂ ॥ ೮ ॥

---

ನೀಚಜಾತಿಯವರಾದ ಕುಂಡ, ಮತ್ತು ಗೋಳಕರ ಪೂಜಾಕ್ರಮವೇನು? ಶಂಕರನೇ, ಪ್ರಪಂಚದ ಕ್ಷೇಮಕ್ಕಾಗಿ ಸಕಲವನ್ನೂ ನಮಗೆ ಹೇಳುವವನಾಗು.

೫. ಸೂತನು ಹೇಳಿದನು.— ಸೂರ್ಯ ಮಂಡಲದಲ್ಲಿ ಸನ್ನಿಹಿತನಾಗಿರುವ ನೀಲಲೋಹಿತನಾದ ಸದಾಶಿವನು ಆ ಋಷಿಗಳ ಮತ್ತು ದೇವತೆಗಳ ಅಭಿಪ್ರಾಯವನ್ನು ತಿಳಿದು ಗಂಭೀರವಾಗಿ ಮುಂದೆ ಹೇಳುವಂತೆ ಹೇಳಿದನು.

೬—೮. ದೇವತೆಗಳೂ ಮತ್ತು ಋಷಿಗಳೂ, ಸೂರ್ಯಮಂಡಲದಲ್ಲಿ ಮುಂಭಾಗದಲ್ಲಿ ಎಂಟು ತೋಳುಗಳುಳ್ಳ, ನಾಲ್ಕುಮುಖಗಳುಳ್ಳ, ಹನ್ನೆರಡು ಕಣ್ಣುಗಳುಳ್ಳ, ದೊಡ್ಡದಾದ ಭುಜಗಳುಳ್ಳ, ಜಟೆಕಿರೀಟಗಳನ್ನು ಧರಿಸಿರುವ, ಸಕಲ ಆಭರಣಗಳನ್ನೂ ಧರಿಸಿರುವ, ರಕ್ತಗಂಧಾನುಲೇಪನವುಳ್ಳ, ರಕ್ತವಸ್ತ್ರವನ್ನುಟ್ಟಿರುವ, ಜಗತ್ತಿನಸೃಷ್ಟಿ, ರಕ್ಷಣೆ, ಮತ್ತು ಸಂಹಾರಗಳನ್ನು ಮಾಡುವವನೂ ಅರ್ಧನಾರೀಶ್ವರನೂ, ಕೋಟಿ ಮಿಂಚುಗಳಿಗೆ ಸಮಾನವಾದ ಕಾಂತಿಯುಳ್ಳವನೂ, ಆದ ದೇವೇಶನನ್ನು ಉಮೆಯೊಡನೆ ನೋಡಿದರು.

ತಸ್ಯ ಪೂರ್ವ ಮುಖಂ ಪೀತಂ ಪ್ರಸನ್ನಂ ಪುರುಷಾತ್ಮಕಂ ।
ಅಘೋರಂ ದಕ್ಷಿಣಂ ವಕ್ತ್ರಂ ನೀಲಾಂಜನ ಚಯೋಪಮಂ ॥೯॥
ದಂಷ್ಟ್ರಾಕರಾಲ ಮತ್ಯುಗ್ರಂ ಜ್ವಾಲಾ ಮಾಲಾ ಸಮಾವೃತಂ ।
ರಕ್ತ ಶ್ಮಶ್ರುಂ ಜಟಾಯುಕ್ತಂ ಚೋತ್ತರೇ ವಿದ್ರುಮ ಪ್ರಭಂ ॥೧೦॥
ಪ್ರಸನ್ನಂ ವಾಮದೇವಾಖ್ಯಂ ವರದಂ ವಿಶ್ವರೂಪಿಣಂ ।
ಪಶ್ಚಿಮಂ ವದನಂ ತಸ್ಯ ಗೋಕ್ಷೀರ ಧವಲಂ ಶುಭಂ ॥೧೧॥
ಮುಕ್ತಾಫಲ ಮಯೈರ್ಹಾರೈ ರ್ಭೂಷಿತಂ ತಿಲಕೋಜ್ವಲಂ ।
ಸದ್ಯೋಜಾತ ಮುಖಂ ದಿವ್ಯಂ ಭಾಸ್ಕರಸ್ಯ ಸ್ಮರಾರಿಣಃ ॥೧೨॥
ಆದಿತ್ಯ ಮಗ್ರತೋಪಶ್ಯ ನ್ಪೂರ್ವವಚ್ಚತುರಾನನಂ ।
ಭಾಸ್ಕರಂ ಪುರತೋ ದೇವಂ ಚತುರ್ವಕ್ತ್ರಂ ಚ ಪೂರ್ವವತ್ ॥೧೩॥

---

೯–೧೨. ಆ ಪರಮೇಶನ ತತ್ಪುರುಷ ರೂಪವಾದ ಪೂರ್ವದಿಕ್ಕಿನ ಮುಖವು ಹಳದಿ ಬಣ್ಣವಾಗಿಯೂ, ಪ್ರಸನ್ನವಾಗಿಯೂ ಇದ್ದಿತು. ದಕ್ಷಿಣ ದಿಕ್ಕಿನಲ್ಲಿದ್ದ ಅಘೋರ ಮೂರ್ತಿಯ ಮುಖವು ಕಪ್ಪುಕಾಡಿಗೆಯ ಕಾಂತಿಗೆ ಸಮಾನವಾದ ಕಾಂತಿಯುಳ್ಳದ್ದಾಗಿಯೂ ಭಯಂಕರವಾದ ಕೋರೆದಾಡೆ ಗಳಿಂದ ಕೂಡಿ ಜ್ವಾಲೆಗಳ ಮಾಲೆಯಿಂದ ಕೂಡಿಯೂ, ಇದ್ದಿತು. ಉತ್ತರ ದಲ್ಲಿ ವಾಮದೇವ ಎಂಬ ಮುಖವು ರಕ್ತವರ್ಣದ ಗಡ್ಡ ಮೀಸೆಗಳಿಂದಲೂ ಜಟೆಯಿಂದಲೂ ಕೂಡಿರುವ ಹವಳದ ಕಾಂತಿಯುತವಾದ ವಿಶ್ವರೂಪಿಯೂ, ವರವನ್ನು ಕೊಡುವುದೂ, ಪ್ರಸನ್ನವೂ ಆಗಿದ್ದಿತು. ಹಸುವಿನ ಹಾಲಿನಂತೆ ಶುಭ್ರವೂ, ಮಂಗಳಕರವೂ, ಮುತ್ತಿನ ಹಾರಗಳಿಂದ ಅಲಂಕೃತವೂ, ತಿಲ ಕದಿಂದ ಪ್ರಕಾಶವುಳ್ಳದ್ದೂ, ಆದ ಆದಿತ್ಯರೂಪನಾದ ಸ್ಮರವೈರಿಯಾದ ಶಿವನ ಪಶ್ಚಿಮದಿಕ್ಕಿನ ಸದ್ಯೋಜಾತವೆಂಬ ಮುಖವು ಮನೋಹರ ವಾಗಿದ್ದಿತು.

೧೩–೧೪. ಈಶ್ವರನಿಗೆ ಸದೃಶವಾಗಿ ನಾಲ್ಕು ಮುಖವುಳ್ಳ ಆದಿತ್ಯ ನನ್ನು ಅಗ್ರಭಾಗದಲ್ಲಿಯೂ, ನಾಲ್ಕು ಮುಖವುಳ್ಳ ಭಾಸ್ಕರನನ್ನು ಮುಂದು

ಭಾನುಂ ದಕ್ಷಿಣತೋ ದೇವಂ ಚತುರ್ವಕ್ತ್ರಂ ಚ ಪೂರ್ವವತ್ ।
ರವಿಂ ಉತ್ತರತೋಽಪಶ್ಯ ನ್ಪೂರ್ವವಚ್ಚತುರಾನನಂ ॥೧೪॥

ವಿಸ್ತಾರಾಂ ಮಂಡಲೇ ಪೂರ್ವೇ ಉತ್ತರಾಂ ದಕ್ಷಿಣೇ ಸ್ಥಿತಾಂ ।
ಬೋಧಿನೀಂ ಪಶ್ಚಿಮೇ ಭಾಗೇ ಮಂಡಲಸ್ಯ ಪ್ರಜಾಪತೇಃ ॥೧೫॥

ಅಧ್ಯಾಯಿನೀಂ ಚ ಕೌಬೇರ್ಯಾ ಮೇಕವಕ್ತ್ರಾಂ ಚತುರ್ಭುಜಾಂ ।
ಸರ್ವಾಭರಣ ಸಂಪನ್ನಾಃ ಶಕ್ತಯಃ ಸರ್ವ ಸಂಮತಾಃ ॥೧೬॥

ಬ್ರಹ್ಮಾಣಂ ದಕ್ಷಿಣೇ ಭಾಗೇ ವಿಷ್ಣುಂ ವಾಮೇ ಜನಾರ್ದನಂ ।
ಋಗ್ಯಜು ಸ್ಸಾಮ ಮಾರ್ಗೇಣ ಮೂರ್ತಿತ್ರಯ ಮಯಂ ಶಿವಂ ॥

ಈಶಾನಂ ವರದಂ ದೇವ ಮೀಶಾನಂ ಪರಮೇಶ್ವರಂ ।
ಬ್ರಹ್ಮಾಸನಸ್ಥಂ ವರದಂ ಬ್ರಹ್ಮಜ್ಞಾನಾಸನೋಪರಿ ॥೧೮॥

---

ಗಡೆಯೂ, ಈಶ್ವರನಂತೆಯೇ ನಾಲ್ಕು ಮುಖವುಳ್ಳ ಭಾನುವನ್ನು ದಕ್ಷಿಣ ಭಾಗದಲ್ಲಿಯೂ, ಉತ್ತರ ಭಾಗದಲ್ಲಿ ಈಶ್ವರನಂತೆ ನಾಲ್ಕು ಮುಖಗಳಿಂದ ಕೂಡಿರುವ ರವಿಯನ್ನು ನೋಡಿದರು. ಇವರು ಶಿವನ ಪರಿವಾರ ದೇವತೆಗಳು.

೧೫-೧೬. ಮಂಡಲದಲ್ಲಿ ಪೂರ್ವದಿಕ್ಕಿನಲ್ಲಿ ವಿಸ್ತಾರಾದೇವಿಯನ್ನೂ, ದಕ್ಷಿಣದಲ್ಲಿ ಉತ್ತರೆಯನ್ನೂ, ಪಶ್ಚಿಮ ದಿಕ್ಕಿನಲ್ಲಿ ಬೋಧಿನಿಯನ್ನೂ, ಒಂದು ಮುಖವೂ, ನಾಲ್ಕು ಕೈಗಳೂ ಉಳ್ಳ ಅಧ್ಯಾಯಿನಿಯನ್ನು ಉತ್ತರ ಭಾಗದಲ್ಲಿಯೂ, ನೋಡಿದರು. ಶಕ್ತಿದೇವತೆಗಳೆಲ್ಲರೂ ಸಕಲಾಭರಣಗಳಿಂದಲೂ ಅಲಂಕೃತರಾಗಿ ಸರ್ವಸಂಮತರಾಗಿದ್ದರು.

೧೭-೧೮. ಬಲ ಭಾಗದಲ್ಲಿ ಬ್ರಹ್ಮನನ್ನೂ, ಎಡ ಭಾಗದಲ್ಲಿ ದುಷ್ಟ ಜನ ಶಿಕ್ಷಕನಾದ ವಿಷ್ಣುವನ್ನೂ, ಋಗ್ಯಜುಸ್ಸಾಮವೇದ ತ್ರಯದಿಂದ ಬ್ರಹ್ಮ, ರುದ್ರ, ವಿಷ್ಣುರೂಪನಾದ, ವರವನ್ನೂ ಕೊಡುವ, ಈಶಾನ ಎಂದು ಪ್ರಸಿದ್ಧನಾದ, ಪ್ರಸನ್ನನಾದ, ಧರ್ಮ ಮತ್ತು ಜ್ಞಾನಗಳೆಂಬ ಆಸನದ ಮೇಲೆ ಬ್ರಹ್ಮಾಸನದಲ್ಲಿರುವ ಶಿವನನ್ನೂ, ನೋಡಿದರು.

ವೈರಾಗ್ಯೈಶ್ವರ್ಯ ಸಂಯುಕ್ತೇ ಪ್ರಭೂತೇ ವಿಮಲೇ ತಥಾ ।
ಸಾರಂ ಸರ್ವೇಶ್ವರಂ ದೇವ ಮಾರಾಧ್ಯಂ ಪರಮಂ ಸುಖಂ ॥೧೯॥
ಸಿತ ಪಂಕಜಮಧ್ಯಸ್ಥಂ ದೀಪ್ತಾದ್ಯೈರಭಿ ಸಂವೃತಂ ।
ದೀಪ್ತಾಂ ದೀಪ್ತಶಿಖಾಕಾರಾಂ ಸೂಕ್ಷ್ಮಾಂ ವಿದ್ಯುತ್ಪ್ರಭಾಂ ಶುಭಾಂ ॥
ಜಯಾ ಮಗ್ನಿ ಶಿಖಾಕಾರಾಂ ಪ್ರಭಾಂ ಕನಕ ಸಪ್ರಭಾಂ ।
ವಿಭೂತಿಂ ವಿದ್ರುಮಪ್ರಖ್ಯಾಂ ವಿಮಲಾಂ ಪದ್ಮಸನ್ನಿಭಾಂ ॥೨೦॥
ಅಮೋಘಾಂ ಕರ್ಣಿಕಾಕಾರಾಂ ವಿದ್ಯುತಂ ವಿಶ್ವವರ್ಣಿನೀಂ ।
ಚತುರ್ವಕ್ತ್ರಾಂ ಚತುರ್ವರ್ಣಾಂ ದೇವೀಂ ವೈ ಸರ್ವತೋಮುಖೀಂ ॥
ಸೋಮ ಮಂಗಾರಕಂ ದೇವಂ ಬುಧಂ ಬುದ್ಧಿಮತಾಂ ವರಂ ।
ಬೃಹಸ್ಪತಿಂ ಬೃಹದ್ಬುದ್ಧಿಂ ಭಾರ್ಗವಂ ತೇಜಸಾಂ ನಿಧಿಂ ॥೨೩॥

---

೧೯. ಸ್ವಚ್ಛವೂ ಶ್ರೇಷ್ಠವೂ ಆದ ವೈರಾಗ್ಯ ಮತ್ತು ಐಶ್ವರ್ಯಗಳಿಂದ ಯುಕ್ತನಾದ, ಸಾರಭೂತನೂ, ಸುಖಸ್ವರೂಪನೂ, ಪೂಜಿಸಲ್ಪಡುವವನೂ, ಶ್ರೇಷ್ಠನೂ, ಸಕಲೇಶ್ವರನೂ, ಸ್ವಚ್ಛ ಕಮಲದ ಮಧ್ಯದಲ್ಲಿರುವವನೂ, ದೀಪ್ತಿಯೇ ಮೊದಲಾದ ಒಂಬತ್ತು ಶಕ್ತಿದೇವತೆಗಳಿಂದ ಕೂಡಿದವನೂ ಆಗಿ, ಇರುವ ದೇವನನ್ನು ನೋಡಿದರು. ಆ ಶಕ್ತಿ ದೇವತೆಗಳು ಯಾರೆಂದರೆ,

೨೦–೨೨. ಉಜ್ವಲವಾದ ಜ್ವಾಲೆಯಂತೆ ಆಕಾರವುಳ್ಳ ದೀಪ್ತಾ ಎಂಬುವಳನ್ನೂ, ಸೂಕ್ಷ್ಮಳೂ, ಮಂಗಳಕರಳೂ ಆದ ವಿದ್ಯುತ್ಪ್ರಭೆಯನ್ನೂ, ಅಗ್ನಿಜ್ವಾಲೆಯಂತೆ ಆಕಾರವುಳ್ಳ ಜಯಾಯೆಂಬುವಳನ್ನೂ, ಸುವರ್ಣಕ್ಕೆ ಸಮಾನವಾದ ಕಾಂತಿಯುಳ್ಳ ಪ್ರಭೆಯನ್ನೂ, ಹವಳದಂತೆ ಪ್ರಸಿದ್ಧಳಾದ ವಿಭೂತಿಯನ್ನೂ, ಕಮಲಕ್ಕೆ ಸದೃಶಳಾದ ವಿಮಲೆಯೆಂಬುವಳನ್ನೂ ಕಣಿಗಲೆ ಹುವ್ವಿನಂತೆ ಆಕಾರವುಳ್ಳ ಅಮೋಘಾ ಎಂಬುವಳನ್ನೂ, ಪ್ರಪಂಚವನ್ನೇ ಬೆಳಗುವ ವಿದ್ಯುತ್ ಎಂಬುವಳನ್ನೂ ನಾಲ್ಕು ಮುಖವೂ, ನಾಲ್ಕು ಬಣ್ಣಗಳಿಂದ ಕೂಡಿರುವ ಸರ್ವತೋ ಮುಖಿಯನ್ನೂ ಈ ಶಕ್ತಿದೇವತೆಗಳನ್ನು ನೋಡಿದರು.

೨೩. ಚಂದ್ರನನ್ನೂ ಪೂಜ್ಯನಾದ ಅಂಗಾರಕನನ್ನೂ, ಬುದ್ಧಿಶಾಲಿ

ಮಂದಂ ಮಂದ ಗತಿಂ ಚೈವ ಸಮಂತಾ ತ್ತಸ್ಯ ತೇ ಸದಾ ।
ಸೂರ್ಯಃ ಶಿವೋ ಜಗನ್ನಾಥಃ ಸೋಮಃ ಸಾಕ್ಷಾದುಮಾ ಸ್ವಯಂ ॥

ಪಂಚ ಭೂತಾನಿ ಶೇಷಾಣಿ ತನ್ಮಯಂ ಚ ಚರಾಚರಂ ।
ದೃಷ್ಟ್ವೈವ ಮುನಯ ಸ್ಸರ್ವೇ ದೇವದೇವ ಮುಮಾಪತಿಂ ॥೨೫॥

ಕೃತಾಂಜಲಿಪುಟಾ ಸ್ಸರ್ವೇ ಮುನಯೋ ದೇವತಾ ಸ್ತಥಾ ।
ಅಸ್ತು ವನ್ವಾಗ್ಭಿ ರಿಷ್ಟಾಭಿಃ ವರದಂ ನೀಲ ಲೋಹಿತಂ ॥೨೬॥

ಋಷಯ ಊಚುಃ

ನಮಃ ಶಿವಾಯ ರುದ್ರಾಯ ಕದ್ರುದ್ರಾಯ ಪ್ರಚೇತಸೇ।
ಮೀಢುಷ್ಟಮಾಯ ಶರ್ವಾಯ ಶಿಪಿವಿಷ್ಟಾಯ ರಂಹಸೇ ॥೨೭॥

---

ಗಳಲ್ಲಿ ಶ್ರೇಷ್ಠನಾದ ಬುಧನನ್ನೂ, ಉತ್ತಮ ಬುದ್ಧಿಯುಳ್ಳ ಬೃಹಸ್ಪತಿಯನ್ನೂ, ತೇಜೋವಂತನಾದ ಶುಕ್ರನನ್ನೂ, ನಿಧಾನವಾದ ಗಮನವುಳ್ಳ ಶನಿಯನ್ನೂ, ಆ ಪರಮಾತ್ಮನ ಸುತ್ತಲೂ ಆ ಋಷಿಗಳು ಮತ್ತು ದೇವತೆಗಳು ನೋಡಿದರು.

೨೪. ಜಗದೊಡೆಯನಾದ ಶಿವನೇ ಸೂರ್ಯನು, ಸೋಮನು. ಪ್ರತ್ಯಕ್ಷವಾದ ಉಮಾಸಹಿತನಾದ ಪರಮೇಶನೇ ಉಳಿದ ಪಂಚಭೂತ ಸ್ವರೂಪನು. ಸ್ಥಾವರ ಜಂಗಮಾತ್ಮಕವಾದ ಪಂಚಭೂತಮಯವಾದ ಈ ಪ್ರಪಂಚವು ಶಿವಸ್ವರೂಪವಾದುದು.

೨೫–೨೬. ದೇವತೆಗಳಿಗೆಲ್ಲರಿಗೂ ಒಡೆಯನಾದ ಉಮಾಪತಿಯನ್ನು ಸಕಲ ದೇವತೆಗಳೂ, ಋಷಿಗಳೂ ನೋಡಿದವರಾಗಿ ಅಂಜಲಿ ಬದ್ಧರಾಗಿ ತಮಗೆ ಇಷ್ಟವಾದ ಮಾತುಗಳಿಂದ (ಸ್ತೋತ್ರಗಳಿಂದ) ಪ್ರಸನ್ನನಾಗಿ ವರವನ್ನು ಕೊಡುವ ಈಶನನ್ನು ಸ್ತುತಿಸಿದರು.

೨೭. ಋಷಿಗಳು ಹೇಳಿದರು :—ಮಂಗಳಕರನೇ, ರುದ್ರನೇ, ವರುಣರೂಪಿಯೇ, ಮೀಢುಷ್ಟಮ ( ಸುಖವನ್ನು ವರ್ಷಿಸುವವನೇ, ) ಶರ್ವನೇ ಶಿಪಿವಿಷ್ಟ( ಪಶುಗಳಲ್ಲಿ ಯಜ್ಞಸ್ವರೂಪದಿಂದ ಪ್ರವೇಶಿಸುವವ )ನೇ, ವೇಗವುಳ್ಳವನೇ, ನಿನಗೆ ನಮಸ್ಕಾರವು.

ಪ್ರಭೂತೇ ವಿಮಲೇ ಸಾರೇ ಹ್ಯಾಧಾರೇ ಪರಮೇ ಸುಖೇ ।
ನವ ಶಕ್ತ್ಯಾವೃತಂ ದೇವಂ ಪದ್ಮಸ್ಥಂ ಭಾಸ್ಕರಂ ಪ್ರಭುಂ ॥೨೮॥
ಆದಿತ್ಯಂ ಭಾಸ್ಕರಂ ಭಾನುಂ ರವಿಂ ದೇವಂ ದಿವಾಕರಂ ।
ಉಮಾಂ ಪ್ರಭಾಂ ತಥಾ ಪ್ರಜ್ಞಾಂ ಸಂಧ್ಯಾಂ ಸಾವಿತ್ರಿಕಾಮಪಿ ॥
ವಿಸ್ತಾರಾ ಮುತ್ತರಾಂ ದೇವೀಂ ಬೋಧನೀಂ ಪ್ರಣಮಾಮ್ಯಹಂ ।
ಆಪ್ಯಾಯಿನೀಂ ಚ ವರದಾಂ ಬ್ರಹ್ಮಾಣಂ ಕೇಶವಂ ಹರಂ ॥೩೦॥
ಸೋಮಾದಿ ವೃಂದಂ ಚ ಯಥಾ ಕ್ರಮೇಣ ।
ಸಂಪೂಜ್ಯ ಮಂತ್ರೈಃ ವಿಹಿತ ಕ್ರಮೇಣ ॥
ಸ್ಮರಾಮಿ ದೇವಂ ರವಿಮಂಡಲಸ್ಥಂ ।
ಸದಾಶಿವಂ ಶಂಕರ ಮಾದಿದೇವಂ ॥೩೧॥

---

೨೮–೨೯. ಸ್ವಚ್ಛವೂ, ಸಾರಭೂತವೂ ಶ್ರೇಷ್ಠವೂ ಮತ್ತು ಸುಖಕರವೂ ಆದ ಆಸನದಲ್ಲಿ ನವಶಕ್ತಿಗಳಿಂದ ಆವರಿಸಲ್ಪಟ್ಟು ಕಮಲದಲ್ಲಿರುವ ಸೂರ್ಯರೂಪನಾದ ದೇವನನ್ನೂ, ಆದಿತ್ಯನನ್ನೂ, ಭಾಸ್ಕರನನ್ನೂ, ಭಾನುವನ್ನೂ, ರವಿಯನ್ನೂ, ತೇಜೋವಂತನಾದ ದಿವಾಕರನನ್ನೂ ಉಮೆಯನ್ನೂ, ಪ್ರಭೆಯನ್ನೂ, ಪ್ರಜ್ಞೆಯನ್ನೂ. ಸಂಧ್ಯೆಯನ್ನೂ, ಸಾವಿತ್ರಿಯನ್ನೂ ವಿಸ್ತಾರಾದೇವಿಯನ್ನೂ, ಉತ್ತರೆಯನ್ನೂ ಬೋಧಿನೀದೇವಿಯನ್ನೂ ನಾವು ನಮಸ್ಕರಿಸುತ್ತೇವೆ.

೩೦. ಪ್ರಸನ್ನಳಾದ ಆಪ್ಯಾಯಿನೀದೇವಿಯನ್ನೂ, ಬ್ರಹ್ಮಾ ವಿಷ್ಣು, ಮಹೇಶ್ವರರನ್ನೂ, ನಾವು ನಮಸ್ಕರಿಸುತ್ತೇವೆ. ಚಂದ್ರನೇ ಮೊದಲಾದ ದೇವತೆಗಳನ್ನೂ ಶಾಸ್ತ್ರಾನುಸಾರವಾಗಿ ಪೂಜಿಸುತ್ತೇವೆ.

೩೧–೩೨. ಆದಿದೇವನೂ, ಮಂಗಳವನ್ನುಂಟುಮಾಡುವವನೂ, ಸೂರ್ಯಮಂಡಲ ಮಧ್ಯದಲ್ಲಿರುವವನೂ, ಆದ ಸದಾ ಶಿವನನ್ನು ಧ್ಯಾನಿಸುತ್ತೇವೆ. ಹಾಗೆಯೇ ಇಂದ್ರಾದಿ ದಿಕ್ಪಾಲಕರನ್ನೂ ದೇವತೆಗಳನ್ನೂ, ಬ್ರಹ್ಮಾವಿಷ್ಣು, ಮಹೇಶ್ವರರನ್ನೂ, ಮುಂಭಾಗದಲ್ಲಿ ಕೆಳಗಡೆ, ಮೇಲ್ಭಾಗ

ಇಂದ್ರಾದಿ ದೇವಾಂಶ್ಚ ತಥೇ ಶ್ವರಾಂಶ್ಚ ।
ನಾರಾಯಣಂ ಪದ್ಮಜಂ ಆದಿದೇವಂ ॥
ಪ್ರಾಗಾದ್ಯಧೋರ್ಧ್ವಂ ಚ ಯಥಾ ಕ್ರಮೇಣ ।
ವಜ್ರಾದಿ ಪದ್ಮಂ ಚ ತಥಾ ಸ್ಮರಾಮಿ ॥೩೨॥

ಸಿಂಧೂರ ವರ್ಣಾಯ ಸಮಂಡಲಾಯ ।
ಸುವರ್ಣ ವಜ್ರಾ ಭರಣಾಯ ತುಭ್ಯಂ ॥
ಪದ್ಮಾಭ ನೇತ್ರಾಯ ಸ ಪಂಕಜಾಯ ।
ಬ್ರಹ್ಮೇಂದ್ರ ನಾರಾಯಣ ಕಾರಣಾಯ ॥೩೩॥

ರಥಂ ಚ ಸಪ್ತಾಶ್ವ ಮನೂರು ವೀರಂ ।
ಗಣಂ ತಥಾ ಸಪ್ತ ವಿಧಂ ಕ್ರಮೇಣ ॥
ಋತು ಪ್ರವಾಹೇಣ ಚ ವಾಲ ಖಿಲ್ಯಾನ್ ।
ಸ್ಮರಾಮಿ ಮಂದೇಹ ಗಣ ಕ್ಷಯಂ ಚ ॥೨೪॥

---

ದಲ್ಲಿರುವವರನ್ನೂ, ವಜ್ರವೇ ಮೊದಲಾದ ಪದ್ಮವನ್ನೂ ಸಹ ಶಾಸ್ತ್ರವಿಹಿತ ಮಾರ್ಗದಿಂದ ಪೂರ್ವ ಮುಂತಾದ ದಿಕ್ಕುಗಳಲ್ಲಿ ಧ್ಯಾನಿಸುತ್ತೇವೆ.

೩೩. ಸಿಂಧೂರದಂತೆ ಬಣ್ಣವುಳ್ಳ ಮಂಡಲದೊಡನೆ ಕೂಡಿಕೊಂಡಿರುವ, ವಜ್ರ ರತ್ನಗಳಿಂದ ಖಚಿತವಾದ ಆಭರಣಗಳಿಂದ ಅಲಂಕೃತನಾದ, ಕಮಲದ ಕಾಂತಿಯಿಂದ ಕೂಡಿದ ಕಣ್ಣುಳ್ಳ, ಕಮಲವನ್ನು ಹಿಡಿದಿರುವ, ಬ್ರಹ್ಮಾ, ಇಂದ್ರ, ನಾರಾಯಣರಿಗೆ ಕಾರಣನಾಗಿರುವ ಪರಮಾತ್ಮನಿಗೆ ನಮಸ್ಕಾರಮಾಡುತ್ತೇವೆ.

೩೪. ಏಳು ಕುದುರೆಗಳಿಂದ ಕೂಡಿದ ರಥವನ್ನೂ, ವೀರನಾದ ಅರುಣನನ್ನೂ, ಕ್ರಮವಾಗಿ ಏಳು ವಿಧವಾದ ಆದಿತ್ಯ ಮೊದಲಾದ ಗಣಗಳನ್ನೂ, ವಸಂತನೇ ಮೊದಲಾದ ಋತುಕ್ರಮದಲ್ಲಿ ವಾಲಖಿಲ್ಯರನ್ನೂ, ಸ್ಮರಿಸುತ್ತೇವೆ. ಹಾಗೆಯೇ ಮಂದೇಹರೆಂಬ ಅಸುರರ ನಾಶವನ್ನೂ ಇಚ್ಛಿಸುತ್ತೇವೆ.

ಹುತ್ವಾ ತಿಲಾದ್ಯೈ ರ್ವಿವಿಧೈ ಸ್ತಥಾಽಗ್ನೌ ।
ಪುನಃ ಸಮಾಪ್ಯೈವ ತಥೈವ ಸರ್ವಂ ॥
ಉದ್ವಾಸ್ಯ ಹೃತ್ಪಂಕಜ ಮಧ್ಯಸಂಸ್ಥಂ ।
ಸ್ಮರಾಮಿ ಬಿಂಬಂ ತವ ದೇವದೇವ ॥೩೫॥

ಸ್ಮರಾಮಿ ಬಿಂಬಾನಿ ಯಥಾ ಕ್ರಮೇಣ ।
ರಕ್ತಾನಿ ಪದ್ಮಾಮಲ ಲೋಚನಾನಿ ॥
ಪದ್ಮಂ ಚ ಸವ್ಯೇ ವರದಂ ಚ ವಾಮೇ ।
ಕರೇ ತಥಾ ಭೂಷಿತ ಭೂಷಣಾನಿ ॥೩೬॥

ದಂಷ್ಟ್ರಾಕರಾಲಂ ತವ ದಿವ್ಯ ವಕ್ತ್ರಂ ।
ವಿದ್ಯುತ್ಪ್ರಭಂ ದೈತ್ಯ ಭಯಂ ಕರಂ ಚ ॥
ಸ್ಮರಾಮಿ ರಕ್ಷಾಭರಿತಂ ದ್ವಿಜಾನಾಂ ।
ಸಂದೇಹ ರಕ್ಷೋಗಣ ಭ ರ್ತ್ಸನಂ ಚ ॥೩೭॥

---

೩೫. ಎಳ್ಳು ಮೊದಲಾದ ನಾನಾ ವಿಧವಾದ ಹೋಮದ್ರವ್ಯಗಳನ್ನು ಅಗ್ನಿಯಲ್ಲಿ ಹೋಮಮಾಡಿ, ಸಕಲ ಪೂಜೆಯನ್ನೂ ಮುಗಿಸಿ, ಮಂಡಲದಿಂದ ದೇವನನ್ನು ವಿಸರ್ಜಿಸಿ, ಓ ದೇವದೇವನೇ, ಹೃದಯ ಕಮಲ ಮಧ್ಯದಲ್ಲಿರುವ ನಿನ್ನ ಬಿಂಬವನ್ನು ಧ್ಯಾನಿಸುತ್ತೇವೆ.

೩೬. ರಕ್ತವರ್ಣವಾಗಿಯೂ, ಕಮಲದಂತೆಯೂ, ಸ್ವಚ್ಛವಾಗಿಯೂ ಇರುವ ಕಣ್ಣುಳ್ಳ, ಎಡದ ಕೈಯ್ಯಲ್ಲಿ ಅಭಯಪ್ರದವಾದ ಕಮಲವನ್ನುಳ್ಳ, ಸಕಲಾಭರಣಗಳಿಂದ ಭೂಷಿತವಾದ ನಿನ್ನ ಬಿಂಬಗಳನ್ನು ಓ ದೇವನೇ, ಧ್ಯಾನಿಸುತ್ತೇವೆ.

೩೭. ಕ್ರೂರವಾದ ಕೋರೆ ದಾಡೆಗಳುಳ್ಳ, ಮಿಂಚಿನಂತೆ ಕಾಂತಿಯುಳ್ಳ, ದೈತ್ಯರುಗಳಿಗೆ ಭಯವನ್ನುಂಟು ಮಾಡುವ, ದ್ವಿಜರುಗಳ ರಕ್ಷಣೆಯಿಂದ ತುಂಬಿರುವ, ಮಂದೇಹರೆಂಬ ರಾಕ್ಷಸರ ಸಮೂಹಕ್ಕೆ ತಿರಸ್ಕಾರವನ್ನು ತೋರುತ್ತಿರುವ, ನಿನ್ನ ಶ್ರೇಷ್ಠ ಮುಖವನ್ನು ಓ ಪರಮೇಶನೇ, ನಾವು ಸ್ಮರಿಸುತ್ತೇವೆ.

ಸೋಮಂ ಸಿತಂ ಭೂಮಿಜ ಮಗ್ನಿವರ್ಣಂ ।
ಚಾಮೀಕರಾಭಂ ಬುಧ ಮಿಂದು ಸೂನುಂ ॥
ಬೃಹಸ್ಪತಿಂ ಕಾಂಚನ ಸನ್ನಿಕಾಶಂ ।
ಶುಕ್ರಂ ಸಿತಂ ಕೃಷ್ಣತರಂ ಚ ಮಂದಂ ॥೩೮॥

ಸ್ಮರಾಮಿ ಸವ್ಯ ಮಭಯಂ ವಾಮಮೂರುಗತಂ ಮರಂ ।
ಸರ್ವೇಷಾಂ ಮಂದ ಪರ್ಯಂತಂ ಮಹಾದೇವಂ ಚ ಭಾಸ್ಕರಂ ॥೩೯॥

ಪೂರ್ಣೇಂದು ವರ್ಣೇನ ಚ ಪುಷ್ಪಗಂಧ ।
ಪ್ರಸ್ಥೇನ ತೋಯೇನ ಶುಭೇನ ಪೂರ್ಣಂ ॥
ಪಾತ್ರಂ ದೃಢಂ ತಾಮ್ರಮಯಂ ಪ್ರಕಲ್ಪ್ಯ ।
ದಾಸ್ಯೇ ತವಾರ್ಘ್ಯಂ ಭಗವನ್ ಪ್ರಸೀದ ॥೪೦॥

ನಮಃ ಶಿವಾಯ ದೇವಾಯ ಈಶ್ವರಾಯ ಕಪರ್ದಿನೇ ।
ರುದ್ರಾಯ ವಿಷ್ಣವೇ ತುಭ್ಯಂ ಬ್ರಹ್ಮಣೇ ಸೂರ್ಯಮೂರ್ತಯೇ ॥

---

೩೮–೩೯. ಧವಲವರ್ಣನಾದ ಚಂದ್ರನನ್ನೂ, ಬೆಂಕಿಯಂತೆ ಕೆಂಪು ಬಣ್ಣವುಳ್ಳ ಅಂಗಾರಕನನ್ನೂ, ಸುವರ್ಣದಂತೆ ಕಾಂತಿಯುಳ್ಳ ಚಂದ್ರನ ಮಗನಾದ ಬುಧನನ್ನೂ, ಚಿನ್ನಕ್ಕೆ ಸಮನಾದ ಕಾಂತಿಯುಳ್ಳ ಗುರುವನ್ನೂ, ಬೆಳ್ಳಗಿರುವ ಶುಕ್ರನನ್ನೂ, ಕೃಷ್ಣವರ್ಣವುಳ್ಳ ಶನಿಯನ್ನೂ, ಧ್ಯಾನಿಸುತ್ತೇವೆ. ಶನಿಪರ್ಯಂತ ಸಪ್ತಗ್ರಹರೂಪನಾದ, ಎಲ್ಲರಿಗೂ ಕಾರಣಭೂತನಾದ, ಭಾಸ್ಕರ ರೂಪಿಯಾದ ಮಹಾದೇವನನ್ನು ಧ್ಯಾನಿಸುತ್ತೇವೆ.

೪೦. ಷೋಡಶಕಲಾ ಪರಿಪೂರ್ಣನಾದ ಚಂದ್ರನ ಬಣ್ಣದಂತೆ ಸ್ವಚ್ಛವಾದ ಬಣ್ಣವುಳ್ಳ, ಹುವ್ವು ಗಂಧಾಕ್ಷತೆಗಳಿಂದ ಕೂಡಿದ, ಪವಿತ್ರವಾದ ನೀರಿನಿಂದ ತುಂಬಿದ ತಾಮ್ರದಪಾತ್ರೆಯಲ್ಲಿ ಓ ದೇವನೇ, ನಿನಗೆ ಅರ್ಘ್ಯವನ್ನು ಕೊಡುವೆವು. ಸ್ವೀಕರಿಸಿ ಅನುಗ್ರಹಿಸುವವನಾಗು.

೪೧. ಮಂಗಳಕರನೇ, ದೇವನೇ, ಈಶ್ವರನೇ, ಕಪರ್ದಿಯೇ, ನಿನಗೆ ನಮಸ್ಕಾರವು. ಬಹ್ಮ, ವಿಷ್ಣು ಈಶ್ವರ ಸ್ವರೂಪನಾದ ಸೂರ್ಯಮೂರ್ತಿಯೇ, ನಿನಗೆ ನಮಸ್ಕಾರವು.

॥ ಸೂತ ಉವಾಚ ॥

ಯಃ ಶಿವಂ ಮಂಡಲೇ ದೇವಂ ಸಂಪೂಜ್ಯೈವ ಸಮಾಹಿತಃ ।
ಪ್ರಾತರ್ಮಧ್ಯಾಹ್ನ ಸಾಯಾಹ್ನೇ ಪಠೇತ್ ಸ್ತವ ಮನುತ್ತಮಂ ॥
ಇತ್ಥಂ ಶಿವೇನ ಸಾಯುಜ್ಯಂ ಲಭತೇ ನಾತ್ರ ಸಂಶಯಃ ।

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಏಕೋನ ವಿಂಶತಿತಮೋಽಧ್ಯಾಯಃ

---

೪೨. ಯಾವನು ಮಂಡಲದಲ್ಲಿ ಈಶ್ವರನನ್ನು ಚೆನ್ನಾಗಿ ಭಕ್ತಿಯಿಂದ ಪೂಜಿಸಿ ಜಿತೇಂದ್ರಿಯನಾಗಿ ತ್ರಿಕಾಲದಲ್ಲೂ ಉತ್ತಮವಾದ ಈಶ್ವರನ ಸ್ತೋತ್ರವನ್ನು ಪಠಿಸುವನೋ ಅವನು ಶಿವಸಾಯುಜ್ಯವನ್ನು ಪಡೆಯುತ್ತಾನೆಂಬುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಾರ್ಧದಲ್ಲಿ ಹತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ವಿಂಶತಿತಮೋಽಧ್ಯಾಯಃ

**॥ ಸೂತ ಉವಾಚ ॥**

**ಅಥ ರುದ್ರೋ ಮಹಾದೇವೋ ಮಂಡಲಸ್ಥಃ ಪಿತಾಮಹಃ ।**
**ಪೂಜ್ಯೋ ವೈ ಬ್ರಾಹ್ಮಣಾನಾಂ ಚ ಕ್ಷತ್ರಿಯಾಣಾಂ ವಿಶೇಷತಃ ॥**

**ವೈಶ್ಯಾನಾಂ ಚೈವ ಶೂದ್ರಾಣಾಂ ಶುಶ್ರೂಷಾ ಪೂಜಕಸ್ಯಚ ।**
**ಸ್ತ್ರೀಣಾಂ ನೈವಾಧಿ ಕಾರೋಽಸ್ತಿ ಪೂಜಾದಿಷು ನ ಸಂಶಯಃ ॥ ೨ ॥**

**ಸ್ತ್ರೀಶೂದ್ರಾಣಾಂ ದ್ವಿಜೇಂದ್ರೈಶ್ಚ ಪೂಜಯಾ ತತ್ಫಲಂ ಭವೇತ್ ।**
**ನೃಪಾಣಾ ಮುಪಕಾರಾರ್ಥಂ ಬ್ರಾಹ್ಮಣಾದ್ಯೈ ರ್ವಿಶೇಷತಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯವು.

೧. ಸೂತನು ಹೇಳಿದನು.—ಪರಬ್ರಹ್ಮನಾದ ಮಂಗಳಕರನಾದ ಮಹಾದೇವನು ಬ್ರಾಹ್ಮಣ ಮತ್ತು ಕ್ಷತ್ರಿಯರಿಂದ, ವೈಶ್ಯರಿಂದ ವಿಶೇಷವಾಗಿ ಪೂಜಿಸಲ್ಪಡಬೇಕು.

೨. ಶೂದ್ರರು ದೇವನನ್ನು ಹಾಗೆ ನೇರವಾಗಿ ಪೂಜಿಸ ಕೂಡದು. ಆದರೆ ಅವರು ದೇವನ ಪೂಜೆಮಾಡುವವರ ಸೇವೆಯನ್ನು ಮಾಡಬೇಕು. ಹೆಂಗಸರಿಗೂ ಈ ಪೂಜೆಯಲ್ಲಿ ಅಧಿಕಾರ ವಿರುವುದಿಲ್ಲವು.

೩. ಬ್ರಾಹ್ಮಣೋತ್ತಮನು ಮಾಡುವ ಪೂಜೆಯಿಂದ ಸ್ತ್ರೀ ಮತ್ತು ಶೂದ್ರರಿಗೆ ಪೂಜೆಯಿಂದ ಲಭಿಸಬೇಕಾದ ಫಲವು ದೊರೆಯುತ್ತದೆ. ರಾಜರುಗಳ ಉಪಕಾರಕ್ಕಾಗಿ ಬ್ರಾಹ್ಮಣರೇ ಮೊದಲಾದವರಿಂದ ಮಾಡಲ್ಪಟ್ಟ ಪೂಜೆಗಳಿಂದ ರಾಜನಿಗೆ ತಾವು ಮಾಡಿದ ಪೂಜೆಗಿಂತಲೂ, ಅಧಿಕ ಫಲವು ಬರುತ್ತದೆ. ( ಸಿಕ್ಕುತ್ತದೆ. )

ಏವಂ ಸಂಪೂಜಯೇ ಯುರ್ವ್ಯಾಂ ಬ್ರಾಹ್ಮಣಾದ್ಯಾಃ ಸದಾ ಶಿವಂ ।
ಇತ್ಯುಕ್ತ್ವಾ ಭಗವಾನ್ರುದ್ರ ಸ್ತತ್ರೈವಾಂತರಧಾ ತ್ಸ್ವಯಂ ॥ ೪ ॥
ತೇ ದೇವಾ ಮುನಯ ಸ್ಸರ್ವೇ ಶಿವಮುದ್ದಿಶ್ಯ ಶಂಕರಂ ।
ಪ್ರಣೇಮುಶ್ಚ ಮಹಾತ್ಮಾನೋ ರುದ್ರಧ್ಯಾನೇನ ವಿಹ್ವಲಾಃ ॥ ೫ ॥
ಜಗ್ಮು ರ್ಯಥಾ ಗತಂ ದೇವಾಃ ಮುನಯಶ್ಚ ತಪೋಧನಾಃ ।
ತಸ್ಮಾದಭ್ಯರ್ಚಯೇ ನ್ನಿತ್ಯ ಮಾದಿತ್ಯಂ ಶಿವರೂಪಿಣಂ ॥ ೬ ॥
ಧರ್ಮ ಕಾಮಾರ್ಥ ಮುಕ್ತ್ಯರ್ಥಂ ಮನಸಾ ಕರ್ಮಣಾ ಗಿರಾ ।
॥ ಋಷಯ ಊಚುಃ ॥
ರೋಮ ಹರ್ಷಣ ಸರ್ವಜ್ಞ ಸರ್ವ ಶಾಸ್ತ್ರ ಭೃತಾಂ ವರ ॥ ೭ ॥

---

೪. ಈ ಪ್ರಕಾರವಾಗಿ ಬ್ರಾಹ್ಮಣರೇ ಮೊದಲಾದವರು ಸದಾಶಿವನನ್ನು ಪೂಜಿಸಬೇಕು. ಎಂದು ಹೇಳಿ ಭಗವಂತನಾದ ರುದ್ರನು ಅಲ್ಲೇ ಅಂತರ್ಧಾನನಾದನು.

೫. ಆ ದೇವತೆಗಳೂ ಮತ್ತು ಋಷಿಗಳೆಲ್ಲರೂ ಮಂಗಳ ಸ್ವರೂಪನಾದ ಶಂಕರನನ್ನು ಧ್ಯಾನಾನಂದದಿಂದ ಪರವಶರಾಗಿ ನಮಸ್ಕರಿಸಿದರು. ಅನಂತರದಲ್ಲಿ ಎಲ್ಲರೂ ರುದ್ರನನ್ನು ಧ್ಯಾನಿಸುತ್ತಾ ತಾವು ಬಂದಂತೆ ಹೊರಟುಹೋದರು.

೬. ಆದಕಾರಣ ಶಿವರೂಪಿಯಾದ ಸೂರ್ಯನನ್ನು ಪ್ರತಿದಿವಸವೂ ಸಕಲರೂ, ಮನಸ್ಸಿನಿಂದಲೂ, ಮಾತಿನಿಂದಲೂ, ಕಾರ್ಯದಿಂದಲೂ, ಏಕಪ್ರಕಾರವಾಗಿ ಧರ್ಮ, ಕಾಮ, ಐಶ್ವರ್ಯ ಮತ್ತು ಮೋಕ್ಷರೂಪವಾದ ಫಲಕ್ಕೋಸ್ಕರ ಅರ್ಚಿಸಬೇಕು.

೭. ಋಷಿಗಳು ಹೇಳಿದರು:–ಸಕಲವನ್ನೂ ತಿಳಿದಿರುವ ಸಕಲ ಶಾಸ್ತ್ರಗಳನ್ನು ತಿಳಿದಿರುವವರಲ್ಲಿ ಶ್ರೇಷ್ಠನಾದ ಮಹಾತ್ಮನಾದ ವ್ಯಾಸ ಶಿಷ್ಯನಾದ ರೋಮಹರ್ಷಣನೇ, ಈಗ ನಮಗಾಗಿ ಆಗ್ನೇಯ ಪುರಾಣದಲ್ಲಿ ಹೇಳಿರುವ

ವ್ಯಾಸ ಶಿಷ್ಯ ಮಹಾಭಾಗ ವಾರ್ಷ್ಣೇಯಂ ವದ ಸಾಂಪ್ರತಂ।
ಶಿವೇನ ದೇವ ದೇವೇನ ಭಕ್ತಾನಾಂ ಹಿತ ಕಾಮ್ಯಯಾ ॥ ೮ ॥

ವೇದಾ ತ್ಷಡಂಗಾದುದ್ಧೃತ್ಯ ಸಾಂಖ್ಯ ಯೋಗಾಚ್ಚ ಸರ್ವತಃ।
ತಪಶ್ಚ ವಿಪುಲಂ ತಪ್ತ್ವಾ ದೇವ ದಾನವ ದುಶ್ಚರಂ ॥ ೯ ॥

ಅರ್ಥ ದೇಶಾದಿ ಸಂಯುಕ್ತಂ ಗೂಢ ಮಜ್ಞಾನ ನಿಂದಿತಂ।
ವರ್ಣಾಶ್ರಮ ಕೃತೈರ್ಧರ್ಮೈಃ ವಿಪರೀತಂ ಕ್ವಚಿತ್ಸಮಂ ॥೧೦॥

ಶಿವೇನ ಕಥಿತಂ ಶಾಸ್ತ್ರಂ ಧರ್ಮ ಕಾಮಾರ್ಥಮುಕ್ತಯೇ।
ಶತಕೋಟಿ ಪ್ರಮಾಣೇನ ತತ್ರ ಪೂಜಾ ಕಥಂ ವಿಭೋಃ ॥೧೧॥
ಸ್ನಾನ ಯೋಗಾದಯೋ ವಾಽಪಿ ಶ್ರೋತುಂ ಕೌತೂಹಲಂ ಹಿ ನಃ।

॥ ಸೂತ ಉವಾಚ ॥

ಪುರಾ ಸನತ್ಕುಮಾರೇಣ ಮೇರು ಪೃಷ್ಠೇ ಸುಶೋಭನೇ ॥೧೨॥

---

೮-೧೦. ದೇವದೇವನಾದ ಈಶ್ವರನು ಭಕ್ತರಿಗೆ ಒಳ್ಳೆಯದನ್ನು ಮಾಡಬೇಕೆಂಬ ಇಚ್ಛೆಯಿಂದ ಬಹಳವಾದ ತಪಸ್ಸನ್ನು ಮಾಡಿ ಷಡಂಗದಿಂದ ಕೂಡಿದ ವೇದದಿಂದಲೂ, ಸಮಗ್ರವಾದ ಸಾಂಖ್ಯ ಶಾಸ್ತ್ರದಿಂದಲೂ, ಆರಿಸಿ ತೆಗೆದಿರುವ, ದೇವತೆಗಳೂ, ದಾನವರೂ ಕಷ್ಟದಿಂದ ಆಚರಿಸುವ, ದೇಶಕಾಲಗಳಿಂದ ಕೂಡಿ ಅರ್ಥಯುಕ್ತವಾದ, ರಹಸ್ಯವಾದ, ನಿಜವಾದ ಜ್ಞಾನವಿಲ್ಲದೇ ಅಜ್ಞಾನಿಗಳಿಂದ ನಿಂದಿಸಲ್ಪಟ್ಟಿರುವ, ವರ್ಣಾಶ್ರಮ ಧರ್ಮಗಳಿಂದ ಭಿನ್ನವಾದ ಮತ್ತು ಕೆಲವು ಅಂಶಗಳಲ್ಲಿ ಸಮಾನವಾಗಿರುವ,

೧೧. ಶಿವನಿಂದ ಹೇಳಲ್ಪಟ್ಟಿರುವ ಶಿವಪೂಜೆಯ ಕ್ರಮವನ್ನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಕ್ಕೋಸ್ಕರ ಅನೇಕ ಪ್ರಕಾರವಾಗಿರುವುದನ್ನು ನಮಗಾಗಿ ಹೇಳುವನಾಗು. ಸ್ನಾನವೇ ಮೊದಲಾದವು ಯಾವ ಪ್ರಕಾರವಾಗಿರುತ್ತವೆ? ಎಂಬುದನ್ನು ಕೇಳಲು ಕುತೂಹಲವುಳ್ಳವರಾಗಿರುತ್ತೇವೆ. ನಮಗಾಗಿ ಓ ಸೂತನೇ, ಹೇಳು.

೧೨-೧೩. ಸೂತನು ಹೇಳಿದನು :—ಹಿಂದೆ ಸನತ್ಕುಮಾರನು ಈ ವಿಷಯವನ್ನೇ ಮಂಗಳಕರವಾದ ಮೇರು ಪರ್ವತದ ಬುಡದಲ್ಲಿ ಈಶ್ವರನ

ಪೃಷ್ಟೋ ನಂದೀಶ್ವರೋ ದೇವಃ ಶೈಲಾದಿಃ ಶಿವ ಸಂಮತಃ ।
ಪೃಷ್ಟೋಽಯಂ ಪ್ರಣಿಪತ್ಯೈವಂ ಮುನಿಮುಖ್ಯೈಶ್ಚ ಸರ್ವತಃ ॥೧೩॥
ತಸ್ಮೈ ಸನತ್ಕುಮಾರಾಯ ನಂದಿನಾ ಕುಲ ನಂದಿನಾ ।
ಕಥಿತಂ ಯಚ್ಛಿವಜ್ಞಾನಂ ಶೃಣ್ವಂತು ಮುನಿಪುಂಗವಾಃ ॥೧೪॥
ಶೈವಂ ಸಂಕ್ಷಿಪ್ಯ ವೇದೋಕ್ತಂ ಶಿವೇನ ಪರಿಭಾಷಿತಂ ।
ಸ್ತುತಿ ನಿಂದಾದಿ ರಹಿತಂ ಸದ್ಯಃ ಪ್ರತ್ಯಯ ಕಾರಣಂ ॥೧೫॥
ಗುರುಪ್ರಸಾದಜಂ ದಿವ್ಯ ಮನಾಯಾಸೇನ ಮುಕ್ತಿದಂ ।
॥ ಸನತ್ಕುಮಾರ ಉವಾಚ ॥
ಭಗವನ್ ಸರ್ವ ಭೂತೇಶ ನಂದೀಶ್ವರ ಮಹೇಶ್ವರ ॥೧೬॥

---

ಗೌರವಕ್ಕೆ ಪಾತ್ರನಾದ ನಂದಿಕೇಶ್ವರನನ್ನು ಕುರಿತು ಕೇಳಿದನು. ಆ ವಿಷಯವನ್ನೇ ನೀವೀಗ ನನ್ನನ್ನು ಕೇಳುತ್ತಿರುವಿರಿ.

೧೪. ಹಾಗೆ ಪ್ರಶ್ನಿಸಿದ ಸನತ್ಕುಮಾರನಿಗೆ ನಂದಿಕೇಶ್ವರನು ಯಾವ ಶಿವ ಸಂಬದ್ಧವಾದ ಪೂಜಾ ಕ್ರಮವನ್ನು ಹೇಳಿದನೋ ಅದನ್ನೇ ಎಲೈ ಮುನಿ ಶ್ರೇಷ್ಠರೇ, ನೀವೂ ಕೇಳುವವರಾಗಿರಿ.

೧೫. ಈಶ್ವರನು ವೇದದಲ್ಲಿ ಹೇಳಿರುವ ಈಶ್ವರಾರಾಧನ ಕ್ರಮವನ್ನು ಸಂಕ್ಷೇಪವಾಗಿ ನಂದಿಯು ಹೇಳಿರುತ್ತಾನೆ. ಅದು ಆತ್ಮಸ್ತುತಿಯೂ, ಪರ ನಿಂದೆಯೂ ಇಲ್ಲದೆ ತತ್ಕ್ಷಣ ನಂಬಿಕೆಯನ್ನುಂಟುಮಾಡುವುದು. ಅದು ಗುರುವಿನಅನುಗ್ರಹದಿಂದ ಪ್ರಕಟವಾದುದು. ಶ್ರೇಷ್ಠವಾದುದು ಮತ್ತು ಸುಲಭವಾಗಿ ಮೋಕ್ಷವನ್ನು ಕೊಡತಕ್ಕದ್ದು.

೧೬-೧೭. ಸನತ್ಕುಮಾರನು ಹೇಳಿದನು:—ಸಕಲ ಭೂತಗಳಿಗೂ ಒಡೆಯನಾದ ಪೂಜ್ಯನಾದ ಓ ನಂದೀಶನೇ, ವಿನಮ್ರನಾಗಿ ಬಂದಿರುವ ನನಗೋಸ್ಕರ ಈಶ್ವರನನ್ನು ಯಾವ ಕ್ರಮದಿಂದ ಪೂಜಿಸಿದರೆ ಧರ್ಮ,

**ಕಥಂ ಪೂಜಾದಯು ಶ್ಯಂಭೋ ರ್ಧರ್ಮಕಾಮಾರ್ಥ ಮುಕ್ತಯೇ ।**
**ವಕ್ತು ಮರ್ಹಸಿ ಶೈಲಾದೇ ವಿನಯೇನಾ ಗತಾಯ ಮೇ ॥೧೭॥**

**॥ ಸೂತ ಉವಾಚ ॥**

**ಸಂಪ್ರೇಕ್ಷ್ಯ ಭಗವಾನ್ನಂದೀ ನಿಶಮ್ಯ ವಚನಂ ಪುನಃ ।**
**ಕಾಲ ವೇಲಾಽಧಿಕಾ ರಾದ್ಯ ಮವದದ್ವದತಾಂ ವರಃ ॥೧೮॥**

**॥ ಶೈಲಾದಿ ರುವಾಚ ॥**

**ಗುರುತಃ ಶಾಸ್ತ್ರತಶ್ಚೈವ ಮಧಿಕಾರಂ ಬ್ರವೀಮ್ಯಹಂ ।**
**ಗೌರವಾದೇವ ಸಂಜ್ಞೈಷಾ ಶಿವಾಚಾರ್ಯಸ್ಯ ನಾನ್ಯಥಾ ॥೧೯॥**

**ಸ್ವಯಮಾಚರತೇ ಯಸ್ತು ಆಚಾರೇ ಸ್ಥಾಪಯತ್ಯಪಿ ।**
**ಆ ಚಿನೋ ತಿ ಚ ಶಾಸ್ತ್ರಾರ್ಥಾ ನಾಚಾರ್ಯ ಸ್ತೇನ ಚೋಚ್ಯತೇ॥೨೦॥**

---

ಅರ್ಥ, ಕಾಮ ಮೋಕ್ಷಗಳು ಸಿದ್ಧಿಸುತ್ತವೆಯೋ ಅದನ್ನು ಹೇಳುವವನಾಗು.

೧೮. ಸೂತನು ಹೇಳಿದನು. ಪೂಜ್ಯನಾದ ನಂದಿಕೇಶ್ವರನು ಸನತ್ಕುಮಾರನು ಹೇಳಿದನ್ನುಕೇಳಿ, ಅವನನ್ನುಕುರಿತು ಶಿವಪೂಜೆಗೆ ಯುಕ್ತವಾದ ಕಾಲ, ಅಧಿಕಾರವೇ ಮೊದಲಾದವನ್ನು ಹೇಳುವವರಲ್ಲಿ (ಮಾತನಾಡುವುದರಲ್ಲಿ) ಶ್ರೇಷ್ಠನಾದುದರಿಂದ ಕ್ರಮವಾಗಿ ಹೇಳಿದನು.

೧೯. ನಂದಿಕೇಶ್ವರನು ಹೇಳಿದನು:—ಶಾಸ್ತ್ರಸಂಮತವಾದ ಗುರುವಿನ ಉಪದೇಶದಂತೆ ಶಿವಪೂಜಾಽಧಿಕಾರಾದಿಗಳನ್ನು ನಾನು ಹೇಳುತ್ತೇನೆ. ಶೈವಧರ್ಮವನ್ನು ತಿಳಿದಿರುವ ಆಚಾರ್ಯನಿಗೆ ಗುರುವೆಂಬ ಹೆಸರು ಗೌರವಕ್ಕಾಗಿ ಅನ್ವರ್ಥವಾಗಿ ಅಲ್ಲದೇ ಬೇರೆಯಲ್ಲ.

೨೦. ಶಾಸ್ತ್ರಾರ್ಥಗಳನ್ನೂ ಆಚಾರಗಳನ್ನೂ ತಿಳಿಸುವ ಗ್ರಂಥಗಳನ್ನು ರಚಿಸಿ, ತಾನೂ ಶಾಸ್ತ್ರೋಕ್ತವಾದ ಮಾರ್ಗದಲ್ಲಿ ನಡೆದು, ಇತರರನ್ನೂ ಆ ಮಾರ್ಗದಲ್ಲಿ ನಡೆಯುವಂತೆ ಮಾಡುವವನೇ ಆಚಾರ್ಯ ಎನಿಸಿಕೊಳ್ಳುತ್ತಾನೆ.

ತಸ್ಮಾದ್ವೇದಾರ್ಥ ತತ್ತ್ವಜ್ಞ ಮಾಚಾರ್ಯಂ ಭಸ್ಮ ಶಾಯಿನಂ ।
ಗುರುಮನ್ವೇಷಯೇ ದ್ಭಕ್ತಃ ಸುಭಗಂ ಪ್ರಿಯದರ್ಶನಂ ॥೨೧॥

ಪ್ರತಿಪನ್ನಂ ಜನಾನಂದಂ ಶ್ರುತಿಸ್ಮೃತಿ ಪಥಾನುಗಂ ।
ವಿದ್ಯಯಾಽಭಯ ದಾತಾರಂ ಲೌಲ್ಯ ಚಾಪಲ್ಯ ವರ್ಜಿತಂ ॥೨೨॥

ಆಚಾರ ಪಾಲಕಂ ಧೀರಂ ಸಮಯೇಷು ಕೃತಾಸ್ಪದಂ ।
ತಂ ದೃಷ್ಟ್ವಾ ಸರ್ವ ಭಾವೇನ ಪೂಜಯೇ ಚ್ಛಿವವದ್ಗುರುಂ ॥೨೩॥

ಆತ್ಮನಾ ಚ ಧನೇನೈವ ಶ್ರದ್ಧಾ ವಿತ್ತಾನು ಸಾರತಃ ।
ತಾವ ದಾರಾಧಯೇ ಚ್ಛಿಷ್ಯಃ ಪ್ರಸನ್ನೋಽಸೌ ಯಥಾ ಭವೇತ್ ॥

---

೨೧. ಆದ ಕಾರಣದ ದೆಸೆಯಿಂದ ಶಿವಭಕ್ತನು ಭಸ್ಮವನ್ನು ಲೇಪಿಸಿಕೊಂಡಿರುವ ವೇದಾರ್ಥಗಳ ತತ್ತ್ವಗಳನ್ನು ತಿಳಿದಿರುವ ತೇಜೋವಂತನೂ ಭಾಗ್ಯಶಾಲಿಯೂ ಆದ ಗುರುವನ್ನು ಹುಡುಕಿ ಪಡೆಯಬೇಕು.

೨೨. ಸಕಲವನ್ನೂ ತಿಳಿದವನಾಗಿ, ಶ್ರೌತಸ್ಮಾರ್ತ ಕರ್ಮಗಳನ್ನು ಮಾಡುತ್ತಾ, ಜನಗಳಿಗೆ ಸಂತೋಷವನ್ನುಂಟು ಮಾಡುವವನೂ, ಲಂಪಟತನವಾಗಲೀ, ಚಪಲ ತನವಾಗಲೀ ಇಲ್ಲದಿರುವ, ಕೇಳಿದ ವಿದ್ಯೆಯನ್ನು ಕೊಡುವುದರ ಮೂಲಕ ಅಭಯವನ್ನು ಕೊಡುವ,

೨೩. ಆಚಾರ ನಿಷ್ಠನಾದ ಸಮರ್ಥನಾದ ಗುರುವನ್ನು ಅವಕಾಶ ಕಲ್ಪಿಸಿಕೊಂಡು ಸಂಧ್ಯಾದಿ ಕಾಲಗಳಲ್ಲಿ ಕಂಡು, ಸಕಲ ಪ್ರಕಾರದಿಂದಲೂ ಈಶ್ವರನನ್ನು ಪೂಜಿಸುವಂತೆ ಪೂಜಿಸಬೇಕು.

೨೪. ಶಿಷ್ಯನಾದವನು ಗುರುವನ್ನು ತನ್ನ ದೇಹದಿಂದಲೂ, ಶ್ರದ್ಧೆಯಿಂದಲೂ, ಧನದಿಂದಲೂ ಕ್ರಮವಾಗಿ (ವಿಧಿವತ್ತಾಗಿ) ಗುರುವು ತನ್ನಲ್ಲಿ (ಶಿಷ್ಯನಲ್ಲಿ) ಅನುಗ್ರಹವುಳ್ಳವನಾಗುವವರೆಗೆ ಸೇವಿಸಬೇಕು.

ಸುಪ್ರಸನ್ನೇ ಮಹಾಭಾಗೇ ಸದ್ಯಃ ಪಾಶಕ್ಷಯೋ ಭವೇತ್ ।
ಗುರುರ್ಮಾನ್ಯೋ ಗುರುಃ ಪೂಜ್ಯೋ ಗುರುರೇವ ಸದಾಶಿವಃ ॥೨೫॥
ಸಂವತ್ಸರ ತ್ರಯಂ ವಾಽಥ ಶಿಷ್ಯಾ ನ್ವಿಪ್ರಾ ನ್ಪರೀಕ್ಷಯೇತ್ ।
ಪ್ರಾಣ ದ್ರವ್ಯ ಪ್ರದಾನೇನ ಆದೇಶೈಶ್ಚ ಇತಸ್ತತಃ ॥೨೬॥
ಉತ್ತಮಶ್ಚಾಧಮೋ ಯೋಜ್ಯೋ ನೀಚ ಉತ್ತಮ ವಸ್ತುಷು ।
ಆಕೃಷ್ಟಾ ಸ್ತಾಡಿತಾ ವಾಽಪಿ ಯೇ ವಿಷಾದಂ ನಯಾಂತಿ ನೈ ॥೨೭॥
ತೇ ಯೋಗ್ಯಾಃ ಶಿವಧರ್ಮಿಷ್ಠಾಃ ಶಿವಧರ್ಮ ಪರಾಯಣಾಃ ।
ಸಂ ಯುತಾ ಧರ್ಮ ಸಂಪನ್ನಾಃ ಶ್ರುತಿ ಸ್ಮೃತಿ ಪಥಾನುಗಾಃ ॥೨೮॥

---

೨೫. ಆ ಮಹಾನುಹಿಮನು ಪ್ರಸನ್ನನಾಗಲು ತತ್‍ಕ್ಷಣದಲ್ಲೇ ಸಂಸಾರ ಪಾಶವು ನಾಶವಾಗುತ್ತದೆ. ಗುರುವು ಗೌರವಕ್ಕೆ ಅರ್ಹನಾದವನು. ಗುರುವು ಪೂಜಿಸಲ್ಪಡಬೇಕಾದವನು. ಹೆಚ್ಚಿಗೆ ಹೇಳುವುದೇನು.? ಗುರುವೇ ಸಕಲೇಶ್ವರನಾದ ಪರಮೇಶ್ವರನು.

೨೬. ಗುರುವು ಬ್ರಾಹ್ಮಣ ವಿಪ್ರ ಶಿಷ್ಯರನ್ನು ಮೂರು ವರ್ಷಗಳವರೆಗೆ ಅನ್ನಪಾನಾದಿಗಳನ್ನು ಕೊಡುತ್ತಾ, ಕೆಲಸಗಳನ್ನು ಮಾಡಿಸಿ ಕೊಳ್ಳುತ್ತಾ ಪರೀಕ್ಷಿಸಬೇಕು.

೨೭–೨೮. ಉತ್ತಮನಾದವನನ್ನು ಕೀಳು ಕೆಲಸಗಳಲ್ಲೂ, ಕೀಳು ದರ್ಜೆಯುವನನ್ನು ಉತ್ತಮ ಕೆಲಸಗಳಲ್ಲೂ, ನಿಯೋಜಿಸಿ ಪರೀಕ್ಷಿಸಬೇಕು. ಏಟನ್ನುತಿಂದು, ಸಕಲಕೆಲಸಕ್ಕೂ ಎಳೆಯಲ್ಪಟ್ಟರೂ ಯಾರು ದುಃಖಪಡುವುದಿಲ್ಲವೋ ಅವರು ಯೋಗ್ಯರಾದ ಶಿಷ್ಯರಾಗುತ್ತಾರೆ. ಅಂತಹವರೂ, ಶಿವ ಧರ್ಮದಲ್ಲಿ ನಿರತರಾಗಿರುವವರೂ, ಶಿವಧರ್ಮದಲ್ಲಿ ಆಸಕ್ತರೂ, ಧರ್ಮದಿಂದ ಸಂಪನ್ನರೂ, ಶ್ರೌತ ಸ್ಮಾರ್ತಕರ್ಮದಲ್ಲಿ ಆಸಕ್ತರೂ, ಸಕಲ ತೊಂದರೆಗಳನ್ನೂ ಸಹಿಸುವ ಧೀರರೂ ಯಾವಾಗಲೂ ಕೆಲಸ ಮಾಡುವುದ

ಸರ್ವ ದ್ವಂದ್ವ ಸಹಾ ಧೀರಾ ನಿತ್ಯ ಮುದ್ಯುಕ್ತ ಚೇತಸಃ ।
ಪರೋಪಕಾರ ನಿರತಾ ಗುರು ಶುಶ್ರೂಷಣೇ ರತಾಃ ॥೨೯॥
ಆರ್ಜವಾ ಮಾರ್ದವಾಃ ಸ್ವಸ್ಥಾ ಅನುಕೂಲಾಃ ಪ್ರಿಯಂವದಾಃ ।
ಅಮಾನಿನೋ ಬುದ್ಧಿಮಂತ ಸ್ತ್ಯಕ್ತ ಸ್ಪರ್ಧಾ ಗತಸ್ಪೃಹಾಃ ॥೩೦॥
ಶೌಚಾಚಾರ ಗುಣೋಪೇತಾ ದಂಭ ಮಾತ್ಸರ್ಯ ವರ್ಜಿತಾಃ ।
ಯೋಗ್ಯಾ ಏವಂ ದ್ವಿಜಾಃ ಸರ್ವೇ ಶಿವಭಕ್ತಿ ಪರಾಯಣಾಃ ॥೩೧॥
ಏವಂ ವೃತ್ತ ಸಮೋಪೇತಾ ವಾಙ್ಮನಃ ಕಾಯ ಕರ್ಮಭಿಃ ।
ಶೋಧ್ಯಾ ಏವಂ ವಿಧಾ ಶ್ಚೈವ ತತ್ತ್ವಾನಾಂ ಚ ವಿಶುದ್ಧಯೇ ॥೩೨॥
ಶುದ್ಧೋ ವಿನಯ ಸಂಪನ್ನೋ ಮಿಥ್ಯಾ ಕಟುಕ ವರ್ಜಿತಃ ।
ಗುರ್ವಾಜ್ಞಾ ಪಾಲಕಶ್ಚೈವ ಶಿಷ್ಯೋಽನುಗ್ರಹ ಮರ್ಹತಿ ॥೩೩॥

---

ರಲ್ಲಿ ಆಸಕ್ತರೂ, ಇನ್ನೊಬ್ಬರಿಗೆ ಉಪಕಾರ ಮಾಡುವುದರಲ್ಲಿ ಆಸಕ್ತರೂ, ಆಲಸ್ಯವಿಲ್ಲದೆ ಗುರುಸೇವೆಯಲ್ಲಿ ಪ್ರೀತಿಯುಳ್ಳವರೂ ಶಿಷ್ಯರಾಗಲು ಅರ್ಹರು ಆಗಿರುತ್ತಾರೆ.

೩೦-೩೨. ನಿಜವೂ, ನ್ಯಾಯವೂ, ಮತ್ತು ಮೃದುವೂ ಆದ ಸ್ವಭಾವವುಳ್ಳವರೂ, ಆರೋಗ್ಯವಂತರೂ, ಯಾವಾಗಲೂ ಎದುರು ಬೀಳದವರೂ, ಪ್ರಿಯವಾದುದನ್ನೇ ಹೇಳುವವರೂ, ಗರ್ವವಿಲ್ಲದವರೂ, ಬುದ್ಧಿವಂತರೂ ಹುರುಡಿಲ್ಲದವರೂ, ದುರಾಶೆಯಿಂದ ಶೂನ್ಯರೂ, ಶುಚಿ, ಕರ್ಮ, ಮತ್ತು ಆಚಾರ, ಈ ಗುಣಗಳಿಂದಯುಕ್ತರೂ, ದಂಭ, ಅಸೂಯೆಗಳಿಲ್ಲದವರೂ, ಶಿವನಲ್ಲಿ ಭಕ್ತಿಯುಳ್ಳ ಬ್ರಾಹ್ಮಣರು ಯೋಗ್ಯರಾದ ಶಿಷ್ಯರು. ಈ ಪ್ರಕಾರವಾಗಿ ಮನಸ್ಸು, ಮಾತು, ಶರೀರ, ಕೆಲಸಗಳಲ್ಲಿಯೂ, ಮೇಲೆ ಹೇಳಿದಂತೆಒಳ್ಳೆಯ ನಡತೆಯೂ, ಗುಣಗಳೂ ಉಳ್ಳವರನ್ನು ಹುಡಿಕಿ ನೋಡಬೇಕು. ತತ್ವಗಳು ಯೋಗ್ಯರಾದವರಲ್ಲಿ ಪರಿಶುದ್ಧವಾಗಿರುತ್ತವೆ. ಅನ್ಯರಲ್ಲಿರವು. ಆದಕಾರಣ ದಿಂದ ಮೇಲೆ ಹೇಳಿದ ಗುಣಗಳಿಂದ ಯುಕ್ತರಾದವರನ್ನೇ ಆರಿಸಬೇಕು.

೩೩. ಶುದ್ಧನಾದವನು (ಯುಕ್ತವಾದ ಶೌಚಾದಿ ಕರ್ಮಗಳನ್ನು ಮಾಡುತ್ತಾ ಸ್ವಚ್ಛನಾದವನು), ವಿನಮ್ರನಾದವನು, ಸುಳ್ಳು ಮತ್ತು ಕಪಟ ವಚನಗಳನ್ನಾಡದೇ ಇರುವ, ಗುರುವಿನ ಆಜ್ಞೆಯಂತೆ ನಡೆಯುವ ಶಿಷ್ಯನು ಗುರುವಿನ ಅನುಗ್ರಹಕ್ಕೆ ಪಾತ್ರನಾಗಲು ಅರ್ಹನು.

ಗುರುಶ್ಚ ಶಾಸ್ತ್ರವಿ ತ್ಪ್ರಾಜ್ಞ ಸ್ತಪಸ್ವೀ ಜನವತ್ಸಲಃ ।
ಲೋಕಾಚಾರ ರತೋ ಹ್ಯೇವಂ ತತ್ತ್ವವಿನ್ಮೋಕ್ಷದಃ ಸ್ಮೃತಃ ॥೩೪॥

ಸರ್ವ ಲಕ್ಷಣ ಸಂಪನ್ನಃ ಸರ್ವ ಶಾಸ್ತ್ರ ವಿಶಾರದಃ ।
ಸರ್ವೋಪಾಯ ವಿಧಾನಜ್ಞ ಸ್ತತ್ವಹೀನಸ್ಯ ನಿಷ್ಫಲಂ ॥೩೫॥

ಸ್ವಸಂವೇದ್ಯೇ ಪರೇ ತತ್ವೇ ನಿಶ್ಚಯೋ ಯಸ್ಯ ನಾತ್ಮನಿ ।
ಆತ್ಮನೋಽನುಗ್ರಹೋ ನಾಸ್ತಿ ಪರಸ್ಯಾನುಗ್ರಹಃ ಕಥಂ ॥೩೬॥

ಪ್ರಬುದ್ಧಸ್ತು ದ್ವಿಜೋ ಯಸ್ತು ಸ ಶುದ್ಧಃ ಸಾಧಯತ್ಯಪಿ ।
ತತ್ತ್ವಹೀನೇ ಕುತೋ ಬೋಧಃ ಕುತೋ ಹ್ಯಾತ್ಮ ಪರಿಗ್ರಹಃ ॥೩೭॥

---

೩೪. ಗುರುವಾದರೋ ಶಾಸ್ತ್ರಗಳನ್ನು ತಿಳಿದವನೂ ಜ್ಞಾನಿಯೂ, ತಪಸ್ವಿಯೂ, ಜನಗಳಲ್ಲಿ ಪ್ರೀತಿಯುಳ್ಳವನೂ, ಲೌಕಿಕ ಮತ್ತು ಪಾರ ಮಾರ್ಥಿಕ ಗಳಾದ ಆಚರಣೆಗಳಲ್ಲಿ ಆಸಕ್ತನೂ, ಆಗಿ ತತ್ತ್ವಗಳನ್ನು ತಿಳಿದವನಾಗಿರಬೇಕು. ಅಂತಹ ಗುರುವೇ ಮೋಕ್ಷವನ್ನು ದೊರಕಿಸಿ ಕೊಡಲು ಅರ್ಹತೆಯುಳ್ಳವನು.

೩೫. ಸಕಲ ಲಕ್ಷಣಗಳಿಂದಲೂ ಕೂಡಿ, ಸಕಲ ಶಾಸ್ತ್ರಗಳನ್ನೂ ತಿಳಿದು, ಸಕಲೋಪಾಯಗಳನ್ನೂ ತಿಳಿದವನಾದರೂ ಆತ್ಮಜ್ಞಾನವಿಲ್ಲದವ ನಾದರೆ ಅವನು ತತ್ತ್ವೋಪದೇಶದಮೂಲಕ ಮೋಕ್ಷವನ್ನು ಶಿಷ್ಯನಿಗೂ ದೊರಕಿಸಿ ಕೊಡಲು ಯೋಗ್ಯತೆಯಿಲ್ಲದವನು.

೩೬. ತಾನು ತಿಳಿಯ ಬೇಕಾದ ಆತ್ಮ ತತ್ತ್ವದಜ್ಞಾನದ ವಿಷಯದಲ್ಲಿ ಯಾವನಿಗೆ ತನ್ನ ಆತ್ಮದಲ್ಲಿ ದೃಢವಾದ ನಿಶ್ಚಯ ವಿಲ್ಲವೋ, ಅವನು ಅನು ಗ್ರಹವನ್ನು ಪರರಿಗೆ ಹೇಗೆ ಮಾಡಲುಸಾಧ್ಯ? ತಾನು ತತ್ತ್ವವನ್ನು ತಿಳಿ ಯದೇ ಆತ್ಮಾನುಗ್ರಹವಿಲ್ಲದವನಾಗಿ, ಇನ್ನೊಬ್ಬರಿಗೆ ತತ್ತ್ವವನ್ನು ಉಪದೇಶಿಸಿ ಆತ್ಮಜ್ಞಾನವನ್ನುಂಟುಮಾಡುವುದು ಹೇಗೆ ?

೩೭. ತತ್ತ್ವಜ್ಞಾನದಿಂದ ಎಚ್ಚೆತ್ತ ಬ್ರಾಹ್ಮಣನು ಪರಿಶುದ್ಧನಾಗಿ ಆತ್ಮಜ್ಞಾನವನ್ನು ಪಡೆಯುತ್ತಾನೆ. ತತ್ತ್ವಜ್ಞಾನವಿಲ್ಲದವನಿಗೆ ಜ್ಞಾನೋ ತ್ಪತ್ತಿಯು ಹೇಗೆ ತಾನೇ ಆಗುತ್ತದೆ? ಮತ್ತು ಆತ್ಮಜ್ಞಾನವು ಹೇಗೆತಾನೇ ಉಂಟಾಗುತ್ತದೆ? ಪರೋಪದೇಶದಲ್ಲಿ ಸಾಮರ್ಥ್ಯವೂ ಉಂಟಾಗು ವುದು ಹೇಗೆ ?

ಪರಿಗ್ರಹ ವಿನಿರ್ಮುಕ್ತಾಃ ಸ್ಮೃತಾಃ ಸರ್ವೇ ಪಶವೋದಿತಾಃ ।
ಪಶುಭಿಃ ಪ್ರೇರಿತಾ ಯೇ ತು ಸರ್ವೇ ತೇ ಪಶವಃ ಸ್ಮೃತಾಃ ॥೩೮॥

ತಸ್ಮಾತ್ತತ್ತ್ವವಿದೋ ಯೇ ತು ತೇ ಮುಕ್ತಾ ಮೋಚಯಂತ್ಯಪಿ ।
ಸಂವಿತ್ತಿ ಜನನಂ ತತ್ತ್ವಂ ಪರಾನಂದ ಸಮುದ್ಭವಂ ॥೩೯॥

ತತ್ತ್ವಂ ತು ವಿದಿತಂ ಯೇನ ಸ ಏವಾನಂದ ದರ್ಶಕಃ ।
ನ ಪುನರ್ನಾಮ ಮಾತ್ರೇಣ ಸಂವಿತ್ತಿ ರಹಿತಸ್ತು ಯಃ ॥೪೦॥

ಅನ್ಯೋಽನ್ಯಂ ತಾರಯೇನ್ನೈವ ಕಿಂ ಶಿಲಾ ತಾರಯೇಚ್ಛಿಲಾಂ ।
ಯೇಷಾಂ ತನ್ನಾಮ ಮಾತ್ರೇಣ ಮುಕ್ತಿರ್ವೈ ನಾಮ ಮಾತ್ರಿಕಾ ॥

---

೩೮. ಆತ್ಮಜ್ಞಾನ ವಿಲ್ಲದವರೆಲ್ಲರೂ ಪಶುಗಳೆಂದು ಹೇಳಲ್ಪಟ್ಟಿರುತ್ತಾರೆ. ಅಂತಹಪಶುಗಳು ಯಾರಿಗೆ ಉಪದೇಶಮಾಡುವರೋ ಅವರೆಲ್ಲರೂ ಪಶುಗಳೇ ಆಗುತ್ತಾರೆ.

೩೯. ಆದಕಾರಣದಿಂದ ತತ್ವಜ್ಞಾನಿಗಳು ತಾವು ಮುಕ್ತರಾಗಿದ್ದರೆ ಇನ್ನೊಬ್ಬರನ್ನೂ ಮುಕ್ತರನ್ನಾಗಿ ಮಾಡುತ್ತಾರೆ. ತತ್ತ್ವಜ್ಞಾನವು ಆತ್ಮಜ್ಞಾನವನ್ನುಂಟುಮಾಡುವುದು. ಮತ್ತು ಶ್ರೇಷ್ಠವಾದ ಆನಂದವನ್ನುಂಟುಮಾಡುತ್ತದೆ.

೪೦. ಯಾರು ಪರತತ್ತ್ವವನ್ನು ತಿಳಿಯುತ್ತಾರೋ ಅವರೇ ಆನಂದವನ್ನು ಕಂಡವರು. ಯೋಗ್ಯನಲ್ಲದವನಿಗೆ ಸ್ವಲ್ಪವೂ ಜ್ಞಾನವುಂಟಾಗಿರುವುದಿಲ್ಲ.

೪೧. ಆತ್ಮಜ್ಞಾನ ಶೂನ್ಯರಾದ ಒಬ್ಬರು ಮತ್ತೊಬ್ಬರನ್ನು ಸಂಸಾರ ಬಂಧನದಿಂದ ಮುಕ್ತರನ್ನಾಗಿ ಮಾಡಲಾರರು. ಒಂದು ಕಲ್ಲು ಮತ್ತೊಂದು ಕಲ್ಲನ್ನು ತೇಲಿಸಿ ದಾಟಿಸಬಲ್ಲುದೆ? ಯಾವನಿಗೆ ಕೇವಲ ಶಬ್ದದಿಂದ ತತ್ತ್ವಜ್ಞಾನದ ಪರಿಚಯವಿರುವುದೋ ಅವನ ಮೋಕ್ಷದ ಉಪದೇಶವೂ ಸಹ ವಾಸ್ತವವಾಗಿರದೇ ಶಬ್ದ ಮಾತ್ರದ್ದಾಗಿರುತ್ತದೆ.

ಯೋಗಿನಾಂ ದರ್ಶನಾ ದ್ವಾಽಪಿ ಸ್ಪರ್ಶನಾ ದ್ಭಾಷಣಾದಪಿ ।
ಸದ್ಯ ಸ್ಸಂ ಜಾಯತೇ ಜ್ಞಾನಂ ಪಾಶೋ ಪಕ್ಷಯ ಕಾರಿಣೇ ॥೪೨॥
ಅಥವಾ ಯೋಗ ಮಾರ್ಗೇಣ ಶಿಷ್ಯದೇಹಂ ಪ್ರವಿಶ್ಯ ಚ ।
ಬೋಧಯೇ ದೇವ ಯೋಗೇನ ಸರ್ವ ತತ್ತ್ವಾನಿ ಶೋಧ್ಯ ಚ ॥೪೩॥
ಷ ಡರ್ಧ ಶುದ್ಧಿ ವಿಹಿತಾ ಜ್ಞಾನ ಯೋಗೇನ ಯೋಗಿನಾಂ ।
ಶಿಷ್ಯಂ ಪರೀಕ್ಷ್ಯ ಧರ್ಮಜ್ಞಂ ಧಾರ್ಮಿಕಂ ವೇದ ಪಾರಗಂ ॥೪೪॥
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಬಹುದೋಷ ವಿವರ್ಜಿತಂ ।
ಜ್ಞಾನೇನ ಜ್ಞೇಯ ಮಾಲೋಕ್ಯ ಕರ್ಣಾತ್ಕರ್ಣಾಗತೇನ ತು ॥೪೫॥

---

೪೨. ಯೋಗಿಗಳನ್ನು ನೋಡುವುದರಿಂದಲೂ, ಮುಟ್ಟುವುದರಿಂದಲೂ, ಅವರೊಡನೆ ಮಾತಾಡುವುದರಿಂದಲೂ, ತತ್‌ಕ್ಷಣವೇ ಸಂಸಾರ ಬಂಧನ ನಾಶಕ್ಕೆ ಕಾರಣವಾದ ತತ್ತ್ವಜ್ಞಾನವು ಉತ್ಪತ್ತಿಯಾಗುತ್ತದೆ.

೪೩. ಹಾಗಲ್ಲದಿದ್ದರೆ ಯೋಗಮಾರ್ಗದಿಂದ ಯೋಗಿಯು ಶಿಷ್ಯನ ದೇಹವನ್ನು ಪ್ರವೇಶಿಸಿ ಸಕಲ ತತ್ತ್ವಗಳನ್ನೂ ಯೋಗಬಲದಿಂದ ಉಪದೇಶಿಸುತ್ತಾನೆ.

೪೪–೪೫. ಯೋಗಿಗೆ ಜ್ಞಾನಸಂಬಂಧದಿಂದ ಗುಣತ್ರಯ ಶುದ್ಧಿಯು ಹೇಳಲ್ಪಟ್ಟಿದೆ. ಧರ್ಮವನ್ನು ತಿಳಿದು ಧರ್ಮಮಾರ್ಗದಲ್ಲಿ ನಡೆಯುವವನೂ, ವೇದಾಭ್ಯಾಸಿಯೂ ಆದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಹೆಚ್ಚು ದೋಷವಿಲ್ಲದೇ ಇರುವ ಶಿಷ್ಯನನ್ನು ಪರೀಕ್ಷೆಮಾಡಿ ಸ್ವೀಕರಿಸಬೇಕು. ಗುರುವಾದವನು, ದೀಪದ ದೆಸೆಯಿಂದ ಇನ್ನೊಂದು ದೀಪವು ಹೇಗೆ ಉಂಟಾಗಿ ಬೆಳಗುವುದೋ ಹಾಗೆ, ಗುರುಪರಂಪರೆಯಿಂದ ಪ್ರಾಪ್ತವಾದ ಜ್ಞಾನಮಾರ್ಗದಿಂದ ತಿಳಿಯ ಬೇಕಾದುದನ್ನು ತಿಳಿದು ಶಾಸ್ತ್ರ ವಿಹಿತ ಮಾರ್ಗದಲ್ಲಿ ಸಂಚರಿಸಬೇಕು.

ದಿಪಾದ್ದೀಪೋ ಯಥಾ ಚಾನ್ಯೈಃ ಸಂಚರೇ ದ್ವಿಧಿ ವದ್ಗುರುಃ ।
ಭೌವನಂ ಚ ಪದಂ ಚೈವ ವರ್ಣಾಖ್ಯಂ ಮಾತ್ರ ಮುತ್ತಮಂ ॥೪೬॥
ಕಾಲಾಧ್ವರಂ ಮಹಾಭಾಗ ತತ್ತ್ವಾಖ್ಯಂ ಸರ್ವ ಸಂಮತಂ ।
ಭಿದ್ಯತೇ ಯಸ್ಯ ಸಾಮರ್ಥ್ಯಾ ದಾಜ್ಞಾ ಮಾತ್ರೇಣ ಸರ್ವತಃ ॥೪೭॥
ತಸ್ಯ ಸಿದ್ಧಿಶ್ಚ ಮುಕ್ತಿಶ್ಚ ಗುರು ಕಾರುಣ್ಯ ಸಂಭವಾ ।
ಪೃಥಿವ್ಯಾದೀನಿ ಭೂತಾನಿ ಆವಿಶಂತಿ ಚ ಭೌವನೇ ॥೪೮॥
ಶಬ್ದಃ ಸ್ಪರ್ಶ ಸ್ತಥಾ ರೂಪಂ ರಸೋ ಗಂಧಶ್ಚ ಭಾವತಃ ।
ಪದಂ ವರ್ಣಾಖ್ಯಕಂ ವಿಪ್ರ ಬುದ್ಧೀಂದ್ರಿಯ ವಿಕಲ್ಪನಂ ॥೪೯॥
ಕರ್ಮೇಂದ್ರಿಯಾಣಿ ಮಾತ್ರಂ ಹಿ ಮನೋ ಬುದ್ಧಿ ರತಃ ಪರಂ ।
ಅಹಂಕಾರ ಮಥಾವ್ಯಕ್ತಂ ಕಾಲಾಧ್ವರಮಿತಿ ಸ್ಮೃತಂ ॥೫೦॥

---

೪೬-೪೭. ಸಕಲ ಶಾಸ್ತ್ರಗಳಿಗೂ ಸಂಮತವಾದ ತತ್ತ್ವಗಳು ಭೌವನವೆಂದೂ, ಪದವೆಂದೂ, ವರ್ಣವೆಂದೂ, ಮಾತ್ರವೆಂದೂ, ಒಟ್ಟಿಗೆ ಕಾಲಾಧ್ವರವೆಂದೂ, ಹೆಸರುಳ್ಳವಾಗಿರುತ್ತವೆ. ಸನತ್ಕುಮಾರನೇ, ಗುರುವಿನ ಮಹಿಮೆಯಿಂದ ಶಿಷ್ಯನಾದವನ ಅಜ್ಞಾನವು ಗುರುವಿನ ಅಪ್ಪಣೆಯಿಂದಲೇ ನಾಶವಾಗುವುದು. ಆ ಶಿಷ್ಯನ ತತ್ತ್ವಜ್ಞಾನಸಿದ್ಧಿಯೂ, ಮುಕ್ತಿಯೂ ಸಹ ಗುರುವಿನ ದಯೆಯಿಂದ ಲಭಿಸುತ್ತದೆ.

೪೮-೫೦. ಪೃಥಿವಿಯೇ ಮೊದಲಾದ ಪಂಚಭೂತಗಳು ಭೌವನ ಸಂಜ್ಞೆಯುಳ್ಳವು. ಶಬ್ದ, ಸ್ಪರ್ಶ, ರೂಪ, ರಸ, ಗಂಧವೇ ಮೊದಲಾದ ಗುಣಗಳು ಸ್ವಭಾವವಾಗಿ ಪದಸಂಜ್ಞೆಯುಳ್ಳವು. ಪಂಚ ಜ್ಞಾನೇಂದ್ರಿಯಗಳು ಸನತ್ಕುಮಾರನೇ,ವರ್ಣವೆಂಬ ಹೆಸರುಳ್ಳವು. ಪಂಚ ಕರ್ಮೇಂದ್ರಿಯಗಳು ಸನತ್ಕುಮಾರನೇ,ವರ್ಣವೆಂಬ ಹೆಸರುಳ್ಳವು. ಪಂಚಕರ್ಮೇಂದ್ರಿಯಗಳು ಮಾತ್ರಾ ಸಂಜ್ಞೆಯುಳ್ಳವು. ಮನಸ್ಸು ಬುದ್ಧಿ, ಅಹಂಕಾರ, ಅವ್ಯಕ್ತ, ಇವು ಕಾಲಾಧ್ವರ ಎಂಬ ಸಂಜ್ಞೆಯುಳ್ಳ ವೆಂದು ಹೇಳಲ್ಪಟ್ಟವೆ.

**ಪುರುಷಾದಿ ವಿರಿಂಚ್ಯಂತ ಮುನ್ಮನತ್ವಂ ಪರಾತ್ಪರಂ ।**
**ತಥೇಶತ್ವ ಮಿತಿ ಪ್ರೋಕ್ತಂ ಸರ್ವ ತತ್ತ್ವಾರ್ಥಬೋಧಕಂ ॥೫೧॥**
**ಅಯೋಗೀ ನೈವ ಜಾನಾತಿ ತತ್ವ ಶುದ್ಧಿಂ ಶಿವಾತ್ಮಿಕಾಂ ॥೫೨॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ವಿಂಶತಿತಮೋಽಧ್ಯಾಯಃ**

---

೫೧-೫೨. ಮನುಷ್ಯರ ಆನಂದದಿಂದ ಬ್ರಹ್ಮಪದದವರೆಗೂ ಆದನ್ನು ಪಡೆಯ ಬೇಕೆಂಬ ಮನಸ್ಸಿನ ತ್ವರೆಯು ಶ್ರೇಷ್ಠವಾಗುದು. ಸಕಲ ತತ್ತ್ವಗಳ ಅರ್ಥವನ್ನು ಪ್ರಕಾಶಪಡಿಸುವುದೂ ಈಶ್ವರನ ತತ್ತ್ವವನ್ನು ತಿಳಿಯುವುದೇ ಆಗಿರುತ್ತದೆ. ಆದುದರಿಂದ ಯೋಗಿಯಲ್ಲದವನು ಮಂಗಳ ರೂಪವಾದ ತತ್ತ್ವ ಶುದ್ಧಿಯನ್ನು ತಿಳಿಯಲಾರನು. ಯೋಗಿಯಾದವನೇ ಮಂಗಳ ಕರವಾದ ತತ್ವಶುದ್ಧಿಯನ್ನು ಪಡೆಯ ಬಲ್ಲನು ಎಂದು ತಾತ್ಪರ್ಯವು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



*

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಏಕವಿಂಶತಿತಮೋಽಧ್ಯಾಯಃ

॥ ಸೂತ ಉವಾಚ ॥

ಪರೀಕ್ಷ್ಯ ಭೂಮಿಂ ವಿಧಿವದ್ಗಂಧ ವರ್ಣ ರಸಾದಿಭಿಃ ।
ಅಲಂಕೃತ್ಯ ವಿತಾನಾದ್ಯೈ ರೀಶ್ವರಾ ವಾಹನಕ್ಷಮಾಂ ॥ ೧ ॥

ಏಕ ಹಸ್ತ ಪ್ರಮಾಣೇನ ಮಂಡಲಂ ಪರಿಕಲ್ಪಯೇತ್ ।
ಆಲಿಖೇತ್ಕಮಲಂ ಮಧ್ಯೇ ಪಂಚರತ್ನ ಸಮನ್ವಿತಂ ॥ ೨ ॥

ಚೂರ್ಣೈ ರಷ್ಟದಲಂ ವೃತ್ತಂ ಸಿತಂ ವಾ ರಕ್ತಮೇವ ಚ ।
ಪರಿವಾರೇಣ ಸಂಯುಕ್ತಂ ಬಹುಶೋಭಾ ಸಮನ್ವಿತಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು.

೧–೨. ಪರಮಾತ್ಮನನ್ನು ಸ್ಥಾಪಿಸಲು ಅರ್ಹವಾದ ಭೂಮಿಯನ್ನು ಪರೀಕ್ಷಿಸಿ, ಸುವಾಸನೆಯಿಂದಲೂ, ಕೃಷ್ಣ ವರ್ಣದಿಂದಲೂ, ಮಧುರವಾದ ರಸದಿಂದಲೂ, ನಾನಾ ವಿಧವಾದ ಅಲಂಕಾರಗಳಿಂದಲೂ, ಶಾಸ್ತ್ರಪೂರ್ವಕವಾಗಿ ಅಲಂಕರಿಸಿ ಒಂದು ಮೊಳ ಪ್ರಮಾಣವುಳ್ಳ ಮಂಡಲವನ್ನು ರಚಿಸಬೇಕು. ಮಂಡಲದ ಮಧ್ಯ ಭಾಗದಲ್ಲಿ ಪಂಚ ರತ್ನಗಳಿಂದ ಕೂಡಿದ ಕಮಲವನ್ನು ಬರೆಯಬೇಕು.

೩–೪. ಗಂಧವೇ ಮೊದಲಾದ ಚೂರ್ಣಗಳಿಂದ ಎಂಟು ಪತ್ರಗಳುಳ್ಳ ವರ್ತುಲವನ್ನು ಬಿಳಿಯ ಬಣ್ಣದಲ್ಲಾಗಲೀ, ರಕ್ತವರ್ಣದಲ್ಲಾಗಲೀ ಬರೆಯಬೇಕು. ಅದರಲ್ಲಿ ಶ್ರೇಷ್ಠ ಕಾರಣನಾದ ಸಕಲ ಪರಿವಾರ

ಆವಾಹ್ಯ ಕರ್ಣಿಕಾಯಾಂ ತು ಶಿವಂ ಪರಮ ಕಾರಣಂ ।
ಅರ್ಚಯೇತ್ಸರ್ವ ಯತ್ನೇನ ಯಥಾ ವಿಭವ ವಿಸ್ತರಂ ॥ ೪ ॥

ದಲೇಷು ಸಿದ್ಧಯಃ ಪ್ರೋಕ್ತಾಃ ಕರ್ಣಿಕಾಯಾಂ ಮಹಾಮುನೇ ।
ವೈರಾಗ್ಯ ಜ್ಞಾನ ನಾಲಂ ಚ ಧರ್ಮ ಕಂದಂ ಮನೋಹರಮ್ ॥ ೫ ॥

ವಾಮಾ ಜ್ಯೇಷ್ಠಾ ಚ ರೌದ್ರೀ ಚ ಕಾಲೀ ವಿಕರಣೀ ತಥಾ ।
ಬಲವಿಕರಣೀ ಚೈವ ಬಲ ಪ್ರಮಥಿನೀ ಕ್ರಮಾತ್ ॥ ೬ ॥

ಸರ್ವ ಭೂತಸ್ಯ ದಮನೀ ಕೇಸರೇಷು ಚ ಶಕ್ತಯಃ ।
ಮನೋನ್ಮನೀ ಮಹಾಮಾಯಾ ಕರ್ಣಿಕಾಯಾಂ ಶಿವಾಸನೇ ॥ ೭ ॥

ವಾಮದೇವಾದಿಭಿಃ ಸಾರ್ಧಂ ದ್ವಂದ್ವನ್ಯಾಯೇನ ವಿನ್ಯಸೇತ್ ।
ಮನೋನ್ಮನಂ ಮಹಾದೇವಂ ಮನೋನ್ಮನ್ಯಾಃಥ ಮಧ್ಯತಃ ॥ ೮ ॥

---

ದಿಂದ ಕೂಡಿದ ಅಲಂಕಾರ ಕಾಂತಿ ಯುಕ್ತನಾದ ಪರಮೇಶನನ್ನು ಆವಾಹನೆಮಾಡಿ ಶಾಸ್ತ್ರಾನುಸಾರವಾಗಿ ಪ್ರಯತ್ನ ಪೂರ್ವಕವಾಗಿ ಪೂಜಿಸಬೇಕು. ತನ್ನ ಶಕ್ತಿ, ಐಶ್ವರ್ಯಗಳಿಗೆ ತಕ್ಕಂತಹ ವೈಭವಗಳಿಂದ ಕೂಡಿದ ಉಪಚಾರಗಳಿಂದ ದೇವನನ್ನು ಆರಾಧಿಸಬೇಕು.

೫. ಬರೆದಿರುವ ಕಮಲದ ದಳಗಳಲ್ಲಿ ಅಣಿಮಾದಿ ಸಿದ್ಧಿಗಳನ್ನೂ, ಕರ್ಣಿಕೆಯಲ್ಲಿ ವೈರಾಗ್ಯವನ್ನೂ, ನಾಲ ಪ್ರದೇಶದಲ್ಲಿ ಜ್ಞಾನವನ್ನೂ, ಮನೋಹರವಾದ ಧರ್ಮವೆಂಬ ಕಂದವನ್ನೂ, ಭಾವಿಸಬೇಕು.

೬–೮. ವಾಮಾ, ಜ್ಯೇಷ್ಠಾ, ರೌದ್ರೀ, ಕಾಲೀ, (ಕಲ) ವಿಕರಣೀ, ಬಲವಿಕರಣೀ, ಬಲಪ್ರಮಥಿನೀ ಮತ್ತು ಸರ್ವಭೂತದಮನಿಯೇ ಮೊದಲಾದ ಶಕ್ತಿ ದೇವತೆಗಳನ್ನು ವಾಮದೇವನೇ ಮೊದಲಾದ ಅವರವರ ಪತಿದೇವರೊಡನೆ,ಕೇಸರ ಪ್ರದೇಶಗಳಲ್ಲಿ ಬರೆಯಬೇಕು. ಮಹಾ ಮಾಯಾ ಸ್ವರೂಪಳಾದ ಮನೋನ್ಮನೀ ದೇವಿಯನ್ನು ಮನೋನ್ಮನ ದೇವನೊಡನೆ ನಾಲಕರ್ಣಿಕಾ ಪ್ರದೇಶದಲ್ಲಿ ಶಿವನ ಆಸನದಲ್ಲಿ ಬರೆಯಬೇಕು.

**ಸೂರ್ಯ ಸೋಮಾಗ್ನಿ ಸಂಬಂಧಾ ತ್ಪ್ರಣವಾಖ್ಯಂ ಶಿವಾತ್ಮಕಂ ।**
**ಪುರುಷಂ ವಿನ್ಯಸೇದ್ವಕ್ತ್ರಂ ಪೂರ್ವೇ ಪತ್ರೇರವಿ ಪ್ರಭಂ ॥೯॥**
**ಅಘೋರಂ ದಕ್ಷಿಣೇ ಪತ್ರೇ ನೀಲಾಂಜನ ಚಯೋಪಮಂ ।**
**ಉತ್ತರೇ ವಾಮ ದೇವಾಖ್ಯಂ ಜಪಾ ಕುಸುಮ ಸನ್ನಿಭಂ ॥೧೦॥**
**ಸದ್ಯಂ ಪಶ್ಚಿಮ ಪತ್ರೇ ತು ಗೋಕ್ಷೀರ ಧವಲಂ ನ್ಯಸೇತ್ ।**
**ಈಶಾನಂ ಕರ್ಣಿಕಾಯಾಂ ತು ಶುದ್ಧ ಸ್ಫಟಿಕ ಸನ್ನಿಭಂ ॥೧೧॥**
**ಚಂದ್ರಮಂಡಲ ಸಂಕಾಶಂ ಹೃದಯಾಯೇತಿ ಮಂತ್ರತಃ ।**
**ವಾಹ್ನೇಯೇ ರುದ್ರದಿಗ್ಭಾಗೇ ಶಿರಸೇ ಧೂಮ್ರವರ್ಚಸೇ ॥೧೨॥**
**ಶಿಖಾಯೈ ಚ ನಮಶ್ಚೇತಿ ರಕ್ತಾಭೇ ನೈರ್ಋತೇ ದಲೇ ।**
**ಕವಚಾಯಾಂಜನಾಭಾಯ ಇತಿ ವಾಯುದಲೇ ನ್ಯಸೇತ್ ॥೧೩॥**

---

೯. ಸೂರ್ಯ, ಸೋಮ, ಅಗ್ನಿಗಳ ಸಂಬಂಧದ ದೆಸೆಯಿಂದ ಪ್ರಣವ ದಿಂದ ಪ್ರತಿಪಾದ್ಯನಾದ, ಸೂರ್ಯನಂತೆ ತೇಜಸ್ಸುಳ್ಳ, ಮುಖ್ಯನಾದ ಶಿವ ಸ್ವರೂಪನಾದ ತತ್ಪುರುಷನನ್ನು ಪೂರ್ವದಳದಲ್ಲಿ ಬರೆದು ಧ್ಯಾನಿಸಬೇಕು.

೧೦-೧೧. ಕಪ್ಪಾದ ಕಾಡಿಗೆಯ ಬೆಟ್ಟಕ್ಕೆ ಸದೃಶವಾದ ಕಾಂತಿಯುಳ್ಳ ಅಘೋರ ಮೂರ್ತಿಯನ್ನು ದಕ್ಷಿಣ ದಳದಲ್ಲೂ, ದಾಸವಾಳದ ಹುವ್ವಿಗೆ ಸದೃಶವಾದ ಕಾಂತಿಯುಳ್ಳ ವಾಮದೇವ ಮೂರ್ತಿಯನ್ನು ಉತ್ತರ ದಲ ದಲ್ಲೂ, ಹಸುವಿನ ಹಾಲಿನಂತೆ ಶುಭ್ರನಾಗಿರುವ ಸದ್ಯೋಜಾತ ಮೂರ್ತಿ ಯನ್ನು ಪಶ್ಚಿಮದಲದಲ್ಲೂ, ಪರಿಶುದ್ಧವಾದ ಸ್ಫಟಿಕದಂತಿರುವ ಈಶಾನ ಮೂರ್ತಿಯನ್ನು ನಾಲ ಪ್ರದೇಶದಲ್ಲೂ ಸ್ಥಾಪಿಸಬೇಕು. ಈ ರೀತಿಯಲ್ಲಿ ಆಯಾಯಾ ಮೂರ್ತಿಗಳನ್ನು ಧ್ಯಾನಿಸಬೇಕು. (ಎಂದರೆ ಆಯಾ ಪತ್ರ ದಳಗಳಲ್ಲಿ ಆಯಾ ಈಶ್ವರಾನನಗಳನ್ನು ಆಯಾ ವರ್ಣಯುಕ್ತವಾಗಿರುವಂತೆ ಭಾವನೆಗಳಿಂದ ಧ್ಯಾನಮಾಡತಕ್ಕದ್ದು. ಎಂದು ತಾತ್ಪರ್ಯಾರ್ಥವು.)

೧೨-೧೪. ವಿದಿಕ್ಕುಗಳಲ್ಲಿರುವ ದಳಗಳನ್ನು ಅನುಸರಿಸಿ ಹೃದಯಾದಿ ನ್ಯಾಸಗಳನ್ನು ಹೇಳುತ್ತಾರೆ. ಚಂದ್ರಮಂಡಲದಂತೆ ಆಹ್ಲಾದಕರವಾದ ಸ್ವಭಾವವುಳ್ಳ ಪರಮಶಿವರೂಪನಾದ ದೇವನನ್ನು ಹೃದಯಾಯ ಎಂಬ

**ಅಸ್ತ್ರಾಯಾಗ್ನಿ ಶಿಖಾಭಾಯ ಇತಿ ದಿಕ್ಷ್ನು ಪ್ರವಿನ್ಯಸೇತ್ ।**
**ನೇತ್ರೇಭ್ಯಶ್ಚೇತಿ ಚೈಶಾನ್ಯಾಂ ಪಿಂಗಲೇಭ್ಯಃ ಪ್ರವಿನ್ಯಸೇತ್ ॥೧೪॥**

**ಶಿವಂ ಸದಾಶಿವಂ ದೇವಂ ಮಹೇಶ್ವರ ಮತಃ ಪರಂ ।**
**ರುದ್ರಂ ವಿಷ್ಣುಂ ವಿರಿಂಚಿಂ ಚ ಸೃಷ್ಟಿನ್ಯಾಯೇನ ಭಾವಯೇತ್ ॥೧೫॥**

**ಶಿವಾಯ ರುದ್ರರೂಪಾಯ ಶಾಂತ್ಯತೀತಾಯ ಶಂಭವೇ ।**
**ಶಾಂತಾಯ ಶಾಂತದೈತ್ಯಾಯ ನಮಶ್ಚಂದ್ರಮಸೇ ತಥಾ ॥೧೬॥**

**ವೇದ್ಯಾಯ ವಿದ್ಯಾಽಽಧಾರಾಯ ವಹ್ನಯೇ ವಹ್ನಿ ವರ್ಚಸೇ ।**
**ಕಾಲಾಯೈ ಚ ಪ್ರತಿಷ್ಠಾಯೈ ತಾರಕಾಯಾಂತಕಾಯ ಚ ॥೧೭॥**

**ನಿವೃತ್ತ್ಯೈ ಧನ ದೇವಾಯ ಧಾರಾಯೈ ಧಾರಣಾಯ ಚ ।**
**ಮಂತ್ರೈರೇತೈರ್ಮಹಾಭೂತ ವಿಗ್ರಹಂ ಚ ಸದಾಶಿವಂ ॥೧೮॥**

---

ಮಂತ್ರದಿಂದ ಆಗ್ನೇಯ ಮತ್ತು ಈಶಾನ್ಯ ದಿಕ್ಕುಗಳಲ್ಲೂ, ಧೂಮ್ರ ವರ್ಚಸನನ್ನು ಶಿರಸೇಸ್ವಾಹಾ ಎಂದೂ,ಕೆಂಪುಕಾಂತಿಯುಳ್ಳ ನೈರ್ಋತ ದಿಕ್ಕಿನದಳದಲ್ಲಿ ಶಿವಾಯೈ ನಮಃ ಎಂದೂ, ಅಂಜನಾಭಾಯ (ಕಪ್ಪು ಬಣ್ಣವುಳ್ಳ ದೇವನಿಗೆ) ಎಂದೂ, ಕವಚಾಯ ಎಂಬ ಮಂತ್ರದಿಂದ ವಾಯುವ್ಯ ದಿಕ್ಕಿನಲ್ಲಿರುವ ದಳದಲ್ಲೂ, ಬೆಂಕಿಯ ಜ್ವಾಲೆಯ ತುದಿಯಂತಿರುವ ದೇವನಿಗೆ ಎಂದು ಅಸ್ತ್ರಾಯ ಎಂಬ ಮಂತ್ರದಿಂದಲೂ ನ್ಯಾಸಗಳನ್ನು ಮಾಡಬೇಕು. ಹಾಗೆಯೇ ನೇತ್ರೇಭ್ಯಃ ಮತ್ತು ಪಿಂಗಳೇಭ್ಯಃ ಎಂಬ ಮಂತ್ರಗಳಿಂದ ಈಶಾನ್ಯ ದಿಕ್ಕಿನಲ್ಲಿರುವ ದಳಗಳಲ್ಲೂ ನ್ಯಾಸಮಾಡಿ ದೇವನನ್ನು ಧ್ಯಾನಿಸಬೇಕು

೧೫. ಸೃಷ್ಟಿ ಸ್ಥಿತಿ ಲಯಕ್ರಮವನ್ನನುಸರಿಸಿ ಶಿವನನ್ನು ರುದ್ರನನ್ನಾಗಿಯೂ, (ಲಯಕರ್ತೃವನ್ನಾಗಿಯೂ,) ಸದಾ ಶಿವನನ್ನು ಸ್ಥಿತಿ ಕರ್ತೃವನ್ನಾಗಿ ವಿಷ್ಣುವಿನ ಭಾವನೆಯಿಂದಲೂ, ಮಹೇಶ್ವರನನ್ನು ಬ್ರಹ್ಮನೆಂಬ ಸೃಷ್ಟಿಕರ್ತೃವೆಂಬ ಭಾವನೆಯಿಂದಲೂ, ಧ್ಯಾನವನ್ನು ಮಾಡಬೇಕು.

೧೬-೧೮. ಆಕಾಶ ವಾಯು ಅಗ್ನಿ ನೀರು ಭೂಮಿ ಎಂಬ ಪಂಚ ಮಹಾ ಭೂತಸ್ವರೂಪನಾದ ಶಿವನನ್ನುಕ್ರಮವಾಗಿ ೧ **ಶಿವಾಯನಮಃ,**

ಈಶಾನ ಮುಕುಟಂ ದೇವಂ ಪುರುಷಾಸ್ಯಂ ಪುರಾತನಂ ।
ಅಘೋರಹೃದಯಂ ಹೃಷ್ಟಂ ವಾಮಗುಹ್ಯಂ ಮಹೇಶ್ವರಂ ॥೧೯॥
ಸದ್ಯಮೂರ್ತಿಂ ಸ್ಮರೇದ್ದೇವಂ ಸದಸದ್ವ್ಯಕ್ತಿ ಕಾರಣಂ।
ಪಂಚವಕ್ತ್ರಂ ದಶಭುಜಮಷ್ಟತ್ರಿಂಶತ್ಕಲಾಮಯಂ ॥೨೦॥
ಸದ್ಯಮಷ್ಟ ಪ್ರಕಾರೇಣ ಪ್ರಭಿದ್ಯ ಚ ಕಲಾಮಯಂ ।
ವಾಮಂ ತ್ರಯೋದಶವಿಧೈರ್ವಿಭಿದ್ಯ ವಿತತಂ ಪ್ರಭುಂ ॥೨೧॥
ಅಘೋರ ಮಷ್ಟಧಾ ಕೃತ್ವಾ ಕಲಾರೂಪೇಣ ಸಂಸ್ಥಿತಂ।
ಪುರುಷಂಚ ಚತುರ್ಧಾ ವೈ ವಿಭಜ್ಯ ಚ ಕಲಾಮಯಂ ॥೨೨॥

---

ರುದ್ರರೂಪಾಯ ನಮಃ ಶಾಂತ್ಯತೀತಾಯ ನಮಃ ಶಂಭವೇ ನಮಃ ೨ ಶಾಂತಾಯ ನಮಃ ಶಾಂತದೈತ್ಯಾಯ ನಮಃ ಚಂದ್ರಮಸೇ ನಮಃ ೩ ವೇದ್ಯಾಯ ನಮಃ ವಿದ್ಯಾಧಾರಾಯ ನಮಃ ವಹ್ನಯೇ ನಮಃ ವಹ್ನಿವರ್ಚಸೇ ನಮಃ ೪ ಕಾಲಾಯೈ ನಮಃ ಪ್ರತಿಷ್ಠಾಯೈ ನಮಃ ತಾರಕಾಯ ನಮಃ ಅಂತಕಾಯ ನಮಃ ೫ ನಿವೃತ್ತ್ಯೈ ನಮಃ ಧನದೇವಾಯ ನಮಃ ಧಾರಾಯೈ ನಮಃ ಧಾರಣಾಯ ನಮಃ ಎಂಬ ಐದು ಮಂತ್ರಗಳಿಂದ ಪೂಜಿಸಬೇಕು.

೧೯–೨೦. ಈಶಾನನೇ ಕಿರೀಟವು, ತತ್ಪುರುಷನೇ ಮುಖವು, ಅಘೋರನೇ ಹೃದಯವು, ವಾಮದೇವನೇ ಗುಹ್ಯವು, ಸದ್ಯೋಜಾತನೇ ಮಿಕ್ಕ ಶರೀರ ಭಾವವು. ಈ ಪಂಚ ಬ್ರಹ್ಮಸ್ವರೂಪನಾದ ಮೂರ್ತಿಯೇ ಸದಸದ್ರೂಪವಾದ ಆತ್ಮ ಪ್ರಪಂಚಗಳ ಪ್ರಕಟನೆಗೆ ಮುಖ್ಯ ಕಾರಣವಾಗಿದೆ. ಈ ದೇವನು ಐದು ಮುಖಗಳು ಹತ್ತು ತೋಳುಗಳು ಉಳ್ಳವನಾಗಿ ಮೂವತ್ತೆಂಟು ಕಲಾಸ್ವರೂಪನಾಗಿರುವನು.

೨೧–೨೨. ಈ ಪಂಚಬ್ರಹ್ಮಮೂರ್ತಿಯ ಮೂವತ್ತೆಂಟು ಕಲೆಗಳೆಂತೆಂದರೆ, ಸದ್ಯೋಜಾತನಿಗೆ ಎಂಟು, ವಾಮದೇವನಿಗೆ ಹದಿಮೂರು, ಅಘೋರನಿಗೆ ಎಂಟು, ತತ್ಪುರುಷನಿಗೆ ನಾಲ್ಕು, ಈಶಾನನಿಗೆ ಐದು, ಈ ಪ್ರಕಾರವಾಗಿರುವುದು. ಈ ಕಲಾವಿಭಾಗ ಕ್ರಮವನ್ನು ಶಿವರಹಸ್ಯದ ದಶಮಾಂಶದಲ್ಲಿ ವಿಸ್ತಾರವಾಗಿ ಹೇಳಿರುವುದು.

ಈಶಾನಂ ಪಂಚಧಾ ಕೃತ್ವಾ ಪಂಚಮೂರ್ತ್ಯಾ ವ್ಯವಸ್ಥಿತಂ ।
ಹಂಸ ಹಂಸೇತಿ ಮಂತ್ರೇಣ ಶಿವಭಕ್ತ್ಯಾ ಸಮನ್ವಿತಂ ॥೨೩॥

ಓಂಕಾರ ಮಾತ್ರ ಮೋಂಕಾರ ಮಕಾರಂ ಸಮರೂಪಿಣಂ ।
ಆ ಈ ಊ ಏ ತಥಾ ಅಂಬಾನು ಕ್ರಮೇಣಾತ್ಮ ರೂಪಿಣಂ ॥೨೪॥

ಪ್ರಧಾನ ಸಹಿತಂ ದೇವಂ ಪ್ರಲಯೋತ್ಪತ್ತಿವರ್ಜಿತಂ ।
ಅಣೋರಣೀಯಾಂಸ ಮಜಂ ಮಹತೋಽಪಿ ಮಹತ್ತಮಂ ॥೨೫॥

ಊರ್ಧ್ವರೇತಸ ಮೀಶಾನಂ ವಿರೂಪಾಕ್ಷ ಮುಮಾಪತಿಂ ।
ಸಹಸ್ರ ಶಿರಸಂ ದೇವಂ ಸಹಸ್ರಾಕ್ಷಂ ಸನಾತನಂ ॥೨೬॥

---

೨೩–೨೪. ಆ ಶಿವನನ್ನು ''ಹಂಸಹಂಸಾಯ ವಿದ್ಮಹೇ ಪರಮಹಂಸಾಯ ಧೀಮಹಿ ತನ್ನೋ ಹಂಸಃಪ್ರಚೋದಯಾತ್'' ಎಂಬ ಹಂಸಗಾಯತ್ರೀಮಂತ್ರದಿಂದ ಭಕ್ತಿಯಿಂದ ಧ್ಯಾನಮಾಡಬೇಕು. ಆ ಶಿವನು, ಪ್ರಣವ ಮಂತ್ರವಾದ ಓಂಕಾರ ಸ್ವರೂಪನು. ಆ ಈ ಊ ಏ ಎಂಬ ನಾಲ್ಕು ವರ್ಣಗಳು ಚತುಷ್ಕೋಶರೂಪ ದೇವತಾವಾಚಕಗಳು. ಏ ಎಂಬ ಅಕ್ಷರವು ಅಂಬಾವಾಚಕವು. ಕ್ರಮವಾಗಿ ಓಂಕಾರ ಸಹಿತವಾದ ಐದು ಅಕ್ಷರಗಳು ದೇವೀ ಗಣೇಶ ಸೂರ್ಯ ವಿಷ್ಣು ಶಿವ ಎಂಬ ಪಂಚಾಯತನ ದೇವತಾ ವಾಚಕಗಳಾಗಿ ಆ ದೇವತಾ ಸ್ವರೂಪವಾದುವುಗಳು.

೨೫–೨೬. ಶಿವನು ಪ್ರಕೃತಿ ಸಹಿತನಾದವನು, ಉತ್ಪತ್ತಿ ನಾಶಗಳಿಲ್ಲದವನು, ಅತ್ಯಂತ ಸೂಕ್ಷ್ಮ ಬುದ್ಧಿಯುಳ್ಳವರಿಗೂ ತಿಳಿಯಲಸಾಧ್ಯನಾದುದರಿಂದ ಅತಿ ಸೂಕ್ಷ್ಮನು, ಆಕಾಶಕ್ಕಿಂತಲೂ ವಿಸ್ತಾರವಾದವನು, ಮೇಲಕ್ಕೆ ಹರಡುವ ವೀರ್ಯದ ತೇಜಸ್ಸುಳ್ಳವನು, ಸಮಸ್ತಕ್ಕೂ ಒಡೆಯನು, ವಿಷಮವಾದ ಮೂರು ಕಣ್ಣುಳ್ಳವನು, ಉಮಾದೇವಿಯ ಪತಿಯು. ಇವನಿಗೆ ಅನೇಕ ತಲೆಗಳು ಕಣ್ಣುಗಳು ಕೈಗಳು ಕಾಲುಗಳು ಇರುವುವು. ಇವನು ಓಂಕಾರಸ್ವರೂಪನಾದವನು.

ಸಹಸ್ರ ಹಸ್ತಚರಣಂ ನಾದಾಂತಂ ನಾದ ವಿಗ್ರಹಂ ।
ಖದ್ಯೋತ ಸದೃಶಾಕಾರಂ ಚಂದ್ರರೇಖಾಕೃತಿಂ ಪ್ರಭುಂ ॥೨೭॥

ದ್ವಾದಶಾಂತೇ ಭ್ರುವೋರ್ಮಧ್ಯೇ ತಾಲುಮಧ್ಯೇ ಗಲೇ ಕ್ರಮಾತ್ ।
ಹೃದ್ದೇಶೇಽವಸ್ಥಿತಂ ದೇವಂ ಸ್ವಾನಂದ ಮಮೃತಂ ಶಿವಂ ॥೨೮॥

ವಿದ್ಯುದ್ವಲಯಸಂಕಾಶಂ ವಿದ್ಯುತ್ಕೋಟಿಸಮ ಪ್ರಭಂ ।
ಶ್ಯಾಮಂ ರಕ್ತಂ ಕಲಾಕಾರಂ ಶಕ್ತಿತ್ರಯ ಕೃತಾಸನಂ ॥೨೯॥

ಸದಾಶಿವಂ ಸ್ಮರೇದ್ದೇವಂ ತತ್ವತ್ರಯ ಸಮನ್ವಿತಂ ।
ವಿದ್ಯಾಮೂರ್ತಿ ಮಯಂ ದೇವಂ ಪೂಜಯೇಚ್ಚ ಯಥಾಕ್ರಮಂ ॥

ಲೋಕ ಪಾಲಾಂಸ್ತಥಾಽಸ್ತ್ರೇಣ ಪೂರ್ವಾದ್ಯಾನ್ಪೂಜಯೇತ್ಪೃಥಕ್।
ಚರುಂ ಚ ವಿಧಿನಾಽಽಸಾದ್ಯ ಶಿವಾಯ ವಿನಿವೇದಯೇತ್ ॥೩೦॥

---

೨೭–೨೯. ಸೂರ್ಯನಿಗೆ ಸಮಾನವಾದ ನಾದದ ಆಕಾರವುಳ್ಳವನು. ನಾದಾಂತ ರೂಪನು. ಬಾಲಚಂದ್ರನನ್ನು ಧರಿಸಿದವನು. ಇಂತಹ ಶಿವ ನನ್ನು ನೆತ್ತಿಯಲ್ಲಿರುವ ಸಹಸ್ರಾರು ಚಕ್ರದಲ್ಲಿಯೂ ಭ್ರೂ ಮಧ್ಯದಲ್ಲಿಯೂ ಕಂಠದಲ್ಲಿಯೂ ಹೃದಯಾಕಾಶದಲ್ಲಿಯೂ ಧ್ಯಾನಿಸಬೇಕು. ಶಿವನು ಆನಂದ ಸ್ವರೂಪನು, ಕೋಟಿ ಮಿಂಚುಗಳಿಗೆ ಸಮವಾದ ಕಾಂತಿಯುಳ್ಳವನು, ಮೇಘವರ್ಣ ಮತ್ತು ಕೆಂಪು ಬಣ್ಣಗಳಿಂದಕೂಡಿದವನು, ಗಂಭೀರವಾದ ಆಕಾರಉಳ್ಳವನು, ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳೇ ಆಧಾರವಾಗಿ ಉಳ್ಳವನು.

೩೦. ಜ್ಞಾನಸ್ವರೂಪನೂ, ಯಾವಾಗಲೂ ಮಂಗಳ ಸ್ವರೂಪನೂ, ಆತ್ಮ ಪ್ರಕೃತಿ ಮಹತ್ತತ್ವಗಳಿಂದ ಕೂಡಿದವನೂ, ಆದ ದೇವನನ್ನು ಕ್ರಮ ವಾಗಿ ಧ್ಯಾನಮಾಡಿ ಪೂಜಿಸಬೇಕು.

೩೧–೩೨ ಪೂರ್ವ ಮೊದಲಾದ ದಿಕ್ಕುಗಳ ಅಧಿಪತಿಗಳನ್ನು ಅಸ್ತ್ರ ಮಂತ್ರವಾದ ಫಟಶಬ್ದಾಂತವಾಗಿ ಬೇರೆಬೇರೆಯಾಗಿ ಪೂಜಿಸಿ, ವಿಧಿಗನುಸಾರ ವಾಗಿ ಚರುವನ್ನು ಪಚನಮಾಡಿ ಅರ್ಧವನ್ನು ಶಿವನಿಗೆ ನಿವೇದನಮಾಡಿ, ಮಿಕ್ಕ

**ಅರ್ಘಂ ಶಿವಾಯ ದತ್ವೈವ ಶೇಷಾರ್ಧೇನತು ಹೋಮಯೇತ್ ।**
**ಅಘೋರೇಣಾಥ ಶಿಷ್ಯಾಯ ದಾಪಯೇದ್ಭೋಕ್ತು ಮುತ್ತಮಂ ॥**
**ಉಪಸ್ಪೃಶ್ಯ ಶುಚಿ ರ್ಭೂತ್ವಾ ಪುರುಷಂ ವಿಧಿನಾ ಯಜೇತ್ ।**
**ಪಂಚಗವ್ಯಂ ತತಃ ಪ್ರಾಶ್ಯ ಈಶಾನೇನಾಭಿ ಮಂತ್ರಿತಂ ॥೩೩॥**
**ವಾಮದೇವೇನ ಭಸ್ಮಾಂಗೀ ಭಸ್ಮನೋದ್ಧೂಲಯೇತ್ಕ್ರಮಾತ್ ।**
**ಕರ್ಣಯೋಶ್ಚ ಜಪೇದ್ದೇವೀಂ ಗಾಯತ್ರೀಂ ರುದ್ರದೇವತಾಂ ॥೩೪॥**
**ಸ ಸೂತ್ರಂ ಸಪಿಧಾನಂ ಚ ವಸ್ತ್ರಯುಗ್ಮೇನ ವೇಷ್ಟಿತಂ ।**
**ತತ್ಪೂರ್ವಂ ಹೇಮರತ್ನಾಢ್ಯೈರ್ವಾ ಸಿತಂ ವೈ ಹಿರಣ್ಮಯಂ ॥೩೫॥**
**ಕಲಶಾನ್ವಿನ್ಯಸೇತ್ಪಂಚ ಪಂಚಭಿರ್ಬ್ರಾಹ್ಮಣೈಸ್ತತಃ ।**
**ಹೋಮಂ ಚ ಚರುಣಾ ಕುರ್ಯಾದ್ಯಥಾವಿಭವವಿಸ್ತರಂ ॥೩೬॥**

---

ಅರ್ಧದಲ್ಲಿ ಅಘೋರಮಂತ್ರದಿಂದ ಹೋಮವನ್ನುಮಾಡಿ ಮಿಕ್ಕಶೇಷ ವನ್ನು ಶಿಷ್ಯನಿಗೆ ಭೋಜನಾರ್ಥವಾಗಿ ಕೊಡಬೇಕು.

೩೩-೩೪. ಬಳಿಕ ಆಚಮನವನ್ನುಮಾಡಿ ಶುಚಿಯಾಗಿ ತತ್ಪುರುಷ ಮೂರ್ತಿಯನ್ನು ಪೂಜಿಸಿ ಈಶಾನಮಂತ್ರದಿಂದ ಅಭಿಮಂತ್ರಿತವಾದ ಪಂಚಗವ್ಯವನ್ನು ಶಿಷ್ಯನಿಗೆ ಪ್ರಾಶನಮಾಡಿಸಿ ವಾಮದೇವ ಮಂತ್ರದಿಂದ ಅವನ ಅಂಗಗಳಿಗೆ ಭಸ್ಮವನ್ನು ಬಳಿದು ಅವನ ಕಿವಿಗಳಲ್ಲಿ ರುದ್ರಗಾಯತ್ರೀ ಮಂತ್ರವನ್ನು ಉಪದೇಶಮಾಡಬೇಕು. "ತತ್ಪುರುಷಾಯವಿದ್ಮಹೇ" ಇತ್ಯಾದಿಯಾದುದೇ ರುದ್ರಗಾಯತ್ರೀ ಮಂತ್ರವು.

೩೫-೩೬. ರುದ್ರಗಾಯತ್ರೀ ಮಂತ್ರವನ್ನು ಉಪದೇಶಮಾಡುವು ದಕ್ಕೆ ಮುಂಚಿತವಾಗಿಯೇ ಸುವರ್ಣಮಯವಾದ ದಾರವನ್ನು ಸುತ್ತಿ ಮುಚ್ಚಳವನ್ನು ಮುಚ್ಚಿ ಎರಡುವಸ್ತ್ರಗಳಿಂದ ಅಲಂಕರಿಸಿ ಸುವರ್ಣವನ್ನೂ ಪಂಚರತ್ನಗಳನ್ನೂ ಹಾಕಿದ ಐದು ಕಲಶಗಳನ್ನಿಟ್ಟು ಐದು ಜನ ಬ್ರಾಹ್ಮಣ ರಿಂದಕೂಡಿ ಆ ಕಲಶಗಳಲ್ಲಿ ಪಂಚಬ್ರಹ್ಮರನ್ನು ಆವಾಹನೆಮಾಡಿ ವಿಭವಾ ನುಸಾರವಾಗಿ ಚರುಹೋಮವನ್ನು ಮಾಡಬೇಕು.

ಶಿಷ್ಯಂ ಚ ವಾಸಯೇದ್ಭಕ್ತಂ ದಕ್ಷಿಣೇ ಮಂಡಲಸ್ಯ ತು ।
ದರ್ಭಶಯ್ಯಾಸಮಾರೂಢಂ ಶಿವಧ್ಯಾನ ಪರಾಯಣಂ ॥೩೭॥

ಅಘೋರೇಣ ಯಥಾನ್ಯಾಯಮಷ್ಟೋತ್ತರ ಶತಂ ಪುನಃ ।
ಘೃತೇನ ಹುತ್ವಾ ದುಃಸ್ವಪ್ನಂ ಪ್ರಭಾತೇ ಶೋಧಯೇನ್ಮಲಂ ॥೩೮॥

ಏವಂ ಚೋಪೋಷಿತಂ ಶಿಷ್ಯಂ ಸ್ನಾತಂ ಭೂಷಿತ ವಿಗ್ರಹಂ ।
ನವ ವಸ್ತ್ರೋತ್ತರೀಯಂ ಚ ಸೋಷ್ಣೀಷಂ ಕೃತಮಂಗಳಂ ॥೩೯॥

ದುಕೂಲಾದ್ಯೇನ ವಸ್ತ್ರೇಣ ನೇತ್ರಂ ಬದ್ಧ್ವಾ ಪ್ರವೇಶಯೇತ್ ।
ಸುವರ್ಣ ಪುಷ್ಪಸಂಮಿಶ್ರಂ ಯಥಾ ವಿಭವವಿಸ್ತರಂ ॥೪೦॥

---

೩೭–೩೮. ಪೂಜಾಮಂಡಲದ ದಕ್ಷಿಣದಿಕ್ಕಿನಲ್ಲಿ ದರ್ಭೆಯ ಹಾಸಿಗೆಯನ್ನುಮಾಡಿ ಭಕ್ತನಾದ ಶಿಷ್ಯನು ಶಿವನನ್ನು ಧ್ಯಾನಿಸುತ್ತ ಮಲಗಿರುವಂತೆ ಮಾಡಬೇಕು. ಮತ್ತೆ ಪ್ರಾತಃಕಾಲದಲ್ಲಿ ಅಘೋರಮಂತ್ರದಿಂದ ನೂರೆಂಟು ಹೋಮವನ್ನು ತುಪ್ಪದಿಂದ ಮಾಡಿ ದುಃಸ್ವಪ್ನರೂಪವಾದ ಪಾಪವನ್ನು ನಿವಾರಣೆ ಮಾಡಬೇಕು. ಈ ವಿಷಯದಲ್ಲಿ ಆಗ್ನೇಯ ಪುರಾಣದಲ್ಲಿ ಗಜಾಶ್ವಾರೋಹಣೇ ಸ್ವಪ್ನೇ ಶುಭಂ ಶುಕ್ಲಾಂ ಶುಕಾದಿಕಂ। ತೈಲಾಭ್ಯಂಗಾದಿಕಂ ಹೀನಂ ಹೋಮೋಽ ಘೋರೇಣ ಶಾಂತಯೇ ॥" ಎಂದು ಹೇಳಿರುವುದು.

೩೯–೪೦. ಹಿಂದೆ ಹೇಳಿದಂತೆ ಉಪವಾಸವನ್ನುಮಾಡಿದ ಶಿಷ್ಯನಿಗೆ ಮಂಗಳ ಸ್ನಾನವನ್ನುಮಾಡಿಸಿ ಹೊಸದಾದ ವಸ್ತ್ರ ಉತ್ತರೀಯ ಉಷ್ಣೀಷ ಇವುಗಳಿಂದ ಅಲಂಕರಿಸಿ ರೇಷ್ಮೆವಸ್ತ್ರದಿಂದ ಕಣ್ಣುಗಳನ್ನು ಕಟ್ಟಿ ಕರೆದುಕೊಂಡುಬರಬೇಕು. ಆ ಮೇಲೆ ಅವನ ವಿಭವಾನುಸಾರವಾಗಿ ಸುವರ್ಣ ಪುಷ್ಪದೊಡನೆ ಕೂಡಿದ ಪುಷ್ಪಾಂಜಲಿಯನ್ನು ಈಶಾನಃ ಸರ್ವವಿದ್ಯಾನಾಂ ಎಂಬ ಮಂತ್ರದಿಂದ ಸ್ವಾಮಿಯಾದ ಶಿವನಿಗೆ ಸಮರ್ಪಿಸಬೇಕು.

ಈಶಾನೇನ ಚ ಮಂತ್ರೇಣ ಕುರ್ಯಾತ್ಪುಷ್ಪಾಂಜಲಿಂ ಪ್ರಭೋಃ ।
ಪ್ರದಕ್ಷಿಣ ತ್ರಯಂ ಕೃತ್ವಾ ರುದ್ರಾಧ್ಯಾಯೇನ ವಾ ಪುನಃ ॥೪೧॥
ಕೇವಲಂ ಪ್ರಣವೇನಾಥ ಶಿವಧ್ಯಾನ ಪರಾಯಣಃ ।
ಧ್ಯಾತ್ವಾ ತು ದೇವದೇವೇಶ ಮೀಶಾನೇ ಸಂಕ್ಷಿಪೇತ್ಸ್ವಯಂ ॥೪೨॥
ಯಸ್ಮಿನ್ಮಂತ್ರೇ ಪತೇತ್ಪುಷ್ಪಂ ತನ್ಮಂತ್ರಸ್ತಸ್ಯ ಸಿಧ್ಯತಿ ।
ಶಿವಾಂ ಭಸಾ ತು ಸಂಸ್ಪೃಶ್ಯ ಅಘೋರೇಣ ಚ ಭಸ್ಮನಾ ॥೪೩॥
ಶಿಷ್ಯಮೂರ್ಧನಿ ವಿನ್ಯಸ್ಯ ಗಂಧಾದ್ಯೈಃ ಶಿಷ್ಯಮರ್ಚಯೇತ್ ।
ವಾರುಣಂ ಪರಮಂ ಶ್ರೇಷ್ಠಂ ದ್ವಾರಂ ವೈ ಸರ್ವ ವರ್ಣಿನಾಂ ॥
ಕ್ಷತ್ರಿಯಾಣಾಂ ವಿಶೇಷೇಣ ದ್ವಾರಂ ವೈ ಪಶ್ಚಿಮಂ ಸ್ಮೃತಂ ।
ನೇತ್ರಾವರಣ ಮುನ್ಮುಚ್ಯ ಮಂಡಲಂ ದರ್ಶಯೇತ್ತತಃ ॥೪೫॥

---

೪೧—೪೨. ಪುನಃ ಶಿಷ್ಯನು ಮೂರು ಪ್ರದಕ್ಷಿಣೆಗಳನ್ನುಮಾಡಿ ರುದ್ರಾಧ್ಯಾಯವನ್ನಾಗಲಿ ಕೇವಲ ಪ್ರಣವವನ್ನಾಗಲಿ ಉಚ್ಚರಿಸುತ್ತಾ ದೇವ ದೇವನಾದ ಶಿವನನ್ನು ಧ್ಯಾನಿಸುತ್ತಾ ಈಶಾನ್ಯ ದಿಕ್ಕಿನಲ್ಲಿ ಕುಳಿತುಕೊಳ್ಳಬೇಕು.

೪೩. ಯಾವ ಮಂತ್ರವನ್ನು ಹೇಳುವಾಗ ಶಿವನಿಗೆ ಪೂಜಿಸಿದಹೂವು ಬೀಳುವುದೋ ಆ ಮಂತ್ರವು ಆ ಶಿಷ್ಯನಿಗೆ ಸಿದ್ಧಿಸುವುದು. ಆ ಮಂತ್ರೋಪದೇಶಕ್ಕಾಗಿ ಮಂಗಳಕರವಾದ ನೀರಿನಲ್ಲಿ ಅಘೋರ ಮಂತ್ರವನ್ನು ಹೇಳುತ್ತ ಭಸ್ಮವನ್ನು ಕಲಸಿ ಗುರುವು ತನ್ನ ಕೈಯನ್ನು ಶಿಷ್ಯನ ನೆತ್ತಿಯ ಮೇಲಿಟ್ಟು ಗಂಧವೇ ಮುಂತಾದ ಪೂಜಾ ದ್ರವ್ಯಗಳಿಂದ ಶಿಷ್ಯನನ್ನು ಪೂಜಿಸಬೇಕು. ಈ ವಿಷಯದಲ್ಲಿ ಅಗ್ನಿ ಪುರಾಣದಲ್ಲಿ "ಪೂರ್ವಾನನಸ್ಯ ಶಿಷ್ಯಸ್ಯ ಮೂಲಮಂತ್ರೇಣ ಮಸ್ತಕೇ। ಶಿವಹಸ್ತಃ ಪ್ರದಾತವ್ಯೋ ರುದ್ರೇಶ ಪದದಾಯಕಃ" ಎಂದು ಹೇಳಿರುವುದು.

೪೪—೪೫. ಮಂತ್ರಗ್ರಹಣಕ್ಕಾಗಿ ಮಂಡಲವಿರುವ ಸ್ಥಳಕ್ಕೆ ಪ್ರವೇಶಿಸಲು ಎಲ್ಲ ವರ್ಣದವರಿಗೂ ಪಶ್ಚಿಮದಿಕ್ಕಿನ ಬಾಗಿಲೇ ಶ್ರೇಷ್ಟವಾದುದು.

**ಕುಶಾಸನೇ ತು ಸಂಸ್ಥಾಪ್ಯ ದಕ್ಷಿಣಾಮೂರ್ತಿಮಾಸ್ಥಿತಃ ।**
**ತತ್ತ್ವ ಶುದ್ಧಿಂ ತತಃ ಕುರ್ಯಾತ್ಪಂಚ ತತ್ತ್ವಪ್ರಕಾರತಃ ॥೪೬॥**
**ನಿವೃತ್ತ್ಯಾ ರುದ್ರಪರ್ಯಂತಂ ಮಂಡಮಂಡೋದ್ಭವಾತ್ಮಜ ।**
**ಪ್ರತಿಷ್ಠಯಾ ತದೂರ್ಧ್ವಂ ಚ ಯಾವದವ್ಯಕ್ತ ಗೋಚರಂ ॥೪೭॥**
**ವಿಶ್ವೇಶ್ವರಾಂತಂ ವೈ ವಿದ್ಯಾ ಕಲಾ ಮಾತ್ರೇಣ ಸುವ್ರತ ।**
**ತದೂರ್ಧ್ವಮಾರ್ಗಂ ಸಂಶೋಧ್ಯ ಶಿವಭಕ್ತ್ಯಾ ಶಿವಂ ನಯೇತ್ ॥೪೮॥**
**ಸಮರ್ಚನಾಯ ತತ್ತ್ವಸ್ಯ ತಸ್ಯ ಯೋ (ಭೋ) ಗೇಶ್ವರಸ್ಯ ವೈ ।**
**ತತ್ತ್ವತ್ರಯ ಪ್ರಭೇದೇನ ಚತುರ್ಭಿರುತ ವಾ ತಥಾ ॥೪೯॥**

---

ಕ್ಷತ್ರಿಯರಿಗೆ ಪಶ್ಚಿಮದಿಕ್ಕಿನ ಬಾಗಿಲೇ ವಿಶೇಷ ಫಲದಾಯಕವಾದುದು. ಶಿಷ್ಯನನ್ನು ಪ್ರವೇಶಮಾಡಿಸಿದ ಮೇಲೆ ಕಣ್ಣಿಗೆ ಕಟ್ಟಿದ್ದ ರೇಷ್ಮೆಯ ವಸ್ತ್ರವನ್ನು ಬಿಚ್ಚಿ ಆ ಮಂಡಲದ ದರ್ಶನವನ್ನು ಮಾಡಿಸಬೇಕು.

೪೬. ಬಳಿಕ ದರ್ಭೆಯ ಆಸನದಲ್ಲಿ ಶಿಷ್ಯನನ್ನು ಕುಳ್ಳಿರಿಸಿ ದಕ್ಷಿಣಾ ಮೂರ್ತಿ ರೂಪನಾದ ಶಿವನನ್ನು ಆಶ್ರಯಿಸಿ ಪಂಚ ತತ್ತ್ವಗಳ ಮಾರ್ಗ ದಿಂದ ತತ್ತ್ವಶುದ್ಧಿಯನ್ನು ಮಾಡಬೇಕು.

೪೭–೪೮. ಎಲೈ ಸನತ್ಕುಮಾರನೇ, ಕೇಳು. ಪೃಥಿವೀ ತತ್ತ್ವವನ್ನು ಮೊದಲುಮಾಡಿಕೊಂಡು ಅಹಂಕಾರ ತತ್ತ್ವಪರ್ಯಂತವಾಗಿ ಕ್ರಮವಾಗಿ ಬ್ರಹ್ಮಾಂಡವನ್ನು ಲಯಮಾಡಿಕೊಂಡು ಆ ಅಹಂಕಾರ ತತ್ತ್ವದಿಂದ ಮುಂದೆ ಪ್ರಕೃತಿಪರ್ಯಂತವಾಗಿ ಜ್ಞಾನಕಲೆಯೊಂದರಿಂದಲೇ ಪೂರ್ಣ ವಾಗಿ ಇರುವ ವಿಶ್ವೇಶ್ವರನೆಂಬ ಪುರುಷನವರೆಗೂ ತಿಳಿದುಕೊಂಡು ಅಲ್ಲಿಂದ ಮುಂದೆ ಇಪ್ಪತ್ತಾರನೆಯ ತತ್ತ್ವವಾದ ಪರಮಶಿವನ ಮಾರ್ಗವನ್ನು ಶಿವ ನಲ್ಲಿರುವ ಭಕ್ತಿಯಿಂದಲೇ ಶೋಧನೆಮಾಡಿ ಎಂದರೆ ಆವರಣವಿಲ್ಲದಂತೆ ಮಾಡಿ ಶಿಷ್ಯನನ್ನು ತುರೀಯನಾದ ಶಿವನಲ್ಲಿ ಸೇರಿಸಬೇಕು.

೪೯. ಯೋಗೇಶ್ವರನಾದ ಇಪ್ಪತ್ತಾರನೆಯ ತತ್ತ್ವ ಸ್ವರೂಪನಾದ ಶಿವನ ಪೂಜೆಗಾಗಿ ಪ್ರಕೃತಿ ಪುರುಷ ಈಶ್ವರ ಎಂಬ ಮೂರು ತತ್ತ್ವಗಳ

**ಹೋಮ ಯೇದಂಗ ಮಂತ್ರೇಣ ಶಾಂತ್ಯತೀತಂ ಸದಾಶಿವಂ ।**
**ಸದ್ಯಾದಿಭಿಸ್ತು ಶಾಂತ್ಯಂ ತಂ ಚತುರ್ಭಿಃ ಕಲಯಾ ಪೃಥಕ್ ॥೫೦॥**
**ಶ್ಯಾಂತ್ಯತೀತಂ ಮುನಿಶ್ರೇಷ್ಠ ಈಶಾನೇನಾ ಥವಾ ಪುನಃ ।**
**ಪ್ರತ್ಯೇಕ ಮಷ್ಟೋತ್ತರ ಶತಂ ದಿಶಾಹೋಮಂ ತು ಕಾರಯೇತ್ ॥**
**ಈಶಾನ್ಯಾಂ ಪಂಚ ಮೇನಾಥ ಪ್ರಧಾನಂ ಪರಿಗೀಯತೇ ।**
**ಸಮಿದಾಜ್ಯ ಚರೂಂಲ್ಲಾಜಾನ್ಸರ್ಷ ಪಾಂಶ್ಚಯವಾಂಸ್ತಿಲಾನ್ ॥**
**ದ್ರವ್ಯಾಣಿ ಸಪ್ತಹೋತವ್ಯಂ ಸ್ವಾಹಾಂತಂ ಪ್ರಣವಾದಿತಃ ।**
**ತೇಷಾಂ ಪೂರ್ಣಾಹೂತಿರ್ವಿಪ್ರ ಈಶಾನೇನ ವಿಧೀಯತೇ ॥೫೩॥**

---

ಕ್ರಮದಿಂದಲಾಗಲಿ ಅಹಂಕಾರ ತತ್ವದಿಂದಲಾಗಲಿ ಶಾಂತ್ಯತೀತಕಲಾ ರೂಪನಾದ ಸದಾಶಿವನನ್ನು ಉದ್ದೇಶಿಸಿ ಅಂಗ ಮಂತ್ರವಾದ ಈಶಾನ ಮಂತ್ರದಿಂದ ಹೋಮವನ್ನು ಮಾಡಿಸಬೇಕು.

೫೦–೫೧. ಬೇರೆಯಾದ ಲೆಕ್ಕದಿಂದ ಸದ್ಯೋಜಾತಾದಿ ನಾಲ್ಕು ಮಂತ್ರಗಳಿಂದ ಶಾಂತಿಕಲಾಪರ್ಯಂತವಾಗಿ ಹೋಮವನ್ನು ಮಾಡ ಬೇಕು. ಎಲೈ ಮುನಿಶ್ರೇಷ್ಠನಾದ ಸನತ್ಕುಮಾರನೇ, ಮತ್ತೆ ಶಾಂತ್ಯತೀತ ಕಲಾ ಸ್ವರೂಪನಾದ ಪರಮ ಶಿವನನ್ನು ಉದ್ದೇಶಿಸಿ ಈಶಾನ ಮಂತ್ರದಿಂದ ನೂರೆಂಟು ಹೋಮವನ್ನು ಮಾಡಿಸಬೇಕು. ಆಮೇಲೆ ಬೇರೆಯಾಗಿ ನೂರೆಂಟು ದಿಗ್ದೇವತಾಹೋಮಗಳನ್ನು ಋತ್ವಿಜರುಗಳಿಂದ ಮಾಡಿಸ ಬೇಕು.

೫೨–೫೩. ಆಮೇಲೆ ಈಶಾನ್ಯ ದಿಕ್ಕಿನಲ್ಲಿ ಪ್ರಣವಾದಿಯಾದ ಈಶಾನ ಮಂತ್ರವನ್ನು ಸ್ವಾಹಾಂತವಾಗಿ ಉಚ್ಚರಿಸಿ ಸಮಿತ್ತು, ತುಪ್ಪ, ಚರು, ಅರಳು, ಸಾಸುವೆ, ಯವೆ, ಎಳ್ಳು, ಎಂಬ ಏಳು ದ್ರವ್ಯಗಳ ಹೋಮ ವನ್ನು ಮಾಡಬೇಕು. ಈಶಾನ ಮಂತ್ರದಿಂದಲೇ ಪೂರ್ಣಾಹುತಿ ಹೋಮ ವನ್ನೂ ಮಾಡಬೇಕು.

ಸಹಂಸೇನ ಯಥಾನ್ಯಾಯಂ ಪ್ರಣವಾದ್ಯೇನ ಸುವ್ರತ ।
ಅಘೋರೇಣ ಚ ಮಂತ್ರೇಣ ಪ್ರಾಯಶ್ಚಿತ್ತಂ ವಿಧೀಯತೇ ॥೫೪॥

ಜಯಾದಿಸ್ವಿಷ್ಟಪರ್ಯಂತಂ ಅಗ್ನಿಕಾರ್ಯಕ್ರಮೇಣ ತು ।
ಗುಣಸಂಖ್ಯಾಪ್ರಕಾರೇಣ ಪ್ರಧಾನೇನ ಚ ಯೋಜಯೇತ್ ॥೫೫॥

ಭೂತಾನಿ ಶ್ರುಹ್ಮಭಿರ್ವಾಽಪಿ ಮೌನೀ ಬೀಜಾದಿ ಭಿಸ್ತಥಾ ।
ಅಥ ಪ್ರಧಾನ ಮಾತ್ರೇಣ ಪ್ರಾಣಾಪಾನೌ ನಿಯಮ್ಯ ಚ ॥೫೬॥

ಷಷ್ಠೇನ ಭೇದಯೇದಾತ್ಮ ಪ್ರಣವಾಂತಂ ಕುಲಾಕುಲಂ ।
ಅನ್ಯೋನ್ಯ ಮುಪಸಂಹೃತ್ಯ ಬ್ರಹ್ಮಾಣಂ ಕೇಶವಂ ಹರಂ ॥೫೭॥

---

೫೪. ಪ್ರಣವಾದಿಯಾದ ಹಂಸಗಾಯತ್ರೀ ಮಂತ್ರದಿಂದಲೂ ಪ್ರಾಯಶ್ಚಿತ್ತ ಹೋಮವನ್ನು ಮಾಡಬೇಕು.

೫೫. ಜಯಾದಿ ಹೋಮ ಮೊದಲಾಗಿ ಸ್ವಿಷ್ಟಕೃತು ಹೋಮ ಪರ್ಯಂತವಾಗಿ ಅಗ್ನಿಕಾರ್ಯವನ್ನು ಮೂರು ಪ್ರಕಾರವಾಗಿಮಾಡಿ ಪ್ರಧಾನ ಹೋಮದೊಡನೆ ಸೇರಿಸಬೇಕು. ಪಾಶುಪತತಂತ್ರದಲ್ಲಿ ವೈದಿಕ ಕಲ್ಪ, ಮಿಶ್ರಾನುಕಲ್ಪ, ಶೈವಕಲ್ಪಾನುಕಲ್ಪ, ಎಂದು ಅಗ್ನಿಕಾರ್ಯ ವನ್ನು ಮೂರು ವಿಧವಾಗಿ ಹೇಳಿರುವುದು.

೫೬. ಬಳಿಕ ಗುರುವು ಮೌನದಿಂದ ಕೂಡಿ ಭೂಮಿಯೇ ಮೊದ ಲಾದ ಪಂಚ ಭೂತಗಳನ್ನು ಸದ್ಯೋಜಾತಾದಿ ಮಂತ್ರಗಳಿಂದಲೂ ಪ್ರಾಣಾಪಾನಗಳನ್ನು ಪ್ರಧಾನವಾದ ಈಶಾನಮಂತ್ರದಿಂದಲೂ ನಿಯಮ ಮಾಡಿ, ಆರನೆಯದಾದ ನಮೋಹಿರಣ್ಯ ಬಾಹವೇ ಎಂಬ ಮಂತ್ರದಿಂದ ಆತ್ಮವಾಚಕವಾದ ಪ್ರಣವದ ಕೊನೆಯಲ್ಲಿರುವ ನಾದ ಸಮೂಹದಿಂದ ವ್ಯಾಪ್ತವಾದ ಬ್ರಹ್ಮರಂಧ್ರವನ್ನು ಭೇದಿಸಬೇಕು.

**೫೭–೫೮.** ಬ್ರಹ್ಮನನ್ನು ವಿಷ್ಣುವಿನಲ್ಲಿಯೂ ವಿಷ್ಣುವನ್ನು ರುದ್ರ ನಲ್ಲಿಯೂ ರುದ್ರನನ್ನು ಈಶಾನನಲ್ಲಿಯೂ ಆ ಮಹೇಶ್ವರನನ್ನು

ರುದ್ರೇ ರುದ್ರಂ ತಮೀಶಾನೇ ಶಿವೇ ದೇವಂ ಮಹೇಶ್ವರಂ ।
ತಸ್ಮಾತ್ಸೃಷ್ಟಿ ಪ್ರಕಾರೇಣ ಭಾವಯೇದ್ಭವ ನಾಶನಂ ॥೫೮॥
ಸ್ಥಾಪ್ಯಾತ್ಮಾನ ಮಮುಂ ಜೀವಂ ತಾಡನಂ ದ್ವಾರದರ್ಶನಂ ।
ದೀಪನಂ ಗ್ರಹಣಂ ಚೈವ ಬಂಧನಂ ಪೂಜಯಾ ಸಹ ॥೫೯॥
ಅಮೃತೀ ಕರಣಂ ಚೈವ ಕಾರಯೇದ್ವಿಧಿಪೂರ್ವಕಂ ।
ಷಷ್ಠ್ಯಾಂತೇ ಸದ್ಯಸಂಯುಕ್ತಂ ತೃತೀಯೇನ ಸಮನ್ವಿತಂ ॥೬೦॥
ಫಡಂತಂ ಸಂಹೃತಿಃ ಪ್ರೋಕ್ತಾ ಪಂಚ ಭೂತಪ್ರಕಾರತಃ ।
ಸದ್ಯಾದ್ಯಷಷ್ಠಸಹಿತಂ ಶಿಖಾಂತಂ ಸ ಫಡಂತಕಂ ॥೬೧॥

---

ಶಿವನಲ್ಲಿಯೂ ಉಪಸಂಹಾರಮಾಡಿ ಆ ಶಿವನಿಂದ ಸೃಷ್ಟಿಕ್ರಮದಲ್ಲಿ ಜನನಮರಣ ರೂಪವಾದ ಸಂಸಾರ ನಾಶಕನಾದ ರುದ್ರನನ್ನು ಧ್ಯಾನಿಸಬೇಕು.

೫೯. ಈ ಶಿಷ್ಯ ಜೀವನನ್ನು ರುದ್ರನೆಂದು ಸ್ಥಾಪಿಸಿ ತಾಡನ, ದ್ವಾರ ದರ್ಶನ,ದೀಪನ, ಗ್ರಹಣ, ಪೂಜೆಯೊಡನೆ ಬಂಧನ, ಅಮೃತೀಕರಣ ಎಂಬ ಕಾರ್ಯಗಳನ್ನು ತಾಂತ್ರಿಕ ವಿಧಿಗನುಸಾರವಾಗಿ ಶಿಷ್ಯನ ಮೂಲಕವಾಗಿಯೇ ಮಾಡಿಸಬೇಕು.

೬೦. ಉಪಸಂಹಾರ ರೂಪವೆಂತೆಂದರೆ, ಸದ್ಯೋಜಾತ ಮಂತ್ರದಿಂದಲೂ ಅಘೋರ ಮಂತ್ರದಿಂದಲೂ ಕೂಡಿದ ನಮೋಹಿರಣ್ಯಬಾಹವೇ ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರೋಚ್ಚಾರಣೆಯನ್ನು ಮಾಡಿ, ಪೃಥಿವ್ಯಾದಿ ಪಂಚಭೂತಗಳ ರೀತಿಯಿಂದ ಒಂದನ್ನು ಮತ್ತೊಂದರಲ್ಲಿ ಐಕ್ಯಲಯ ಮಾಡುವುದೇ ಉಪಸಂಹಾರ ಪ್ರಕಾರವು.

೬೧. ದೀಕ್ಷಾಯೋಗವುಳ್ಳ ಶಿಷ್ಯನಿಗೆ ಸದ್ಯೋಜಾತ ಮಂತ್ರಾದಿಯಾದ ನಮೋಹಿರಣ್ಯಬಾಹವೇ ಎಂಬ ಮಂತ್ರದೊಡನೆಕೂಡಿದ ಈಶಾನ

**ತಾಡನಂ ಕಥಿತಂ ದ್ವಾರಂ ತತ್ವಾನಾಮಪಿ ಯೋಗಿನಃ ।**
**ಪ್ರಧಾನಂ ಸಂಪುಟೀಕೃತ್ಯ ತೃತೀಯೇನ ಚ ದೀಪನಂ ॥೬೨॥**
**ಆದ್ಯೇನ ಸಂಪುಟೀಕೃತ್ಯ ಪ್ರಧಾನಂ ಗ್ರಹಣಂ ಸ್ಮೃತಂ ।**
**ಪ್ರಧಾನಂ ಪ್ರಥಮೇ ನೈವ ಸಂಪುಟೀಕೃತ್ಯ ಪೂರ್ವವತ್ ॥೬೩॥**
**ಬಂಧನಂ ಪರಿಪೂರ್ಣೇನ ಪ್ಲಾವನಂ ಚಾಮೃತೇನ ಚ ।**
**ಶಾಂತ್ಯತೀತಾ ತತಃ ಶಾಂತಿರ್ವಿದ್ಯಾನಾಮ ಕಲಾಃಮಲಾ ॥೬೪॥**

---

ಮಂತ್ರದ ಕೊನೆಯಲ್ಲಿ ಫಟ್ ಎಂಬ ಅಸ್ತ್ರಮಂತ್ರವನ್ನು ಉಚ್ಚಾರಣೆಮಾಡಿ ತತ್ವಗಳ ತಾಡನವನ್ನೂ ದ್ವಾರದರ್ಶನವನ್ನೂ ಮಾಡಿಸಬೇಕು.

೬೨. ಮೂರನೆಯದಾದ ಅಘೋರ ಮಂತ್ರದಿಂದ ಆದ್ಯಂತಗಳಲ್ಲಿ ಸಂಪುಟೀಕರಣವನ್ನು ಮಾಡಿ, ಮುಖ್ಯವಾದ ಈಶಾನ ಮಂತ್ರವನ್ನು ಉಚ್ಚರಿಸುವುದು ದೀಪನವೆನಿಸುವುದು. ಮೊದಲನೆಯದಾದ ಸದ್ಯೋಜಾತ ಮಂತ್ರದಿಂದ ಈಶಾನ ಮಂತ್ರವನ್ನು ಸಂಪುಟೀಕರಣ ಮಾಡಿದರೆ ಗ್ರಹಣವೆನಿಸುವುದು.

೬೩. ಸದ್ಯೋಜಾತ ಮಂತ್ರದಿಂದ ಹಿಂದಿನಂತೆ ಈಶಾನ ಮಂತ್ರವನ್ನು ಸಂಪುಟೀಕರಣವನ್ನುಮಾಡಿದರೆ ಬಂಧನವೆನಿಸುವುದು. ಸದ್ಯೋಜಾತಾದಿ ಪಂಚಬ್ರಹ್ಮಮಂತ್ರವನ್ನು ಸಂಪೂರ್ಣವಾಗಿ ಉಚ್ಚರಿಸಿ ಅಮೃತರೂಪವಾದ ತ್ರಿಯಂಬಕ ಮಂತ್ರವನ್ನುಚ್ಚರಿಸಿದರೆ ಅಮೃತೀಕರಣವಾಗುವುದು.

೬೪. ಹಿಂದೆ ಹೇಳಿದ ತಾಂತ್ರಿಕ ವಿಧಿಯನ್ನು ಮಾಡಿದ ಮೇಲೆ ಕ್ರಮವಾಗಿ ಶಾಂತ್ಯತೀತ, ಶಾಂತಿ, ಪ್ರತಿಷ್ಠಾ, ವಿದ್ಯಾ, ನಿವೃತ್ತಿ ರೂಪವಾದ ಕಲಾಸಂಕ್ರಮಣಗಳನ್ನೂ ಮಾಡಿಸಬೇಕು.

ಪ್ರತಿಷ್ಠಾ ಚ ನಿವೃತ್ತಿಶ್ಚ ಕಲಾಸಂಕ್ರಮಣಂ ಸ್ಮೃತಾ ।
ತತ್ವವರ್ಣ ಕಲಾಯುಕ್ತಂ ಭುವನೇನ ಯಥಾಕ್ರಮಂ ॥೬೫॥

ಮಂತ್ರೈಃ ಪಾದ್ಯೈಃ ಸ್ತವಂ ಕುರ್ಯಾದ್ವಿಶೋಧ್ಯ ಚ ಯಥಾವಿಧಿ ।
ಆದ್ಯೇನ ಯೋನಿಬೀಜೇನ ಕಲ್ಪಯಿತ್ವಾ ಚ ಪೂರ್ವವತ್ ॥೬೬॥

ಪೂಜಾಸಂಪ್ರೋಕ್ಷಣಂ ವಿದ್ಧಿ ತಾಡನಂ ಹರಣಂ ತಥಾ ।
ಸಂಹತಸ್ಯ ಚ ಸಂಯೋಗಂ ವಿಕ್ಷೇಪಂ ಚ ಯಥಾಕ್ರಮಂ ॥೬೭॥

ಅರ್ಚನಾ ಚ ತಥಾ ಗರ್ಭಧಾರಣಂ ಜನನಂ ಪುನಃ ।
ಅಧಿಕಾರೋ ಭವೇದ್ಭಾನೋರ್ಲಯಶ್ಚೈವ ವಿಶೇಷತಃ ॥೬೮॥

---

೬೫. ಶಿವ ಶಕ್ತಿತತ್ವಗಳನ್ನು ಅಕಾರಾದಿವಿಸರ್ಗಾಂತವಾದ ಹದಿನಾರು ವರ್ಣಗಳೊಡನೆ ಕೂಡಿಸಿ ಎಂಟು ಪ್ರದೇಶಗಳಲ್ಲಿ ಹಿಂದೆ ಹೇಳಿದ ಕಲಾ ಸಂಕ್ರಮಣವನ್ನು ಮಾಡಿಸಬೇಕು. ಈ ವಿಷಯದಲ್ಲಿ ಆಗ್ನೇಯ ಪುರಾಣ ದಲ್ಲಿ ಶಾಂತ್ಯತೀತಕಲೆಯನ್ನು ಶಾಂತಿಕಲೆಯನ್ನು ಇದೇ ಕ್ರಮದಂತೆ ಒಂದೊಂದು ಕಲೆಯನ್ನು ತತ್ತ್ವವರ್ಣಾದಿಗಳನ್ನು ಸಂಕ್ರಮಣಮಾಡಿ ಅಷ್ಟಭುವನ ಸಿದ್ಧಿಯನ್ನುಮಾಡಬೇಕು ಎಂದು ಹೇಳಿದೆ. ದೀಪಕ, ರೋಚಕ, ಮೋಚಕ, ಊರ್ಧ್ವಗಾಮಿ, ವ್ಯೋಮರೂಪ, ಅನಾಶ್ರಿತ, ಓಂಕಾರಪದ, ಈಶಾನ, ಎಂಬಿವೇ ಅಷ್ಟಭುವನಗಳು.

೬೬. ಓಂಕಾರದಿಂದಲೂ ಹ್ರೀಂಕಾರದಿಂದಲೂ ಸಂಪುಟೀಕರಣ ವನ್ನುಮಾಡಿ ಶಿವಪ್ರತಿ ಪಾದಕವಾದ ಮಂತ್ರಗಳನ್ನು ಅರ್ಥ ವಿಚಾರ ಮಾಡಿ ಸ್ತೋತ್ರವನ್ನು ಮಾಡಬೇಕು. ಪ್ರಣವಾದಿಯಿಂದ ಹ್ರೀಂ ಎಂಬ ಬೀಜಾಕ್ಷರವನ್ನು ನಮಃ ಶಬ್ದಾಂತವಾಗಿ ಉಚ್ಚರಿಸಿ ಪೂಜಿಸಬೇಕೆಂದು ಆಗ್ನೇಯ ಪುರಾಣದಲ್ಲಿ ಹೇಳಿರುವುದು.

೬೭–೬೮. ಪೂಜೆ, ಸಂಪ್ರೋಕ್ಷಣ, ತಾಡನ, ಹರಣ, ಅತ್ಯಂತ ಶುದ್ಧ ಮನಸ್ಸಿನ ಸಂಯೋಗ, ಕ್ರಮವಾದ ವಿಕ್ಷೇಪ, ಅರ್ಚನಾ, ಗರ್ಭ

ಉತ್ತಮಾದ್ಯಂ ತಥಾಂತ್ಯೇನ ಯೋನಿಬೀಜೇನ ಸುವ್ರತ ।
ಉದ್ಧಾರೇ ಪ್ರೋಕ್ಷಣೇ ಚೈವ ತಾಡನೇ ಚ ಮಹಾಮುನೇ ॥೬೯॥
ಅಘೋರೇಣ ಫಡಂತೇನ ಸಂಸೃತಿಶ್ಛಿನ್ನ ಸಂಶಯಃ ।
ಪ್ರತಿತತ್ವಂ ಕ್ರಮೋ ಹ್ಯೇಷ ಯೋಗಮಾರ್ಗೇಣ ಸುವ್ರತ ॥೭೦॥
ಮುಷ್ಟಿನಾ ಚೈವ ಯಾವಚ್ಚ ತಾವತ್ಕಾಲಂ ನಯೇತ್ಕ್ರಮಾತ್ ।
ವಿಷುವೇಣ ತು ಯೋಗೇನ ನಿವೃತ್ತ್ಯಾದಿ ಶಿವಾಂತಿಕಂ ॥೭೧॥

---

ಧಾರಣ, ಪುನರ್ಜನನ, ಭಾನೋರ ಧಿಕಾರ ಎಂದರೆ ಸೂರ್ಯಸಮಾನವಾದ ಅಜ್ಞಾನನಿವಾರಕವಾದ ಒಂದು ವಿಶೇಷಸ್ಥಿತಿ. ಲಯವೆಂದರೆ ಅವಿದ್ಯಾನಾಶ ಇವುಗಳೂ ಈ ಶಿವದೀಕ್ಷೆಯಿಂದ ಉಂಟಾಗುವುವೆಂದು ತಿಳಿಯಬೇಕು.

೬೯–೭೦. ಎಲೈ ಮಹಾಮುನಿಯಾದ ಸನತ್ಕುಮಾರನೇ, ಈಶಾನ ಮಂತ್ರದ ಕೊನೆಯಲ್ಲಿ ಯೋನಿಬೀಜಾಕ್ಷರವಾದ ಹ್ರೀಂ ಎಂಬುದನ್ನು ಸೇರಿಸಿ ಪ್ರೋಕ್ಷಣ ತಾಡನಗಳಲ್ಲಿ ಉಪಯೋಗಿಸಬೇಕು. ಅಘೋರ ಮಂತ್ರದ ಕೊನೆಯಲ್ಲಿ ಫಟ್ ಎಂಬ ಅಸ್ತ್ರಮಂತ್ರವನ್ನು ಉಪಯೋಗಿಸಿದರೆ ಜನನ ಮರಣ ರೂಪವಾದ ಸಂಸಾರದ ನಾಶ ಉಂಟಾಗುವುದರಲ್ಲಿ ಸಂದೇಹವಿಲ್ಲ. ಈ ಪ್ರೋಕ್ಷಣಕ್ರಮದಲ್ಲಿ ಪ್ರತಿಯೊಂದು ತತ್ವಕ್ಕೂ ಅಂದರೆ ವಿಷುವಕ್ಕೂ ಈಕ್ರಮವು ಇರುವುದೆಂದು ಯೋಗಮಾರ್ಗದಿಂದ ತಿಳಿಯಬೇಕು. ತತ್ವಗಳಯೋಜನ ಸ್ಥಳವನ್ನು ವಿಷುವವೆಂದು ಆಗ್ನೇಯ ಪುರಾಣದಲ್ಲಿ ಹೇಳಿರುವುದು.

೭೧. ಮುಷ್ಟಿ ಸದೃಶವಾದ ಪ್ರಾಣಾಯಾಮದಿಂದ ಎಷ್ಟು ಕಾಲದ ವರೆಗೆ ವಿಷುವವೆಂಬಯೋಗವಿರುವುದೋ ಅಷ್ಟುಕಾಲದವರೆಗೆ ನಿವೃತ್ತಿಕಲೆಯಿಂದ ಸದಾಶಿವಾಂತವಾಗಿ ಮನಸ್ಸನ್ನು ಏಕಾಗ್ರತೆಯಿಂದ ತೆಗೆದುಕೊಂಡು ಹೋಗಬೇಕು. ಹಾಗಾದರೆ ಮನಸ್ಸು ಒಂದೆಡೆಯಲ್ಲಿ ಸಮತೆಯನ್ನು ಪಡೆವುದು. ಹಾಗಿಲ್ಲದಿದ್ದರೆ ಮನಸ್ಸಿನ ವಿಕಲ್ಪವು ಇದ್ದೇ ಇರುವುದು.

ಏಕತ್ರ ಸಮತಾಂ ಯಾತಿ ನಾನ್ಯಥಾ ತು ಪೃಥಕ್ಪೃಥಕ್ ।
ನಾಸಾಗ್ರೇ ದ್ವಾದಶಾಂತೇನ ಪೃಷ್ಠೇನ ಸಹ ಯೋಗಿನಾಂ ॥೭೨॥

ಕ್ಷಂತವ್ಯಮಿತಿ ವಿಪ್ರೇಂದ್ರ ದೇವದೇವಸ್ಯ ಶಾಸನಂ ।
ಹೇಮರಾಜತತಾಮ್ರಾದ್ಯೈರ್ವಿಧಿನಾ ಕಲ್ಪಿತೇನ ಚ ॥೭೩॥

ಸಕೂರ್ಚೇನ ಸವಸ್ತ್ರೇಣ ತಂತುನಾ ವೇಷ್ಟಿತೇನ ಚ ।
ತೀರ್ಥಾಂಬುಪೂರಿತೇನೈವ ರತ್ನಗರ್ಭೇಣ ಸುವ್ರತ ॥೭೪॥

ಸಂಹಿತಾಮಂತ್ರಿತೇನೈವ ರುದ್ರಾಧ್ಯಾಯಸ್ತುತೇನ ಚ ।
ಸೇಚಯೇಚ್ಚ ತತಃ ಶಿಷ್ಯಂ ಶಿವಭಕ್ತಂ ಚ ಧಾರ್ಮಿಕಂ ॥೭೫॥

ಸೋಽಪಿ ಶಿಷ್ಯಃ ಶಿವಸ್ಯಾಗ್ರೇ ಗುರೋರಗ್ರೇ ಚ ಸಾದರಂ ।
ವಹ್ನೇಶ್ಚ ದೀಕ್ಷಾಂ ಕುರ್ವೀತ ದೀಕ್ಷಿತಶ್ಚ ತಥಾ ಚರೇತ್ ॥೭೬॥

---

೭೨. ಕೆಲವು ಯೋಗಿಗಳಿಗೆ ನಾಸಾಗ್ರ ದೃಷ್ಟಿಯಲ್ಲಿಯೂ ಮತ್ತೆ ಕೆಲವರಿಗೆ ದ್ವಾದಶಾಂತವೆಂಬ ಕೊನೆಯ ಅವಯವವಾದ ಶಿವಪರತತ್ವದಲ್ಲಿಯೂ ಸಮತೆಯು ಪ್ರಾಪ್ತವಾಗುವುದು. ಬೇರೆ ಸ್ಥಾನಗಳಲ್ಲಿ ಬೇರೆಯ ರೂಪವಾಗಿ ಸಮತೆಯು ಉಂಟಾಗುವುದಿಲ್ಲ.

೭೩–೭೫. ಎಲೈ ಸನತ್ಕುಮಾರನೇ, ದೀಕ್ಷೆಯನ್ನು ಪಡೆದವನು ಸುಖದುಃಖಾದಿದ್ವಂದ್ವಗಳನ್ನು ಸಹಿಸಬೇಕೆಂದು ದೇವದೇವನಾದ ಪರಶಿವನ ಆಜ್ಞೆಯು ಇರುವುದು. ಆ ಮೇಲೆ ಶಿವಭಕ್ತನೂ ಧರ್ಮಮಾರ್ಗಾಸಕ್ತನೂ ಆದ ಶಿಷ್ಯನಿಗೆ ಚಿನ್ನ ಬೆಳ್ಳಿ ತಾಮ್ರ ಮುಂತಾದ ಕಲಶಗಳಲ್ಲಿ ವಿಧಿಗನುಸಾರವಾಗಿ ದಾರವನ್ನು ಸುತ್ತಿ, ವಸ್ತ್ರಗಳಿಂದ ಅಲಂಕರಿಸಿ, ನವರತ್ನಗಳಿಂದಲೂ ತೀರ್ಥೋದಕಗಳಿಂದಲೂ ತುಂಬಿದ ಅಭಿಮಂತ್ರಿಸಿದ ನೀರಿನಿಂದ ರುದ್ರಾಧ್ಯಾಯ ಮಂತ್ರದಿಂದಲಾಗಲಿ ಶಿವಸ್ತೋತ್ರಗಳಿಂದಲಾಗಲಿ ಪವಮಾನಾದಿ ಮಂತ್ರಗಳಿಂದಲಾಗಲಿ ಕೂರ್ಚದಿಂದ ಪ್ರೋಕ್ಷಿಸಬೇಕು.

೭೬. ಆ ಶಿಷ್ಯನು ಶಿವ ಗುರು ಅಗ್ನಿ ಇವರೆದುರಿಗೆ ದೀಕ್ಷಾಗ್ರಹಣವನ್ನುಮಾಡಿ ಮುಂದೆ ಹೇಳುವ ನಿಯಮವನ್ನು ಆಚರಿಸಬೇಕು.

ವರಂ ಪ್ರಾಣಪರಿತ್ಯಾಗಶ್ಛೇದನಂ ಶಿರಸೋಽಪಿ ವಾ ।
ನ ತ್ವನಭ್ಯರ್ಚ್ಯ ಭುಂಜೀಯಾದ್ಭಗವಂತಂ ಸದಾಶಿವಂ ॥೭೭॥

ಏವಂ ದೀಕ್ಷಾಪ್ರಕರ್ತವ್ಯಾ ಪೂಜಾ ಚೈವ ಯಥಾ ಕ್ರಮಂ ।
ತ್ರಿಕಾಲಮೇಕ ಕಾಲಂ ವಾ ಪೂಜಯೇತ್ಪರಮೇಶ್ವರಂ ॥೭೮॥

ಅಗ್ನಿಹೋತ್ರಂ ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।
ಶಿವಲಿಂಗಾರ್ಚನಸ್ಯೈತೇ ಕಲಾಂಽಂಶೇನಾಪಿ ನೋ ಸಮಾಃ ॥೭೯॥

ಸದಾ ಯಜತಿ ಯಜ್ಞೇನ ಸದಾ ದಾನಂ ಪ್ರಯಚ್ಛತಿ ।
ಸದಾ ಚ ವಾಯುಭಕ್ಷಶ್ಚ ಸಕೃದ್ಯೋಽಭ್ಯರ್ಚಯೇಚ್ಛಿವಂ ॥೮೦॥

ಏಕ ಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ವಾ ।
ಯೇಽರ್ಚಯಂತಿ ಮಹಾದೇವಂ ತೇ ರುದ್ರಾ ನಾತ್ರ ಸಂಶಯಃ ॥

---

೭೭. ಶಿವದೀಕ್ಷೆಯನ್ನು ಪಡೆದವನು ಪ್ರಾಣವುಹೋಗುವ ಕಷ್ಟವು ಪ್ರಾಪ್ತವಾದರೂ ತನ್ನ ತಲೆಯನ್ನು ಕಡಿಯುವ ಕಷ್ಟವು ಒದಗಿದರೂ ಶಿವ ಪೂಜೆಯನ್ನು ಮಾಡದೆ ಭೋಜನವನ್ನು ಮಾಡಬಾರದು.

೭೮. ಈ ರೀತಿಯಲ್ಲಿ ದೀಕ್ಷೆಯನ್ನುವಹಿಸಿ ಪ್ರತಿದಿನವೂ ತ್ರಿಕಾಲದಲ್ಲಿ ಯಾಗಲಿ ಒಂದು ಕಾಲದಲ್ಲಿಯಾಗಲಿ ಕ್ರಮವಾಗಿ ಪರಮೇಶ್ವರನ ಪೂಜೆ ಯನ್ನು ಮಾಡಬೇಕು.

೭೯. ಪ್ರತಿದಿನವೂ ಅಗ್ನಿ ಹೋತ್ರವೂ ವೇದಾಭ್ಯಾಸವೂ ಬಹಳ ವಾಗಿ ದಕ್ಷಿಣೆಯನ್ನು ಕೊಟ್ಟು ಯಜ್ಞವನ್ನು ಮಾಡುವುದೂ ಶಿವಲಿಂಗ ವನ್ನು ಪೂಜೆಯನ್ನು ಮಾಡುವುದರ ಹದಿನಾರನೆಯ ಒಂದಂಶಕ್ಕೂ ಸಮ ವಾಗಲಾರದು.

೮೧. ಒಂದಾವೃತ್ತಿ ಶಿವ ಪೂಜೆಯನ್ನು ಮಾಡಿದವರಿಗೆ ಸದಾ ಕಾಲ ದಲ್ಲಿಯೂ ಯಜ್ಞಮಾಡುವವನಿಗೂ, ಯಾವಾಗಲೂ ದಾನವನ್ನು ಮಾಡು ವವನಿಗೂ, ಯಾವಾಗಲೂ ವಾಯುವನ್ನು ಆಹಾರ ಮಾಡಿಕೊಂಡು ತಪಸ್ಸು ಮಾಡುವವನಿಗೂ, ಯಾವ ಪುಣ್ಯವು ಬರುವುದೋ, ಆ ಪುಣ್ಯವು ಬರುವುದು.

೮೧. ಪ್ರತಿದಿನವೂ ಒಂದು ಹೊತ್ತಾಗಲಿ ಎರಡು ಹೊತ್ತಾಗಲಿ ಮೂರು ಹೊತ್ತಾಗಲಿ ಸಂತತವಾಗಿಯಾಗಲಿ ಶಿವನ ಪೂಜೆಯನ್ನು ಮಾಡು

**ನಾರುದ್ರಸ್ತು ಸ್ಪೃಶೇದ್ರುದ್ರಂ ನಾರುದ್ರೋ ರುದ್ರಮರ್ಚಯೇತ್ ।**
**ನಾರುದ್ರಃ ಕೀರ್ತಯೇದ್ರುದ್ರಂ ನಾರುದ್ರೋ ರುದ್ರಮಾಪ್ನು**
**ಯಾತ್ ॥೮೨॥**

**ಏವಂ ಸಂಕ್ಷೇಪತಃ ಪ್ರೋಕ್ತೋ ಹ್ಯಧಿಕಾರಿವಿಧಿಕ್ರಮಃ ।**
**ಶಿವಾರ್ಚನಾರ್ಥಂ ಧರ್ಮಾರ್ಥ ಕಾಮ ಮೋಕ್ಷ ಫಲಪ್ರದಃ ॥೮೩॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದೀಕ್ಷಾವಿಧಿರ್ನಾಮ**
**ಏಕವಿಂಶೋಽಧ್ಯಾಯಃ**

---

ವವರು ಶಿವಸ್ವರೂಪರೇ ಆಗುವರು. ಈ ವಿಷಯದಲ್ಲಿ ಸಂದೇಹವಿಲ್ಲ. ನಾರುದ್ರೋ ರುದ್ರಮರ್ಚಯೇತ್ ಎಂದು ಶಾಸ್ತ್ರ ಪ್ರಸಿದ್ಧಿಯಿರುವುದು.

೮೨. ರುದ್ರಸ್ವರೂಪನಲ್ಲದಿದ್ದರೆ ರುದ್ರಮೂರ್ತಿಯಾದ ಲಿಂಗಾದಿಗಳನ್ನು ಮುಟ್ಟಬಾರದು ಪೂಜಿಸಬಾರದು ಮಂತ್ರಸ್ತೋತ್ರಾದಿಗಳಿಂದ ಹೊಗಳಬಾರದು. ರುದ್ರಸ್ವರೂಪದಲ್ಲಿ ಇವು ಒಂದೂ ಇಲ್ಲದೆ ಐಕ್ಯನಾಗಲಾರನು.

**೮೩.** ಈ ರೀತಿಯಲ್ಲಿ ಧರ್ಮ ಅರ್ಥ ಕಾಮ ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳನ್ನು ಕೊಡುವ ಶಿವದೀಕ್ಷೆಯನ್ನು ಹೊಂದಿದ ಅಧಿಕಾರಿಗಳ ನಿಯಮಗಳನ್ನು ಶಿವ ಪೂಜಾ ಫಲಪ್ರಾಪ್ತಿಗಾಗಿ ಸಂಕ್ಷೇಪವಾಗಿ ಹೇಳಿರುವುದು. ಈ ಶಿವದೀಕ್ಷಾವಿಧಿಯನ್ನು ಆಗ್ನೇಯ ಪುರಾಣದಲ್ಲಿ ವಿಸ್ತಾರವಾಗಿ ಹೇಳಿರುವುದು.

**ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಾರ್ಧದಲ್ಲಿ ಶಿವದೀಕ್ಷಾ ಕ್ರಮವನ್ನು ವಿವರಿಸಿರುವ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.**

## ಆಂಧ್ರಲಿಪಿಯಲ್ಲಿ ಮುದ್ರಿತವಾಗಿರುವ ಗ್ರಂಥದರೀತ್ಯಾ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಈ ಶ್ಲೋಕಗಳು ಹೆಚ್ಚಾಗಿವೆ.

**ಶಕ್ತಿಪಾತಂ ವಿಧಾಯಾಥ ಸಮ್ಯಕ್ ಜ್ಞಾನಾಭಿವೃದ್ಧಯೇ ॥೭೬॥**

**ಪೀಠಸ್ಥಿತೇಽಭಿಷಿಕ್ತೇ ಚ ಗಂಧಪುಷ್ಪಾದಿ ಪೂಜಿತೇ ।**
**ಜಲಾಧಿವಾಸನಾದ್ಯೈಶ್ಚ ಸಂಸ್ಕಾರೈಃ ಪ್ರಾಕ್ ಸುಸಂಸ್ಕೃತೇ ॥೭೭॥**

**ಅಷ್ಟತ್ರಿಂಶತ್ಕಳಾನ್ಯಾಸಂ ಲಿಂಗೇ ಕೃತ್ವಾ ವಿಧಾನತಃ ।**
**ಷಡಧ್ವಾನೋ ನ್ಯಸೇತ್ಪೀಠೇ ಬ್ರಹ್ಮವಿಷ್ಣುಶಿವಾತ್ಮಿಕೇ ॥೭೮॥**

**ಲಿಂಗೇ ಪ್ರಾಣಾಂಸ್ತು ಸಂಸ್ಥಾಪ್ಯ ಅಸುನೀತೇತಿ ಮಂತ್ರತಃ ।**

---

ಆಂಧ್ರಲಿಪಿಯಲ್ಲಿ ಮುದ್ರಿತ ವಾಗಿರುವ ಗ್ರಂಥದಲ್ಲಿ ಈ ಶ್ಲೋಕಗಳು ಹೆಚ್ಚಾಗಿವೆ.

ಆಮೇಲೆ ಗುರುವು ತನ್ನ ಬಲಗೈಯನ್ನು ಶಿಷ್ಯನ ತಲೆಯಮೇಲಿಟ್ಟು ಸ್ಪರ್ಶಮಾಡುತ್ತಾ, ಶಕ್ತಿಪಾತವನ್ನು ಎಂದರೆ, ಗುರುಶಿಷ್ಯ ಪರಂಪರಾಽಽಗತವಾಗಿರುವ ಚೈತನ್ಯದ ಶಕ್ತಿವಿಶೇಷದ ಸಂಕ್ರಮಣವನ್ನು, ಶ್ರೇಯಸ್ಕರವಾದ ತಿಳಿವಳಿಕೆಯು ಬೆಳೆದು ಬಲಗೊಳ್ಳುವುದಕ್ಕೋಸ್ಕರ ನೆರವೇರಿಸಬೇಕು. ಸೂತಸಂಹಿತಾಯಜ್ಞ ವೈಭವಖಂಡ ಅ. ೩೬. ಶ್ಲೋ. ೨೫–೨೬. ನೋಡಿ. ॥೭೬॥ ಜಲಾಧಿವಾಸ ಧ್ಯಾನಾಧಿವಾಸ ಮುಂತಾದ ಸಂಸ್ಕಾರಗಳಿಂದ ಮೊದಲು ಚನ್ನಾಗಿ ಸಂಸ್ಕೃತವಾಗಿರುವ ಲಿಂಗವನ್ನು ಬ್ರಹ್ಮಾ. ವಿಷ್ಣು, ಶಿವ, ಸ್ವರೂಪವಾಗಿರುವ ಪೀಠದ ಮೇಲಿಟ್ಟು, ಅಭಿಷೇಕವನ್ನು ಮಾಡಿ, ಗಂಧ, ಪುಷ್ಪ, ಮುಂತಾದುವುಗಳಿಂದ ಪೂಜಿಸಿ ಷಡಧ್ವ ಕ್ರಮದಿಂದ, ಮೂವತ್ತೆಂಟು ಕಲಾನ್ಯಾಸವನ್ನೂ ಮಾಡಬೇಕು. ॥೭೭॥ ಶಕ್ತಿಪಾತದ ಲಕ್ಷಣವನ್ನು ಮೃಗೇಂದ್ರಾಗಮದಲ್ಲಿ ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯವಿನಿವೃತ್ತಯೇ ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ ॥ ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ವಿಧೌ ॥ ಎಂದು ಹೇಳಿದೆ. ಷಡಧ್ವಗಳನ್ನು. ವರ್ಣಾಧ್ವ=ಆದಿಕ್ಷಾಂತವರ್ಣಗಳು; ಪದಾಧ್ವ=ಪದಗಳು, ಸ್ಥಾನಗಳು; ಮಂತ್ರಾಧ್ವ=ಸದ್ಯೋಜಾತಾದಿಮಂತ್ರಗಳು; ಕಲಾಧ್ವ=ಶಾಂತ್ಯ

ಸ್ವಸ್ಯಾಗ್ರೇ ಸಂಸ್ಥಿತಸ್ಯಾಸ್ಯ ದೇಶಿಕಃ ಕರುಣಾನಿಧಿಃ ॥೭೯॥

---

ತೀತಾದಿ ಕಲೆಗಳು; ತತ್ತ್ವಾಧ್ವ=ಮೂವತ್ತಾರು ತತ್ವಗಳು— ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ಅವಿದ್ಯಾ (ಅ=ಕಿಂಚಿತ್), ರಾಗ, ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಸ್ಸು, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವೀ, ಎಂದು ಗರುಡ ಪುರಾಣದ ಪೂರ್ವ ಖಂಡದ ೨೩ನೆಯ ಅಧ್ಯಾಯದ ಶ್ಲೋಕ ೩೧–೩೪ರಲ್ಲಿ ಹೇಳಿದೆ. ಭುವನಾಧ್ವ=ಲೋಕಗಳು ಎಂದು ಹೇಳಿದೆ. ಷಡಧ್ವದ ಪ್ರಸ್ತಾಪವು ಸೂತಸಂಹಿತೆಯಲ್ಲಿಯೂ, ದೇವೀಭಾಗವತ ಮಹಾಪುರಾಣ ದಲ್ಲಿಯೂ ಸೂಚಿತವಾಗಿದೆ.

೭೮ ಆ ಲಿಂಗದಲ್ಲಿ ಶಾಸ್ತ್ರೋಕ್ತವಾಗಿರುವ ರೀತಿಯಿಂದ ಮೂವ ತ್ತೆಂಟು ಕಲೆಗಳ ನ್ಯಾಸವನ್ನೂ ಮಾಡಬೇಕು. ಆ ಕಲೆಗಳು ಯಾವು ವೆಂದರೆ—ಶಶಿನೀ ಅಗದಾ, ಇಷ್ಟದಾ, ಮರೀಚಿ, ಜ್ವಲಿನೀ, ಶಾಂತಿ, ವಿದ್ಯಾ, ಪ್ರತಿಷ್ಠಾ, ನಿವೃತ್ತಿ, ತಾಮಸೀ, ಮೋಹ, ಕ್ಷುಧಾ, ನಿದ್ರಾ, ಮೃತ್ಯು, ಮಾಯಾ, ಅಭಯಾ, ಜರಾ, ರಾಜಸೀ,ರಕ್ಷಾ, ರತಿ, ಪಾಲಿನೀ, ಕಾಮಾ, ಸಂಯಮಿನೀ, ಕ್ರಿಯಾ, ಬುದ್ಧಿ, ಕಾರ್ಯಾ, ಧಾತ್ರೀ, ಬ್ರಾಹ್ಮಣೀ, ಮೋಹಿನೀ, ಭವಾ, ಸಿದ್ಧಿ, ಬುದ್ಧಿ, ದ್ಯುತಿ, ಲಕ್ಷ್ಮೀ, ಮೇಧಾ, ಕಾಂತಿ, ಸ್ವಧಾ, ಧೃತಿ, ಎಂಬುದಾಗಿ ಹೇಳಿದೆ.

ಆ ಲಿಂಗದಲ್ಲಿ "ಅಸುನೀತೇ ಪುನರಸ್ಮಾಸು" ಎಂಬ ಮಂತ್ರದಿಂದ ಪ್ರಾಣಪ್ರತಿಷ್ಠಾಕಾರ್ಯವನ್ನೂ ನೆರವೇರಿಸಬೇಕು.

೭೯. ದಯಾಳುವಾದ ಗುರುವು ತನ್ನ ಎದುರಿಗೆ ಕುಳಿತಿರುವ ಶಿಷ್ಯನಿಗೆ ಜ್ಞಾನವನ್ನು ಅನುಗ್ರಹಿಸುವುದಕ್ಕಾಗಿ ಅಜ್ಞಾನದಿಂದ ಉಂಟಾ ಗಿರುವ ಬಲೆಯಂತಿರುವ ಸಂಸಾರ ಬಂಧ ದುಃಖವನ್ನು ನಿರ್ಮೂಲವಾಗಿ ತೊಲಗಿಸುವುದಕ್ಕೋಸ್ಕರ ಮುಂದೆ ಹೇಳುವಂತೆ ಕ್ರಮವಾಗಿ ಮಹಾ ಶೈವೀ ಎಂದು ಪ್ರಸಿದ್ಧವಾಗಿರುವ ದೀಕ್ಷಾದಾನ ಕಾರ್ಯವನ್ನೂ ನೆರ ವೇರಿಸಬೇಕು.

ಕುರ್ಯಾತ್ ದೀಕ್ಷಾಂ ಮಹಾಶೈವೀಂ ಅವಿದ್ಯಾಪಾಶಕೃಂತನೀಂ ।
ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ ॥೮೦॥

ದೀಯತೇ ಕ್ಷೀಯತೇ ತಸ್ಮಾತ್ ಸಾ ದೀಕ್ಷೇತಿ ನಿಗದ್ಯತೇ ।
ಸಾ ದೀಕ್ಷಾ ಪರಮಾ ದೈ(ಶೈ)ವೀ ತ್ರಿಧಾ ಭವತಿ ನಿರ್ಮಲಾ ॥೮೧॥

ಏಕಾ ವೇಧಾತ್ಮಿಕಾ ಸಾಕ್ಷಾತ್ ಅನ್ಯಾ ಮಂತ್ರಾತ್ಮಿಕಾ ಮತಾ ।
ಕ್ರಿಯಾಽಽತ್ಮಿಕಾ ಪರಾ ಕಾಚಿತ್ ಏವಮೇವ ತ್ರಿಧಾ ಭವೇತ್ ॥೮೨॥

ಹಸ್ತಮಸ್ತಕ ಸಂಯೋಗಾತ್ ಚಲಾದ್ವೇಧೇತಿ ಗೀಯತೇ ।
ಗುರುಣೋದೀರಿತಾ ಕರ್ಣೇ ಯಾ ಸಾ ಮಂತ್ರೇತಿ ಕಥ್ಯತೇ ॥೮೩॥

---

೮೦. ಮೂರು ಬಗೆಯ ಲಿಂಗ ಸಂಬಂಧವನ್ನು ಉಂಟುಮಾಡುವುದರಿಂದಲೂ, ಮೂರು ಪ್ರಕಾರವಾಗಿರುವ ದೋಷ ಮಲಗಳನ್ನು ನಾಶಪಡಿಸುವುದರಿಂದಲೂ, ಈ ದೀಕ್ಷೆಗೆ, ನಿಯಮಪಾಲನ ವ್ರತಕ್ಕೆ, ದೀಕ್ಷೆ ಎಂದು ಅನ್ವರ್ಥನಾಮವು ಪ್ರಸಿದ್ಧವಾಗಿದೆ. ಲಿಂಗತ್ರಯ—ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ; ತನುತ್ರಯ—ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು; ಮಲತ್ರಯ— ಕಾರ್ಮಿಕಮಲ, ಮಾಯಿಕಮಲ, ಆಣವ ಮಲ, ಎಂಬ ದೋಷಗಳು; ದೀಕ್ಷಾತ್ರಯ—ವೇಧಾ ದೀಕ್ಷಾ, ಮಂತ್ರ ದೀಕ್ಷಾ, ಕ್ರಿಯಾದೀಕ್ಷಾ, ಎಂಬ ಮೂರು ಬಗೆಯ ಕ್ರಮಗಳು.

೮೧–೮೨ ದೋಷರಹಿತವಾದ ಆ ಉತ್ತಮವಾದ ದೈ(ಶೈ)ವೀದೀಕ್ಷೆಯು ಮೂರುಬಗೆಯಾಗಿದೆ. ಒಂದನೆಯದು ವೇಧಾತ್ಮಕವಾದುದು; ಎರಡನೆಯದು ಮಂತ್ರಾತ್ಮಕವಾದುದು; ಮೂರನೆಯದು ಕ್ರಿಯಾತ್ಮಕವಾದುದು; ಹೀಗೆ ದೀಕ್ಷೆಯು ಮೂರುವಿಧವಾಗಿದೆ.

೮೩. ಗುರುವಿನ ಹಸ್ತವು ಶಿಷ್ಯನತಲೆಯ ಮೇಲೆ ಹೋಗಿ ಸೇರುವುದರಿಂದ ಇದಕ್ಕೆ ವೇಧಾದೀಕ್ಷೆ ಎಂದು ಹೆಸರು. ಗುರುವಿನಿಂದ ಶಿಷ್ಯನ ಕಿವಿಯಲ್ಲಿ ಉಪದೇಶಿಸಲ್ಪಡುವುದರಿಂದ ಇದಕ್ಕೆ ಮಂತ್ರ ದೀಕ್ಷೆಯೆಂದು ಹೆಸರಾಗಿದೆ.

ಶಿಷ್ಯಪಾಣಿತಲೇ ದತ್ವಾ ಯಾ ದೀಕ್ಷಾ ಸಾ ಕ್ರಿಯೋದ್ಯ (ದಿ) ತಾ ।
ಪಾಶಾನಶೇಷಾನ್ ಕರ್ತ್ತರ್ಯಾ ಛಿತ್ವಾ ಲಿಂಗಂ ಸಮಾದಿಶೇತ್ ॥೮೪॥

ಕರ್ತ್ತರೀ ಶಿವದೀಕ್ಷಾ ಸ್ಯಾತ್ ಯಯಾ ಪಾಶಾನ್ ಛಿನತ್ತ್ಯಸೌ ।
ಕೃತ್ವಾ ಶೈವೀಂ ಪರಾಂ ದೀಕ್ಷಾಂ ತತ್ತ್ವವಿದ್ಯಾಂ ಶಿವಾತ್ಮಿಕಾಂ ॥೮೫॥

ಛಿತ್ವಾಽವಿದ್ಯಾಮಹಾಕೋಶಂ ಕಳಾಧ್ಯಾನಂ ವಿಚಿಂತಯೇತ್ ।
ಯಥಾ ಕಳಾ ತಥಾ ಭಾವಃ ಯಥಾ ಭಾವಸ್ತಥಾ ಮನಃ ॥೮೬॥

ಯಥಾ ಮನಸ್ತಥಾ ದೃಷ್ಟಿಃ ಯಥಾ ದೃಷ್ಟಿಸ್ತಥಾ ಸ್ಥಲಂ ।
ಯಾ ಕಳಾ ಪರಮಾ ಸಾಕ್ಷಾತ್ ಮಂತ್ರಾಣಾಂ ಬೋಧನೀ ಪುರಾ ॥

---

೮೪–೮೫. ಗುರುವು ತನ್ನ ಕೈಯಲ್ಲಿಟ್ಟು ಪೂಜಿಸಿದ್ದ ಲಿಂಗವನ್ನು ಈಗ ಶಿಷ್ಯನ ಕೈಯಲ್ಲಿ ಇಡುವುದಕ್ಕೆ ಕ್ರಿಯಾದೀಕ್ಷೆಎಂದು ಹೆಸರಿದೆ. ಅಜ್ಞಾನದಿಂದ ಉಂಟಾಗಿದ್ದ ಪಾಶಗಳನ್ನು ಎಲ್ಲವನ್ನೂ ಕತ್ತರಿಸಿ ಲಿಂಗವನ್ನು ಕೊಡಬೇಕು. ಈ ಶಿವದೀಕ್ಷೆಯು ಅವಿದ್ಯಾಪಾಶಗಳನ್ನು ಕತ್ತರಿಸುವುದರಲ್ಲಿ ಕತ್ತರಿಯಹಾಗೆ ಆಚರಿಸುತ್ತದೆ. ಆದರಿಂದ ಈ ದೀಕ್ಷೆಗೆ ಕತ್ತರಿ ಎಂದು ವ್ಯವಹಾರವಿದೆ. ತತ್ತ್ವವಿದ್ಯೆಯಿಂದ ಗುರುವೂ ಶಿಷ್ಯನೂ ಅವಿದ್ಯಾಪಾಶವನ್ನು ನಿರ್ಮೂಲವಾಗಿ ನಾಶಮಾಡುತ್ತಾರೆ. ಶಿವತತ್ತ್ವವನ್ನು ಮನಗಾಣಿಸುವ ಈ ಶಿವಸ್ವರೂಪವಾದ ಉತ್ತಮ ದೀಕ್ಷೆಗೆ ಶೈವೀದೀಕ್ಷೆ ಎಂದು ಹೆಸರೂ ಪ್ರಸಿದ್ಧಿ ಇದೆ.

೮೬. ಹೀಗೆ ಅವಿದ್ಯೆ ಎಂಬ ಮಹಾ ಕೋಶವನ್ನು ಕತ್ತರಿಸಿ ಕಲೆಯ ಧ್ಯಾನವನ್ನು ಮಾಡಬೇಕು. ಏಕೆಂದರೆ ಕಲೆಯನ್ನು ಅನುಸರಿಸಿ ಭಾವವೂ, ಭಾವಕ್ಕೆ ತಕ್ಕಂತಿರುವ ಮನಸ್ಸೂ ಉಂಟಾಗುತ್ತದೆ.

೮೭. ಅದರಂತೆಯೇ ಮನಸ್ಸಿನ ಸ್ಥಿತಿಗೆ ತಕ್ಕಂತೆ ದೃಷ್ಟಿಯುಂಟಾಗುತ್ತದೆ. ಆ ದೃಷ್ಟಿಯ ಶಕ್ತಿಗೆ ಅನುಸಾರವಾಗಿ ಸ್ಥಲವೂ ಏರ್ಪಡುತ್ತದೆ. ಆದುದರಿಂದ ಸೂಕ್ಷ್ಮವೂ ಶ್ರೇಷ್ಠವೂ ಮಂತ್ರಗಳ ತಿಳವಳ

ತಾಮಾಕೃಷ್ಯ ಯಥಾನ್ಯಾಯಂ ಲಿಂಗೇ ಸಮುಪವೇಶಯೇತ್ ।
ತತಸ್ತಲ್ಲಿಂಗ ಮಸ್ಯಾಂಗೇ ಶಿಷ್ಯಸ್ಯಾಮಿತತೇಜಸಾ ॥೮೮॥
ಸಂಯೋಜನೀಯಂ ಗುರುಣಾ ಪೂರ್ವೋಕ್ತೇನೈವ ವರ್ತ್ಮನಾ ।
ತನುತ್ರಯಗತಾಃನಾದಿ ಮಲತ್ರಯಮಸೌ ಗುರುಃ ॥೮೯॥
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಿತಯಮಾದಿಶೇತ್ ।
ಲಿಂಗಂ ತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ತು ಕಾರಣಂ ॥
ಧಾರಯಂತೋ ಸರಾಃ ಸ್ಥೂಲಂ ಕಾರಣಂ ಸಂಪ್ರಯಾಂತಿ ಹಿ ।
ಕುರ್ಯಾತ್ತ್ರಿಪುಟಸಂಧಾನಂ ಶಿವಸಾಯುಜ್ಯಕಾರಣಂ ॥೯೦॥

---

ಕೆಯನ್ನುಂಟುಮಾಡುವುದೂ ಆಗಿರುವ ಯಾವ ಆ ಕಲೆಯನ್ನು ಶಾಸ್ತ್ರನಿಯಮವನ್ನು ಅನುಸರಿಸಿ ಗುರುವು ಲಿಂಗದಲ್ಲಿ ಮೊದಲು ಪ್ರತಿಷ್ಠೆಯನ್ನು ಮಾಡಿರಬೇಕು.

೮೮. ಆ ಮೇಲೆ ಆ ಲಿಂಗವನ್ನು ತುಂಬ ತೇಜಸ್ಸುಳ್ಳ ಗುರುವು ಮೊದಲು ವಿವರಿಸಿರುವ ರೀತಿಯಲ್ಲಿ ಶಿಷ್ಯನ ಅವಯವದಲ್ಲಿ ಸೇರಿಸಬೇಕು.

೮೯. ಮೂರು ಬಗೆಯ ಶರೀರಗಳಲ್ಲಿರುವ ಮೂರು ವಿಧವಾದ ದೋಷಗಳನ್ನೂ ಈ ಗುರುವು ನಾಶಮಾಡುವುದಕ್ಕೋಸ್ಕರ ಮೂರುತೆರನಾದ ಈ ದೀಕ್ಷಾಕ್ರಮದಿಂದ ಮೂರು ಪ್ರಕಾರವಾದ ಲಿಂಗಧಾರಣೆಯನ್ನೂ ಮಾಡಿಸಬೇಕು. ಇವುಗಳ ವಿವರಗಳನ್ನು ಮೇಲೆ ಕೊಟ್ಟಿದೆ.

೯೦-೯೧. ಲಿಂಗವೂ ಸ್ಥೂಲ, ಸೂಕ್ಷ್ಮ, ಕಾರಣ ಲಿಂಗವೆಂದು ಮೂರು ಬಗೆಯಾಗಿದೆ. ಸ್ಥೂಲಲಿಂಗವನ್ನು ಧರಿಸಿರುವ ಮಾನವರು ಕ್ರಮವಾಗಿ ಕಾರಣಲಿಂಗವನ್ನೂ ಪಡೆಯುತ್ತಾರೆ. ಹಾಗೆಯೇ ತ್ರಿಪುಟ ಸಂಧಾನವು ಶಿವಸಾಯುಜ್ಯವನ್ನು ಪಡೆಯಲು ಕಾರಣವಾಗಿರುತ್ತದೆ. ಆದುದರಿಂದ ಅದನ್ನೂ ಮಾಡಬೇಕು.

ವಕ್ಷ್ಯೇ ತ್ರಿಪುಟಸಂಧಾನ ಲಕ್ಷಣಂ ಶಿವಯೋಗಿನಾ ।
ಸ್ಥೂಲದೇಹಸ್ಯ ಲಿಂಗಸ್ಯ ಸೂಕ್ಷ್ಮಸ್ಯ ಮನಸಸ್ತಥಾ ॥೯೨॥
ಕಾರಣಸ್ಯಾತ್ಮನೋ ನಿತ್ಯಂ ಕುರ್ಯಾದೈಕ್ಯಮತಂದ್ರಿತಃ ।
ದೇಹೇನ ಧಾರಯೇಲ್ಲಿಂಗಂ ಧ್ಯಾಯೇಚ್ಚಿತ್ತೇನ ಶಂಕರಂ ॥೯೩॥
ಸ್ವಾತ್ಮನಾ ಭಾವಯೇತ್ಪೂರ್ಣಂ ಐಕ್ಯಭಾವೇನ ಸರ್ವತಃ ।
ಏತತ್ತ್ರಿಪುಟಸಂಧಾನ ಲಕ್ಷಣಂ ಪರಿಕೀರ್ತಿತಂ ॥೯೪॥
ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ ।
ಮಾನವಶ್ಶಿವಯೋಗೇನ ಶಿವೋ ಭವತಿ ನಿಶ್ಚಯಂ ॥೯೫॥
ಅನೇಕ ವರ್ತ್ಮನಾ ಗಚ್ಛನ್ ಸ ಜೀವನ್ನೇವ ಶಂಕರಃ ।
ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ ॥

---

೯೨–೯೪. ಶಿವಯೋಗಿಯು ಅನುಷ್ಠಾನಮಾಡಬೇಕಾಗಿರುವ ತ್ರಿಪುಟ ಸಂಧಾನದ ಲಕ್ಷಣವನ್ನು ಹೇಳುವೆನು. ಸ್ಥೂಲದೇಹದೊಡನೆ ಲಿಂಗದ ಐಕ್ಯವನ್ನೂ, ಸೂಕ್ಷ್ಮ ದೇಹದೊಡನೆ ಮನಸ್ಸಿನ ಐಕ್ಯವನ್ನೂ, ಹಾಗೆಯೇ ಕಾರಣದೇಹದೊಡನೆ ಆತ್ಮನ ಐಕ್ಯವನ್ನೂ ಸರ್ವದಾ ಜಾಗರೂಕನಾಗಿ ಭಾವಿಸಬೇಕು. ದೇಹದಿಂದ ಲಿಂಗವನ್ನು ಧರಿಸುತ್ತಾ, ಮನಸ್ಸಿನಿಂದ ಶಂಕರನನ್ನು ಧ್ಯಾನಿಸುತ್ತಾ, ತನ್ನ ಆತ್ಮನಿಂದ ಕಾರಣವನ್ನು ಭಾವಿಸುತ್ತಾ, ಎಲ್ಲೆಡೆಯಲ್ಲೂ ಪೂರ್ಣವಾಗಿರುವ ತತ್ವವನ್ನು ಅಭೇದ ಜ್ಞಾನದಿಂದ ಭಾವಿಸುತ್ತಿರಬೇಕು. ಇದಕ್ಕೇ ತ್ರಿಪುಟ ಸಂಧಾನವೆಂದು ವ್ಯವಹಾರವಿದೆ.

೯೫. ಹಸುರು ಹುಳುವು ಭ್ರಮರವನ್ನು ಸರ್ವದಾ ಧ್ಯಾನಿಸುತ್ತಿರುವುದರಿಂದ ಕಾಲಕ್ರಮದಲ್ಲಿ ಭ್ರಮರವೇ ಆಗಿಬಿಡುತ್ತದೆ. ಅದರಂತೆ ಮಾನವನು ಶಿವಯೋಗದಿಂದ ಕ್ರಮವಾಗಿ ಶಿವನೇ ಆಗುವನು. ಇದು ನಿಜವು.

೯೬–೯೭. ಈ ರೀತಿಯಲ್ಲಿ ಶಿವಯೋಗದಿಂದ ಮುಂದುವರಿಯುವವನು ಬದುಕಿರುವಾಗಲೇ ಶಂಕರ ಸ್ವರೂಪನಾಗಿರುತ್ತಾನೆ. ಬ್ರಹ್ಮಾ

ಯೇನ ಸ್ತ್ರುವತಿ ತನ್ಮಂತ್ರಂ ಪ್ರಾಣಿಮಂತ್ರಂ ವದಂತಿ ಹಿ ।
ಪವಿತ್ರತ್ವಾನ್ಮಹೇಶಸ್ಯ ಶಿವಸ್ಯ ಪ್ರತಿಪಾದನಾತ್ ॥೧೦೫॥

ಪವಿತ್ರಕರಣಾತ್ಪುಂಸಾಂ ಪವಿತ್ರಮಿತಿ ಕಥ್ಯತೇ ।
ಅತಸ್ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ ॥೧೦೬॥

ಗಚ್ಛಂಸ್ತಿಷ್ಠನ್ ಸ್ವಪನ್ ಜಾಗ್ರನ್ ಉನ್ಮಿಷನ್ನಿಮಿಷನ್ನಪಿ ।
ಶುಚಿರ್ವಾಽಪ್ಯಶುಚಿರ್ವಾಽಪಿ ಲಿಂಗಂ ಸರ್ವತ್ರ ಧಾರಯೇತ್ ॥೧೦೭॥

ಲಿಂಗಧಾರೀ ಸದಾ ಶುದ್ಧಃ ನಿಜಲಿಂಗಂ ಮನೋರಮಂ ।
ಅರ್ಚಯನ್ ಗಂಧಪುಷ್ಪಾದ್ಯೈಃ ಕರವೀರೈಸ್ಸಮಾಹಿತಃ ॥೧೦೮॥

ನಿತ್ಯಾನಿ ಕರ್ಮಬೃಂದಾನಿ ತಥಾ ನೈಮಿತ್ತಿಕಾನಿ ಚ ।
ಶಿವಾರ್ಪಣಧಿಯಾ ಕುರ್ಯಾತ್ ಸಮ್ಯಕ್‌ಜ್ಞಾನಾಭಿವೃದ್ಧಯೇ ॥

---

೧೦೫. ಪವಿತ್ರಕ್ಕೆ ಅಭಿಮಾನಿ ದೇವನಾದ ಮಹೇಶನ ಪರಿಶುದ್ಧತೆಯಿಂದಲೂ, ಶಿವನನ್ನು ತಿಳಿಯಿಸಿಕೊಡುವುದರಿಂದಲೂ, ಅದನ್ನು ಧರಿಸಿದವರನ್ನೂ ಪರಿಶುದ್ಧರನ್ನಾಗಿ ಮಾಡುವುದರಿಂದಲೂ, ಪವಿತ್ರವೆಂದು ಹೆಸರು ರೂಢಿಯಲ್ಲಿದೆ.

೧೦೬–೧೦೭. ಆದುದರಿಂದ ಎಲ್ಲಕಾಲಗಳಲ್ಲೂ ಉತ್ತಮವಾದ ಈ ಲಿಂಗವನ್ನು ಧರಿಸಿರಬೇಕು. ತಿರುಗಾಡುತ್ತಿರುವಾಗಲೂ, ನಿಂತಿರುವಾಗಲೂ, ನಿದ್ರಿಸುವಾಗಲೂ, ಎಚ್ಚತ್ತಿರುವಾಗಲೂ, ರೆಪ್ಪೆಯನ್ನು ತೆಗೆದಿರುವಾಗಲೂ, ಮುಚ್ಚಿರುವಾಗಲೂ, ಮಡಿಯಾಗಿರುವಾಗಲೂ, ಮೈಲಿಗೆಯಲ್ಲಿರುವಾಗಲೂ, ಎಲ್ಲೆಡೆಗಳಲ್ಲೂ ಲಿಂಗವನ್ನು ಧರಿಸಿಯೇ ಇರಬೇಕು.

೧೦೮. ಮನೋಹರವಾದ, ತಾನು ಧರಿಸಿರುವ ಲಿಂಗವನ್ನು ಕಣಿಗಲೆ ಹೂವುಮುಂತಾದ ಹೂವುಗಳಿಂದಲೂ, ಗಂಧ ಮುಂತಾದ ಸಾಮಗ್ರಿಗಳಿಂದಲೂ ಚಿತ್ತ ಸಮಾಧಾನವುಳ್ಳವನಾಗಿ ಅರ್ಚಿಸುತ್ತಿರುವ, ಲಿಂಗವನ್ನು ಧರಿಸಿರುವ ಮಾನವನು ಯಾವಾಗಲೂ ಪರಿಶುದ್ಧನಾಗಿರುತ್ತಾನೆ.

೧೦೯. ಮಾನವನು ಶಾಸ್ತ್ರದಲ್ಲಿ ವಿಹಿತವಾಗಿರುವ ನಿತ್ಯ ಕರ್ಮಗಳನ್ನೂ, ನೈಮಿತ್ತಿಕಗಳಾದ ಕರ್ಮಗಳನ್ನೂ, ಶಿವನಲ್ಲಿ ಶಿವನಪ್ರೀತ್ಯರ್ಥವಾಗಿ ಸಮರ್ಪಿ

ಕರ್ಮಣಾ ಜ್ಞಾನವಾನ್ ಭೂತ್ವಾ ಜ್ಞಾನೇನಾನಂದಮಾಪ್ನುಯಾತ್ ।
ಜ್ಞಾನಾದೇವ ತು ಕೈವಲ್ಯ ಮಿತಿ ವೇದವಿದಾಂ ವರಾಃ ॥೧೧೦॥

ಅಕೃತ್ವಾ ವಿಹಿತಂ ಕರ್ಮ ನಿಷಿದ್ಧಂ ಪರಿವರ್ಜಯೇತ್ ।
ನಿಷಿದ್ಧಪರಿಹಾರೇಣ ವಿಹಿತೇ ಲಭತೇ ಮತಿಂ ॥೧೧೧॥

ತಸ್ಮಾತ್ಸರ್ವಪ್ರಯತ್ನೇನ ಶಿವಾರಾಧನತತ್ಪರಃ ।
ನಿತ್ಯಂ ನೈಮಿತ್ತಿಕಂ ಕೃತ್ವಾ ಕಾಮ್ಯಂ ಕರ್ಮ ಸದಾ ತ್ಯಜೇತ್ ॥೧೧೨॥

ನ ಕರ್ಮಣಾ ನ ಪ್ರಜಯಾ ಧನೇನ ಚ ಸದೈವ ಹಿ ।
ಅಮೃತತ್ವಮವಾಪ್ನೋತಿ ತ್ಯಾಗೇನೈಕೇನ ಕೇವಲಂ ॥೧೧೩॥

---

ಸುತ್ತಾ ಆಚರಿಸುತ್ತಿರಬೇಕು. ಹೀಗೆ ಮಾಡುವುದರಿಂದ ನಿಜವಾದ ತತ್ತ್ವ ಜ್ಞಾನವು ಉಂಟಾಗಿ ಬೆಳೆಯುತ್ತದೆ.

೧೧೦. ಈ ಕರ್ಮಾನುಷ್ಠಾನದಿಂದ ಶಿವನ ಜ್ಞಾನವನ್ನು ಪಡೆದು, ಆ ಜ್ಞಾನದಿಂದ ಆನಂದವನ್ನೂ ಅನುಭವಿಸಬೇಕು. ಜ್ಞಾನದಿಂದಲೇ ಮೋಕ್ಷವು ಉಂಟಾಗುತ್ತದೆಂದು ವೇದಗಳನ್ನು ತಿಳಿದವರಲ್ಲಿ ಉತ್ತಮರಾಗಿರುವವರು ಹೇಳುತ್ತಾರೆ.

೧೧೧. ಶಾಸ್ತ್ರದಲ್ಲಿ ವಿಹಿತವಾಗಿರುವ ಕರ್ಮವನ್ನು ಮಾಡದಿದ್ದರೆ, ಶಾಸ್ತ್ರದಲ್ಲಿ ನಿಷಿದ್ಧವಾಗಿರುವ ಕರ್ಮವನ್ನು ಮಾಡದಿರಬೇಕು. ಅದರಿಂದ ವಿಹಿತಕರ್ಮಗಳ ಅನುಷ್ಠಾನದಲ್ಲಿ ಬುದ್ಧಿಯು ಉಂಟಾಗುತ್ತದೆ

೧೧೨. ಆದುದರಿಂದ ಮಾನವನು ಎಲ್ಲ ಪ್ರಯತ್ನದಿಂದಲೂ ಶಿವನನ್ನು ಆರಾಧಿಸುತ್ತಿರುವುದರಲ್ಲಿ ಆಸಕ್ತಿಯುಳ್ಳವನಾಗಿರುತ್ತಾ, ನಿತ್ಯ ಮತ್ತು ನೈಮಿತ್ತಿಕ ಕರ್ಮಗಳನ್ನು ಮಾಡುತ್ತಾ, ಕಾಮ್ಯಕರ್ಮಗಳನ್ನು ಯಾವಾಗಲೂ ಮಾಡದೆ ಇರಬೇಕು.

೧೧೩. ಕರ್ಮಗಳನ್ನು ಆಚರಿಸುವುದರಿಂದಲಾಗಲಿ, ಮಕ್ಕಳನ್ನು ಪಡೆಯುವುದರಿಂದಲಾಗಲಿ, ಧನವನ್ನು ಗಳಿಸುವುದರಿಂದಲಾಗಲಿ. ಮಾನವನು ಮೋಕ್ಷವನ್ನು ಪಡೆಯುವುದಿಲ್ಲವು. ಮತ್ತೇನೆಂದರೆ ಸನ್ಯಾಸಒಂದರಿಂದಲೇ ಮುಕ್ತಿಯನ್ನು ಪಡೆಯುತ್ತಾನೆ.

ಅವಿದ್ಯಾಪಟಲಂ ಛೇತ್ತುಂ ಸಮರ್ಥಂ ಕರ್ಮ ಚೋದಿತಂ ।
ಕರ್ಮಣಃ ಪಾಶರೂಪತ್ವಾತ್ ಪಾಶಾ ಬಂಧನಹೇತವಃ ॥೧೧೪॥
ಅವಿರೋಧಿತಯಾ ಕರ್ಮ ನಾವಿದ್ಯಾಂ ವಿನಿವರ್ತಯೇತ್ ।
ವಿದ್ಯಾಽವಿದ್ಯಾಂ ನಿಹಂತ್ಯೇವ ತೇಜಸ್ತಿಮಿರಸಂಘವತ್ ॥೧೧೫॥
ಅವಿಚ್ಛಿನ್ನಮಿವಾಜ್ಞಾನಂ ತನ್ನಾಶೇ ಸತಿ ಕೇವಲಂ ।
ಸ್ವಯಂ ಪ್ರಕಾಶತೇ ಲಿಂಗಂ ಮೇಘಾಪಾಯೇಽಂಶುಮಾನಿವ ॥೧೧೬॥
ಅಜ್ಞಾನಕಲುಷಂ ಜೀವಂ ಜ್ಞಾನಾಭ್ಯಾಸಾದ್ವಿನಿರ್ಮಲಂ ।
ಕೃತ್ವಾ ಜ್ಞಾನಂ ಸ್ವಯಂ ನಶ್ಯೇತ್ ಜಲಂ ಕತಕರೇಣುವತ್ ॥೧೧೭॥

---

೧೧೪-೧೧೫. ಅಜ್ಞಾನದ ಸಮೂಹವನ್ನು ನಾಶಗೊಳಿಸಲು ಕರ್ಮವು ವೇದಶಾಸ್ತ್ರಗಳಲ್ಲಿ ವಿಹಿತವಾಗಿದೆ. ಆದರೂ ಕರ್ಮವು ತಾನೇ ಪಾಶ ರೂಪವಾಗಿದೆ. ಪಾಶಗಳು ಹಗ್ಗಗಳಂತೆ ಬಂಧನಕ್ಕೆ ಕಾರಣಗಳಾಗಿ ರುತ್ತವೆ. ಆದುದರಿಂದ, ಕರ್ಮವು ಅಜ್ಞಾನಕ್ಕೆ ವಿರೋಧಿಯಾಗಿಲ್ಲದುದ ರಿಂದ, ಅದು ಅಜ್ಞಾನವನ್ನು ಹೋಗಲಾಡಿಸಲಾರದು. ಆದರೆ ತಿಳಿವಳಿಕೆ ಯಾದರೋ ಅಜ್ಞಾನವನ್ನು, ಕತ್ತಲೆಯನ್ನು ಬೆಳಕು ಹೇಗೋ ಹಾಗೆ, ನಾಶಮಾಡಿಯೇ ಬಿಡುತ್ತದೆ.

೧೧೬. ಅಜ್ಞಾನವು ಅವಿಚ್ಛಿನ್ನವಾಗಿ ಅನುಸ್ಯೂತವಾಗಿ ಆವರಿಸಿ ರುತ್ತದೆ. ಆದರೆ ಅದುನಾಶವಾದರೆ ಮಾತ್ರ ಲಿಂಗವು ತಾನಾಗಿಯೇ ಬೆಳ ಗುತ್ತದೆ. ಕವಿದಿರುವ ಮೋಡಗಳು ಜಾರಿದರೆ ಸೂರ್ಯನು ಗೋಚರಿಸು ವಂತೆ ಶಿವನು ಪ್ರಕಾಶಿಸುತ್ತಾನೆ.

೧೧೭. ಅಜ್ಞಾನದಿಂದ ದುಃಖದೋಷವುಳ್ಳ ಜೀವನು ಪುನಃಪುನಃ ಜ್ಞಾನವನ್ನು ಪಡೆಯುವುದರಿಂದ ನಿರ್ಮಲನಾಗುತ್ತಾನೆ. ಈ ಜ್ಞಾನವು ಜೀವನನ್ನು ದೋಷರಹಿತನನ್ನಾಗಿ ಮಾಡಿದಮೇಲೆ, ಬಗ್ಗಡವಾಗಿದ್ದ ನೀರನ್ನು ತಿಳಿಯಾಗುವಂತೆ ಮಾಡುವ ಕತಕ (ಚಿಲ್ಲದ ಬೀಜ) ದ ರೇಣು ವಿನಂತೆ, ತಾನೂ ಅಡಗುತ್ತದೆ.

ಸಂಸ್ಕಾರಸ್ಸ್ವಪ್ನತುಲ್ಯೋ ಹಿ ರಾಗದ್ವೇಷಾದಿ ಸಂಕುಲಃ ।
ಸ್ವಕಾಲೇ ಸತ್ಯವದ್ಭಾತಿ ಪ್ರಬೋಧೇಽಸತ್ಯವದ್ಭವೇತ್ ॥೧೧೮॥
ತಾವತ್ಸತ್ಯಂ ಜಗದ್ಭಾತಿ ಶುಕ್ತಿಕಾರಜತಂ ಯಥಾ ।
ಯಾವನ್ನ ಜ್ಞಾಯತೇ ಲಿಂಗಂ ಸರ್ವಾಧಿಷ್ಠಾನಮುದ್ವಯಂ ॥೧೧೯॥
ಸತ್ಯೇ ಲಿಂಗೇ ಹ್ಯನುಸ್ಯೂತೇ ನಿತ್ಯೇ ಲಿಂಗೇ ಪ್ರಕಲ್ಪಿತಾಃ ।
ಶಕ್ತಯೋ ವಿವಿಧಾ ಸ್ಸರ್ವಾಃ ಹಾಟಕೇ ಕಟಕಾ ದಿವತ್ ॥೧೨೦॥
ನಾನೋಪಾಧಿವಶಾದೇವ ನಾಮಜಾತ್ಯಾಶ್ರಮಾದಯಃ ।
ಲಿಂಗೇ ಹ್ಯಾರೋಪಿತಾ ಸ್ತೇ ಯೇ ರಸವರ್ಣಾದಿಭೇದವತ್ ॥೧೨೧॥

---

೧೧೮. ಈ ಸಂಸಾರವು ರಾಗದ್ವೇಷ ಮುಂತಾದ ದೋಷಗಳಿಂದ ವ್ಯಾಕುಲವಾಗಿ ಸ್ವಪ್ನದಂತೆ ತೋರಿಕೆಯ ರೂಪವುಳ್ಳದ್ದಾಗಿ ಕಾಣುತ್ತಿದೆ. ತಾನು ತೋರುತ್ತಿರುವಾಗ ಸತ್ಯವಾಗಿರುವಂತೆಯೇ ಕಾಣುತ್ತಿರುತ್ತದೆ. ಜ್ಞಾನವು ಬೆಳಗಿದಮೇಲೆ ಅಸತ್ಯವಾಗಿರುವಂತೆ ಗೊತ್ತಾಗುತ್ತದೆ.

೧೧೯. ಕಪ್ಪೆಯ ಚಿಪ್ಪಿನ ಚೂರಿನಲ್ಲಿ ಬೆಳ್ಳಿಯು ತೋರುತ್ತಿರುವಂತೆ, ಈ ಚರಾಚರ ಪ್ರಪಂಚವೂ ತೋರುತ್ತಿರುತ್ತದೆ. ಬೆಳ್ಳಿಯ ತೋರಿಕೆಗೆ ಚಿಪ್ಪು ಅಧಿಷ್ಠಾನವಾಗಿರುವಂತೆ, ಈ ಜಗತ್ತಿನ ತೋರಿಕೆಗೆ ಅಧಿಷ್ಠಾನವಾಗಿರುವ ಲಿಂಗದ ಎಂದರೆ ಪರಬ್ರಹ್ಮ ಚೈತನ್ಯದ ಅದ್ವಿತೀಯ ಸ್ವರೂಪವು ತಿಳಿದಮೇಲೆ, ಈ ಸಂಸಾರದ ತೋರಿಕೆಯೂ ಅಡಗಿಹೋಗುತ್ತದೆ.

೧೨೦. ಸತ್ಯಲಿಂಗವು ಸಂತತವಾಗಿದ್ದರೂ, ನಿತ್ಯಲಿಂಗದಲ್ಲಿ ನಾನಾಬಗೆಯ ಶಕ್ತಿಗಳು ಎಲ್ಲವೂ, ಚಿನ್ನದಲ್ಲಿ ಬಳೆ, ಕಡಗ, ಕುಂಡಲಗಳ ಹಾಗೆ, ಕಲ್ಪಿತವಾಗಿ ತೋರುತ್ತಿರುತ್ತವೆ.

೧೨೧. ನಾನಾವಿಧಗಳಾದ ಉಪಾಧಿಗಳ ಸ್ವಭಾವವನ್ನು ಅನುಸರಿಸಿ, ನಾಮ, ರೂಪ, ಜಾತಿ, ಆಶ್ರಮ, ಮುಂತಾದವುಗಳು ಲಿಂಗದಲ್ಲಿ ಎಂದರೆ ಪರಬ್ರಹ್ಮಚೈತನ್ಯದಲ್ಲಿ, ಅಜ್ಞಾನದಿಂದ ಕಲ್ಪಿತವಾಗಿ, ಷಡ್ರಸಗಳೂ, ಷಡ್ವರ್ಣಗಳೂ ಹೇಗೆ ತೋರುತ್ತಿರುತ್ತವೋ ಹಾಗೆ, ತೋರುತ್ತಿರುತ್ತವೆ.

ಆಚಾರ್ಯಲಿಂಗಂ ಪ್ರಥಮಂ ಗುರುಲಿಂಗಂ ದ್ವಿತೀಯಕಂ ।
ಶಿವಲಿಂಗಂ ತೃತೀಯಂ ಸ್ಯಾತ್ ಚರಲಿಂಗಂ ಚತುರ್ಥಕಂ ॥೧೨೨॥

ಪ್ರಸಾದಂ ಪಂಚಮಂ ಲಿಂಗಂ ಮಹಾಲಿಂಗಂ ತು ಷಷ್ಠಕಂ ।
ಭಕ್ತೋ ಮಹೇಶ್ವರಶ್ಚೈವ ಪ್ರಸಾದೀ ಪ್ರಾಣಲಿಂಗಕಃ ॥೧೨೩॥

ಶರಣೈಕಂ (ಕ್ಯಂ) ಸ್ಥಲೈಷ್ಷಡ್ಭಿಃ ಕ್ರಮಾಲ್ಲಿಂಗಮುದಾಹೃತಂ ॥
ಸಹಸ್ರಾರಾಂಬುಜಗತಾ ಚಂದ್ರಮಂಡಲ ಮಧ್ಯತಃ ॥೧೨೪॥

ಗುರುಂ ತನ್ಮಂತ್ರತೋಽವಾಹ್ಯ ತದ್ವಾಮಾಂಕಸ್ಥಶಕ್ತಿಕಂ ।
ಶುದ್ಧಸ್ಫಟಿಕಸಂಕಾಶಂ ಶ್ವೇತವಸ್ತ್ರಧರಂ ಪರಂ ॥೧೨೫॥

ತತ್ವಪ್ರಸೂನಮಾಲ್ಯಾದಿ ಭೂಷಣೇನ ವಿಭೂಷಿತಂ ।
ವರಾಭಯಕರಂ ಧೀರಂ ತ್ರಿನೇತ್ರಂ ಕರುಣಾನಿಧಿಂ ॥೧೨೬॥

---

೧೨೨. ಈ ಲಿಂಗವು ಆರು ಬಗೆಯ ರೂಪವುಳ್ಳದ್ದಾಗಿದೆ. ಮೊದಲನೆಯದು ಆಚಾರ್ಯಲಿಂಗವು, ಎರಡನೆಯದು ಗುರುಲಿಂಗವು, ಮೂರನೆಯದು ಶಿವಲಿಂಗವು, ನಾಲ್ಕನೆಯದು ಚರಲಿಂಗವು, ಐದನೆಯದು ಪ್ರಸಾದಲಿಂಗವು, ಆರನೆಯದೇ ಮಹಾಲಿಂಗವು. ಎಂದು ಭಾವಿಸಲ್ಪಡುತ್ತದೆ.

೧೨೩. ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಸ್ಥಲ, ಶರಣಸ್ಥಲ, ಐಕ್ಯಸ್ಥಲ, ಎಂದು ಆರುಸ್ಥಳಗಳಲ್ಲಿ ಮೇಲೆಹೇಳಿದ ಆರುಲಿಂಗಗಳನ್ನು ಕ್ರಮವಾಗಿ ಭಾವಿಸಬೇಕು.

೧೨೪–೧೨೬. ಚಂದ್ರಮಂಡಲದ ಮಧ್ಯದಲ್ಲಿ ಸಾವಿರ ದಳಗಳುಳ್ಳ ಕಮಲದಲ್ಲಿರುವ ಗುರುಲಿಂಗವನ್ನು ಆ ಮಂತ್ರದಿಂದ ಆವಾಹನಮಾಡಿ, ಅದರಲ್ಲಿ ಎಡಭಾಗದಲ್ಲಿ ಸರ್ವಕಾರಣವಾದ ಶಕ್ತಿಯನ್ನೂ ಆವಾಹಿಸಿ, ನಿರ್ಮಲವಾದ ಸ್ಫಟಿಕದಂತೆ ಬೆಳಗುತ್ತಿರುವ, ಶುಭ್ರವಾಗಿರುವ ವಸ್ತ್ರಗಳನ್ನು ಧರಿಸಿರುವ, ಸರ್ವೋತ್ತಮವಾಗಿರುವ, ತತ್ವಗಳೆಂಬ ಹೂವುಗಳ ಮಾಲಿಕೆಯೇ ಮುಂತಾದ ಆಭರಣಗಳಿಂದ ಅಲಂಕೃತವಾಗಿರುವ, ವರದಹಸ್ತ ಅಭಯ ಹಸ್ತ ಮುದ್ರೆಗಳಿಂದ ಕೂಡಿರುವ, ಗಂಭೀರವಾದ, ಮೂರು ಕಣ್ಣುಗಳುಳ್ಳ, ದಯಾಳುವಾದ ಶಿವನನ್ನು ಧ್ಯಾನಿಸಬೇಕು.

ಪರಮಾನಂದಮುದಿತಂ ಮಂದಸ್ಮಿತಮುಖಾಂಬುಜಂ ।
ಏಕಲಿಂಗಂ ತ್ರಯಂ ರೂಪಂ ಚರೇಷ್ಟ ಗುರುನಾಮತಃ ॥೧೨೭॥

ಷಟ್ಚಕ್ರಸ್ಥಾನಸಂಚಾರೋ ಜ್ಯೋತೀರೂಪೋ ಮಹೇಶ್ವರಃ ।
ಸ್ವಯಂಭುಲಿಂಗಂ ಪ್ರಥಮಂ ಬಾಣಲಿಂಗಂ ದ್ವಿತೀಯಕಂ ॥೧೨೮॥

ತೃತೀಯ ಮಾಕರಂ ಲಿಂಗಂ ಪರಲಿಂಗಂ ಚತುರ್ಥಕಂ ।
ಚಿಲ್ಲಿಂಗಂ ಪಂಚಮಂ ಜ್ಞೇಯಂ ಷಷ್ಠಮಾನಂದ ಲಿಂಗಕಂ ॥೧೨೯॥

ಜ್ಯೋತಿರ್ಲಿಂಗಂ ಸಪ್ತಮಂ ತು ವಿಜ್ಞೇಯಂ ಯೋಗಿಭಿಸ್ಸದಾ ।
ಬಿಂದು ಸ್ವರೂಪಾ ಮಲಮೂಲಪೀಠಂ ।
ನಾದಸ್ವರೂಪ ಸ್ಫುರದೂರ್ಧ್ವಪೀಠಂ ॥೧೩೦॥

---

೧೨೭. ಸರ್ವೋತ್ತಮವಾದ ಆನಂದದಿಂದ ತೃಪ್ತನಾಗಿರುವ, ಮಂದ ಹಾಸದಿಂದ ಕೂಡಿದ ಕಮಲ ಸದೃಶವಾದ ಮುಖವುಳ್ಳ. ಶಿವನೆಂಬ ಒಂದೇ ಲಿಂಗವೇ ಚರಲಿಂಗ, ಇಷ್ಟಲಿಂಗ, ಗುರುಲಿಂಗ ಎಂಬ ಹೆಸರು ಗಳಿಂದ ಪ್ರಸಿದ್ಧವಾಗಿರುವ ಮೂರು ಲಿಂಗಗಳ ಸ್ವರೂಪದಲ್ಲಿರುತ್ತದೆ ಎಂದು ಭಾವಿಸುತ್ತಿರಬೇಕು.

೧೨೮-೧೨೯. ಮಹೇಶ್ವರನು ಜ್ಯೋತಿಸ್ಸ್ವರೂಪನಾಗಿ ಆರು ಚಕ್ರ ಸ್ಥಾನಗಳಲ್ಲಿ ಸಂಚರಿಸುತ್ತಿರುತ್ತಾನೆ. ಮೊದಲನೆಯದು ಸ್ವಯಂಭು ಲಿಂಗವು, ಎರಡನೆಯದು ಬಾಣಲಿಂಗವು, ಮೂರನೆಯದು ಆಕರಲಿಂಗವು ನಾಲ್ಕನೆಯದು ಪರಲಿಂಗವು, ಐದನೆಯದು ಚಿಲ್ಲಿಂಗವು, ಆರನೆಯದು ಆನಂದಲಿಂಗವು, ಏಳನೆಯದು ಜ್ಯೋತಿರ್ಲಿಂಗವು; ಈ ಏಳು ರೂಪಗ ಳನ್ನೂ ಯೋಗಿಗಳಾಗಿರುವವರು ಯಾವಾಗಲೂ ಭಾವಿಸುತ್ತಿರಬೇಕು.

೧೩೦. ಬಿಂದು ಸ್ವರೂಪವಾಗಿರುವ ನಿರ್ಮಲವಾದ ಮೂಲ ಪೀಠ ವುಳ್ಳಂಥಾ, ನಾದಸ್ವರೂಪವಾಗಿರುವ ಪ್ರಕಾಶಮಾನವಾದ ಮೇಲಿನ ಪೀಠವುಳ್ಳಂಥಾ, ಕಳಾಸ್ವರೂಪವಾಗಿರುವ ಅಡ್ಡಲಾದ ಗೋಮುಖದಿಂದ ಕೂಡಿರುವಂಥಾ, ಹೃದಯಕಮಲದಲ್ಲಿರುವ, ಚಿದ್ರೂಪವಾದ ಲಿಂಗವನ್ನು ಧ್ಯಾನಿಸುತ್ತಿರಬೇಕು. ಈ ವಿಷಯದಲ್ಲಿ ಹೆಚ್ಚಿನ ವಿವರಗಳನ್ನು ಪಂಚೋಪ ನಿಷತ್ತಿನಲ್ಲಿ ನಿರೂಪಿಸಿದ್ದೇನೆ.

ಕಳಾತ್ಮ ತಿರ್ಯಗ್ಗತ ಗೋಮುಖಾಢ್ಯಂ
ಚಿದ್ರೂಪಲಿಂಗಂ ಹೃದಯಾಬ್ಜಸಂಸ್ಥಂ ।
ಪುಷ್ಪಾಣ್ಯಹಿಂಸೇಂದ್ರಿಯ ನಿಗ್ರಹಶ್ಚ
ದಯಾಕ್ಷಮಾಜ್ಞಾನ ಸಮಾಹ್ವಯಾನಿ ॥೧೩೧॥

ಧ್ಯಾನಂ ತಪಸ್ಸತ್ಯಮಯೀಭಿರೇವಂ
ಪ್ರಪೂಜಯೇದಾತ್ಮನಿ ಸಿದ್ಧಲಿಂಗಂ ।
ಅತ ಏವ ಮಹಾಶ್ಚರ್ಯಂ ಯೋಗಮಷ್ಟಾಂಗಮಾದರಾತ್ ॥೧೩೨॥

ಶಿವಪೂಜಾಗಮೋ ತದ್ಧಿ ತಸ್ಮಾದಭ್ಯಸನಂ ಚರೇತ್ ।
ನಿರಂತರಕೃತಾಭ್ಯಾಸಾತ್ ಜರಾಮರಣವರ್ಜಿತಃ ॥೧೩೩॥

---

೧೩೧. ಈ ಚಿಲ್ಲಿಂಗದ ಪೂಜೆಗೆ, ಅಹಿಂಸೆ, ಇಂದ್ರಿಯಜಯ, ದಯಾ, ಕ್ಷಮಾ, ಜ್ಞಾನ ಎಂಬ ಹೆಸರುಳ್ಳ ಗುಣಗಳೇ ಹೂವುಗಳಾಗಿರುತ್ತವೆ. ಧ್ಯಾನ, ತಪಸ್ಸು. ಸತ್ಯರೂಪವಾಗಿರುವ ಉಪಚಾರಗಳಿಂದ ಆತ್ಮ ತತ್ತ್ವದಲ್ಲಿ ಈ ಸಿದ್ಧಲಿಂಗವನ್ನು ಚನ್ನಾಗಿ ಪೂಜಿಸಬೇಕು.

೧೩೨. ಆದುದರಿಂದ ತುಂಬ ಆಶ್ಚರ್ಯಕರವಾದ ಫಲವುಳ್ಳ ಈ ಅಷ್ಟಾಂಗ ಯೋಗವನ್ನು ಅನುಸರಿಸಿ ಶಿವಪೂಜೆಯನ್ನು ಆದರದೊಡನೆ ಮಾಡಬೇಕು. ಅದಕ್ಕೋಸ್ಕರವಾಗಿ ಪ್ರತಿದಿನವೂ ತಪ್ಪದೆ ಈ ಯೋಗದ ಅಭ್ಯಾಸವನ್ನು ನೆರವೇರಿಸುತ್ತಿರಬೇಕು.

೧೩೩. ಹೀಗೆ ಪ್ರತಿದಿನವೂ ಬಿಡದೆ ಈ ಅಷ್ಟಾಂಗ ಯೋಗವನ್ನು ಅಭ್ಯಾಸಮಾಡುತ್ತಿರುವುದರಿಂದ ಯೋಗಿಯಾದ ಭಕ್ತನು ಮುಪ್ಪು ಸಾವುಗಳಿಲ್ಲದವನಾಗಿ ತನ್ನ ಇಚ್ಛಾನುಸಾರವಾಗಿ ಬದುಕಿರುತ್ತಾನೆ. ಅನಂತರದಲ್ಲಿ ಮೋಕ್ಷವನ್ನೂ ಪಡೆಯುವನು.

ಸ ಜೀವೇದಿಚ್ಛಯಾ ಲೋಕೇ ತತೋ ಮುಕ್ತಿಮವಾಪ್ನುಯಾತ್ ।
ಯಮೇನ ನಿಯಮೇನೈವ ಮುಕ್ತೋ ಭಕ್ತ ಇತಿ ಸ್ಮೃತಃ ॥೧೩೪॥
ಸ್ಥಿರಾಸನಸಮಾಯುಕ್ತೋ ಮಹೇಶ್ವರಪದಾನ್ವಿತಃ ।
ಚರಾಚರಲಯಸ್ಥಾನಂ ಲಿಂಗಮಾಕಾಶಸಂಜ್ಞಿತಂ ॥೧೩೫॥
ಪ್ರಾಣೇ ತದ್ಯೋಗವಿನ್ನ್ಯಸ್ಯ ಸಂಲೀನೇ ಪ್ರಾಣಲಿಂಗೀ ಭವೇತ್ಪುಮಾನ್ ।
ಪ್ರತ್ಯಾಹಾರೇಣ ಸಂಯುಕ್ತಃ ಪ್ರಸಾದೀತಿ ನ ಸಂಶಯಃ ॥೧೩೬॥
ಧ್ಯಾನಧಾರಣ ಸಂಯುಕ್ತಃ ಶರಣಸ್ಥಲವಾನ್ ಸುಧೀಃ ।
ಲಿಂಗೈಕ್ಯೋಽದ್ವೈತಭಾವಾತ್ಮಾ ನಿಶ್ಚಲೈಕಸಮಾಧಿನಾ ॥೧೩೭॥

---

೧೩೪. ಈ ಯೋಗದ ಎಂಟುಅಂಗಗಳಲ್ಲಿ ಕ್ರಮವಾಗಿ ಭಕ್ತನು ಪಡೆಯುವ ಷಟ್‌ಸ್ಥಲ (ಆರುಮೆಟ್ಟಲು, ಅಂತಸ್ತು) ಗಳನ್ನು ವಿವರಿಸ ಲಾಗಿದೆ. ಯಮವನ್ನೂ ನಿಯಮವನ್ನೂ ಅಭ್ಯಾಸ ಮಾಡುವುದರಲ್ಲಿ ಸಿದ್ಧಿಯನ್ನು ಪಡೆದಿರುವವನಿಗೆ ಭಕ್ತನೆಂದು ಹೆಸರಾಗುತ್ತದೆ. ಆಸನ ವೆಂಬ ಮೂರನೆಯ ಸಾಧನಯೋಗದಲ್ಲಿ ಸಿದ್ಧಿಹೊಂದಿದವನಿಗೆ ಮಹೇಶ್ವರ ನೆಂದು ಹೆಸರು.

೧೩೫. ಈ ಚರಾಚರ ಪ್ರಪಂಚವೆಲ್ಲವೂ ಲಯವನ್ನು ಹೊಂದುವ ಅಧಿಷ್ಠಾನಕ್ಕೆ ಆಕಾಶಲಿಂಗವೆಂದು ವ್ಯವಹಾರವಿದೆ. ಅಂತಹ ಆಕಾಶದಲ್ಲಿ ಪ್ರಾಣಾಯಾಮದಿಂದ ಪ್ರಾಣವನ್ನೂ ಲಯಮಾಡಿ ಕೊಂಡಿರುವ ಪುರುಷ ನಿಗೆ ಪ್ರಾಣಲಿಂಗೀ ಎಂದು ಹೆಸರಿದೆ.

೧೩೬. ಪ್ರತ್ಯಾಹಾರವೆಂಬ ಐದನೆಯ ಸಾಧನಯೋಗದ ಅಭ್ಯಾಸ ವನ್ನು ಮಾಡಿ ಸಿದ್ಧಿಯನ್ನು ಪಡೆದಿರುವ ಯೋಗಿಗೆ ಪ್ರಸಾದೀ ಎಂದು ಹೆಸರು. ಧ್ಯಾನ, ಧಾರಣಾ, ಎಂಬಯೋಗ (ಆರನೆಯ ಮತ್ತು ಏಳ ನೆಯ ಸಾಧನ ಯೋಗ) ಗಳಲ್ಲಿ ಸಿದ್ಧಿಯನ್ನು ಪಡೆದಿರುವ ಯೋಗಿಯು ಶರಣಸ್ಥಲವೆಂಬ ಅಂತಸ್ತನ್ನು ತಲಪಿರುತ್ತಾನೆ.

೧೩೭. ಕಡೆಯದಾದ ಸಮಾಧಿ ಎಂಬ ಎಂಟನೆಯದಾದ ಸಾಧನ ಯೋಗದಿಂದ ಸಿದ್ಧಿಯನ್ನು ಪಡೆದವನು ಲಿಂಗೈಕ್ಯವನ್ನು ಗುರು ಚರ ಇಷ್ಟ

ಏವಮಷ್ಟಾಂಗಯೋಗೇನ ಚಿರಜೀವೀ ಭವೇನ್ನರಃ ।
ತಸ್ಮಾತ್ಸರ್ವಪ್ರಯತ್ನೇನ ಕರ್ಮಣಾ ಜ್ಞಾನತೋಽಪಿ ವಾ ॥೧೩೮॥
ಸದಾ ಚಾಷ್ಟಾಂಗಮಾರ್ಗೇಣ ಶಿವಪೂಜಾಂ ಸಮಭ್ಯಸೇತ್ ।
ಅಂತರ್ಲಿಂಗಾನುಸಂಧಾನಂ ಆತ್ಮವಿದ್ಯಾಪರಿಶ್ರಮಃ ॥೧೩೯॥
ಗುರೂಪಾಸನಶ(ಸ) ಕ್ತಿಶ್ಚ ಕಾರಣಂ ಮೋಕ್ಷಸಂಪದಾಂ ।
ವೈರಾಗ್ಯಜ್ಞಾನಯುಕ್ತಾನಾಂ ಯೋಗಿನಾಂ ಸ್ಥಿರಚೇತಸಾಂ ॥೧೪೦॥

---

ಲಿಂಗಗಳ ಅದ್ವೈತಭಾವವನ್ನು ಸಾಕ್ಷಾತ್ಕಾರದಿಂದ ಅಪರೋಕ್ಷಾನುಭವವಾಗಿ ಪಡೆದಿರುವವನು ಕಷ್ಟಸಾಧ್ಯವಾದ ನಿರ್ವಿಕಲ್ಪ ಸಮಾಧಿಯಲ್ಲಿ ತಲುಪಿ ನೆಲೆಸಿರುತ್ತಾನೆ. ಈ ರೀತಿಯಲ್ಲಿ ಎಂಟು ಅವಯವಗಳುಳ್ಳ ಈ ಯೋಗದ ಅಭ್ಯಾಸದಿಂದ ಯೋಗಿಯು ಚಿರಂಜೀವಿಯಾಗುತ್ತಾನೆ.

೧೩೮. ಆದುದರಿಂದ ಎಲ್ಲಪ್ರಯತ್ನಗಳನ್ನೂ ಮಾಡಿ ವೇದಶಾಸ್ತ್ರೋಕ್ತವಾದ ಕರ್ಮಗಳಿಂದಲಾಗಲಿ, ಜ್ಞಾನದಿಂದಲಾಗಲಿ, ಯಾವಾಗಲೂ ಈ ಅಷ್ಟಾಂಗಯೋಗ ಮಾರ್ಗವನ್ನು ಅನುಸರಿಸಿ ಅಭ್ಯಾಸವನ್ನು ಮಾಡುತ್ತಾ, ಶಿವಪೂಜೆಯನ್ನು ನೆರವೇರಿಸುತ್ತಿರಬೇಕು. ಇಲ್ಲಿ ಕರ್ಮಜ್ಞಾನಗಳಿಗೆ ವಿಕಲ್ಪದಿಂದ ನೇರವಾಗಿ ಮತ್ತು ಸ್ವತಂತ್ರವಾಗಿ ಮೋಕ್ಷಸಾಧನತ್ವವನ್ನು ಹೇಳಿರುವುದು ಪೂರ್ವಾಪರಗಳ ವಿರೋಧವನ್ನು ಸೂಚಿಸುವಂತಿರುತ್ತದೆ.

೧೩೯. ಹೃದಯಾಂತರಾಳದಲ್ಲಿ ಲಿಂಗಸ್ವರೂಪವನ್ನು ಧ್ಯಾನಿಸುತ್ತಿರುವಿಕೆಯೂ, ಆತ್ಮಸ್ವರೂಪವನ್ನು ತಿಳಿಯುವುದರಲ್ಲಿ ವಿಚಾರ ವಿಮರ್ಶೆಗಳಿಂದ ಶ್ರಮಿಸುತ್ತಿರುವಿಕೆಯೂ, ಸದ್ಗುರುವನ್ನು ಆಶ್ರಯಿಸುವುದರಿಂದ ಉಪದೇಶದ ಮೂಲಕವಾಗಿ ಉಂಟಾಗುವ ಜ್ಞಾನಶಕ್ತಿಯೂ, ಇವೆಲ್ಲವೂ ಮುಕ್ತಿ ಸಂಪತ್ತನ್ನು ಪಡೆಯುವ ನೇರವಾದ ಮತ್ತು ಸ್ವತಂತ್ರವಾದ ಕಾರಣವಾಗಿರುತ್ತದೆ.

೧೪೦. ವಿಷಯಾನುಭವದಲ್ಲಿ ವೈರಾಗ್ಯದಿಂದಲೂ, ಶಿವತತ್ವಜ್ಞಾನದಿಂದಲೂ ಕೂಡಿರುವ ನಿಶ್ಚಲವಾಗಿರುವ ಮನಸ್ಸುಳ್ಳ ಯೋಗಿಗಳಿಗೆ

ಅಂತರ್ಲಿಂಗಾನುಸಂಧಾನೇ ಶು (ರು) ಚಿರ್ಬಾಹ್ಯೇ ನ ಜಾಯತೇ ।
ತಸ್ಮಾತ್ಸರ್ವ ಪ್ರಯತ್ನೇನ ಗುರುಣಾ ಶಾಸ್ತ್ರವೇದಿನಾ ॥೧೪೧॥
ಅನುಗ್ರಹಾಯ ಯದ್ದತ್ತಂ ತಲ್ಲಿಂಗಂ ಪೂಜಯೇತ್ಸದಾ ।
ಮುನೇ ವಕ್ಷ್ಯೇ ವಿಶೇಷೇಣ ಶೃಣು ಲಿಂಗಾರ್ಚನಕ್ರಮಂ ॥೧೪೨॥
ಪೂಜೋಪಚಾರವಿಧಿನಾ ಷಟ್ತ್ರಿಂಶದ್ಭೇದಮೀರಿತಂ (ಭೇದಿತಂ) ।
ಪೂಜಾ ದ್ವಾದಶಧಾ ಪ್ರೋಕ್ತಾ ಶಿವಸಿದ್ಧಾಂತತತ್ಪರೈಃ ॥೧೪೩॥
ಉಪಚಾರಸ್ತಥಾ ಚೈವ ಚತುರ್ವಿಂಶದ್ವಿಧಾಃ ಸ್ಮೃತಾಃ ।
ವಿಭೂತ್ಯಭ್ಯುಕ್ಷಣಂ ಲಿಂಗೇ ಕರಣಂ ಸ್ನಪನಸ್ಯ ಚ ॥೧೪೪॥

---

ಮೇಲೆ ಹೇಳಿದಂತೆ ಅಂತರ್ಲಿಂಗದ ಅನುಸಂಧಾನವನ್ನು ಅಭ್ಯಾಸ ಮಾಡುತ್ತಿರುವಾಗ ಬಾಹ್ಯಲಿಂಗದ ಅರ್ಚನೆಯಲ್ಲಿ ಆವಶ್ಯಕತೆಯೂ ರುಚಿಯೂ ಆಸಕ್ತಿಯೂ ಮನಶ್ಶುದ್ಧಿಯೂ ಉಂಟಾಗದೆ ಹೋಗುತ್ತದೆ. ಮೊದಲು ಬಾಹ್ಯಲಿಂಗಾರ್ಚನೆಯನ್ನು ಮಾಡಿ ಚಿತ್ತದ ಶುದ್ಧಿ ಏಕಾಗ್ರತೆಗಳನ್ನು ಪಡೆದು ಮುಂದುವರಿದಿರುತ್ತಾನೆ.

೧೪೧. ಆದುದರಿಂದ ಶಾಸ್ತ್ರಗಳನ್ನು ತಿಳಿದಿರುವ ಗುರುವು ಶಿಷ್ಯನನ್ನು ಅನುಗ್ರಹಿಸುವುದಕ್ಕೋಸ್ಕರ ಯಾವ ಲಿಂಗವು ಕೊಡಲ್ಪಟ್ಟಿರುತ್ತದೋ ಆ ಲಿಂಗದ ಪೂಜೆಯನ್ನೇ ಶಿಷ್ಯನು ಎಲ್ಲ ಪ್ರಯತ್ನದಿಂದಲೂ ನೆರವೇರಿಸುತ್ತಿರಬೇಕು.

೧೪೨. ಎಲೈ ಸನತ್ಕುಮಾರ ಮುನಿಯೇ, ಲಿಂಗವನ್ನು ವಿಶೇಷ ರೀತಿಯಿಂದ ಅರ್ಚಿಸುವ ಕ್ರಮವನ್ನು ಹೇಳುವೆನು, ಕೇಳು. ಈ ಅರ್ಚನೆಯ ಕ್ರಮವು ಪೂಜೆ ಎಂದೂ, ಉಪಚಾರವೆಂದೂ ಎರಡು ಬಗೆಯಾಗಿದೆ. ಒಟ್ಟಿನಲ್ಲಿ ಮೂವತ್ತಾರು ಅಂಶಗಳಿಂದ ಕೂಡಿರುತ್ತದೆ.

೧೪೩. ಶಿವಸಿದ್ಧಾಂತಗಳನ್ನು ತಿಳಿದಿರುವವರಿಂದ ಶಿವಪೂಜೆಯು ಹನ್ನೆರಡು ಬಗೆಯಾಗಿದೆ ಎಂದೂ, ಉಪಚಾರಗಳು ಇಪ್ಪತ್ತನಾಲ್ಕು ಬಗೆಯಾಗಿವೆ ಎಂದೂ ಹೇಳಲ್ಪಟ್ಟಿದೆ.

೧೪೪. ಶಿವಲಿಂಗಕ್ಕೆ ವಿಭೂತಿಯನ್ನು ಅರ್ಪಿಸುವುದು, ಸ್ನಾನಮಾಡಿ

**ಅಂಗಾರತಾಪನಂ ಚೈವ ಭೂತ (ಧೂಪ) ಸಂಜೀವನಂ ತತಃ ।**
**ಧೂಪ (ಮ) ಪ್ರಸಾರಣಂ ಚೈವ ತತೋ ಗಂಧಾವತಂಸನಂ ॥೧೪೫॥**

**ಅಕ್ಷತಾರೋಪಣಂ ಚೈವ ಪುಷ್ಪೋಪಹರಣಂ ತತಃ ।**
**ದೀಪಪ್ರಕಾಶನಂ ಚೈವ ನೈವೇದ್ಯಾನ್ನಸಮರ್ಪಣಂ ॥೧೪೬॥**

**ತಾಂಬೂಲಸ್ಯ ಪ್ರದಾನಂ ಚ ವಸ್ತ್ರಪ್ರಾವರಣಂ ತತಃ ।**
**ಏವಂ ದ್ವಾದಶಧಾ ಪ್ರೋಕ್ತಾ ಶಿವಲಿಂಗಾರ್ಚನಕ್ರಿಯಾ ॥೧೪೭॥**

**ಆವಾಹನಾಸನಾರ್ಘ್ಯಾನಿ ಪಾದ್ಯಾಚಮನಕಂ ತತಃ ।**
**ಯಜ್ಞೋಪವೀತಮಾಲ್ಯಾನುಲೇಪನಾಭರಣಾನಿ ಚ ॥೧೪೮॥**

---

ಸುವುದು, ಅಗ್ನಿಷ್ಟಿಕೆಯಿಂದ ಶಾಖವನ್ನುಂಟುಮಾಡುವುದು, ಪರಿಮಳ ಧೂಪವನ್ನು ಸಮರ್ಪಿಸುವುದು ; ಅನಂತರದಲ್ಲಿ,

೧೪೫–೧೪೭. ಶಿವಲಿಂಗಕ್ಕೆ ಸುವಾಸನೆಯುಳ್ಳ ಧೂಪ (ಮ) ವನ್ನು ಸಮರ್ಪಿಸಿ, ಶ್ರೀಗಂಧ, ಅಷ್ಟಗಂಧ ಮುಂತಾದವನ್ನು ಲೇಪಿಸುವುದು, ಆ ಮೇಲೆ ಅಲಂಕಾರಕ್ಕಾಗಿ ಮಂತ್ರಾಕ್ಷತೆಯನ್ನು ಅರ್ಪಿಸುವುದು, ಹೂವುಗಳಿಂದ ಪೂಜಿಸುವುದು, ದೀಪವನ್ನು ಹತ್ತಿಸಿ ಬೆಳಕನ್ನುಂಟು ಮಾಡುವುದು, ನಾನಾಬಗೆಯ ಅನ್ನಗಳನ್ನೂ ಭಕ್ಷ್ಯಾದಿಗಳನ್ನೂ ನಿವೇದಿಸುವುದು, ತಾಂಬೂಲವನ್ನು ಕೊಡುವುದು, ಮತ್ತು ವಸ್ತ್ರವನ್ನು ಹೊದಿಸುವುದು, ಈ ರೀತಿಯಲ್ಲಿ ಶಿವಲಿಂಗವನ್ನು ಅರ್ಚನೆಮಾಡುವ ಕಾರ್ಯವು ಹನ್ನೆರಡು ಬಗೆಯಾಗಿದೆ ಎಂದು ಶಾಸ್ತ್ರಗಳಲ್ಲಿ ಹೇಳಿದೆ.

೧೪೮–೧೫೦. ಇಷ್ಟ ದೇವತೆಯನ್ನು ಲಿಂಗದಲ್ಲಿ ಆವಾಹನೆಮಾಡುವುದು, ಅರ್ಘ್ಯ, ಪಾದ್ಯ, ಆಚಮನಗಳಿಗಾಗಿ ಜಲವನ್ನು ಕೊಡುವುದು, ಯಜ್ಞೋಪವೀತವನ್ನು ಸಮರ್ಪಿಸುವುದು, ಹೂಮಾಲೆಯನ್ನು ಧರಿಸಿಸುವುದು, ಪರಿಮಳ ಗಂಧವನ್ನು ಲೇಪಿಸುವುದು, ಒಡವೆ (ರುದ್ರಾಕ್ಷಸರ, ಸರ್ಪಾಭರಣ) ಗಳನ್ನು ಸಮರ್ಪಿಸಿ ಅಲಂಕರಿಸುವುದು, ಛತ್ರ, ಚಾಮರ, ಬೀಸಣಿಗೆ, ಕನ್ನಡಿ, ಘಂಟಾನಾದ, ಶಂಖಧ್ವನಿ, ಗೀತ (ಹಾಡುಗಾರಿಕೆ) ವೀಣಾದಿ ವಾದ್ಯಗಳನ್ನು ನುಡಿಸುವುದು, ತಾಲಲಯಾನುಸಾರವಾಗಿ

ಛತ್ರಂ ಚ ಚಾಮರಂ ಚೈವ ತಾಲವೃಂತಂ ಚ ದರ್ಪಣಂ ।
ಘಂಟಾ ಶಂಖಂ ಚ ಗೀತಂ ಚ ವಾದ್ಯಂ ನೃತ್ತಂ ಪ್ರದಕ್ಷಿಣಂ ॥
ನಮಸ್ಕಾರಸ್ತುತಿರ್ಯಾಚ್ಞಾ ವಿಜ್ಞಪ್ತಿಸ್ತು ವಿಸರ್ಜನಂ ।
ಇತ್ಯೇವಮುಪಚಾರಾ (೦) ಶ್ಚ ಚತುರ್ವಿಂಶದ್ವಿಧಾಃ ಸ್ಮೃತಾಃ ॥೧೫೦॥
ಸಮರ್ಚನೋಪಚಾರಾಣಾಂ ಷಟ್ತ್ರಿಂಶದ್ಭೇದಭೇದತಃ ।
ಷಟ್ತ್ರಿಂಶತ್ತತ್ತ್ವಮಯ್ಯೇಷಾ ಶೈವೀ ಶ್ರುತಿರಿತಿ ಸ್ಥಿತಿಃ ॥೧೫೧॥
ಅಥಾರ್ಚನೋಪಚಾರಾಣಾಂ ಯೋಗಕ್ರಮಮು (ಉ) ದೀರ್ಯತೇ ।
ಭಸ್ಮಸ್ನಾನಾದಿಭಿಃ ಶುದ್ಧಿಕರಣಂ ವಿಧಿವತ್ತತಃ ॥೧೫೨॥

---

ಲಾಸ್ಯತಾಂಡವಗಳೆಂಬ ನರ್ತನ, ಪ್ರದಕ್ಷಿಣಮಾಡುವುದು, ನಮಸ್ಕರಿಸುವುದು, ಗುಣಗಳನ್ನು ಪದ್ಯ ಮಂತಾದವುಗಳಿಂದ ಕೀರ್ತನಮಾಡುವುದು, ಇಷ್ಟಾರ್ಥಗಳನ್ನು ಬೇಡುವುದು, ಕೋರಿಕೆಗಳನ್ನು ಸಲ್ಲಿಸಲು ವಿಜ್ಞಾಪಿಸುವುದು, ಕಡೆಗೆ ಶಾಸ್ತ್ರೋಕ್ತ ರೀತಿಯಿಂದ ವಿಸರ್ಜನೆಯನ್ನು ಮಾಡುವುದು, ಹೀಗೆ ಉಪಚಾರಗಳು ಇಪ್ಪತ್ತುನಾಲ್ಕು ಬಗೆಯಾಗಿವೆ ಎಂದು ಆಗಮ, ಧರ್ಮ, ಶಾಸ್ತ್ರಗಳಲ್ಲಿ, ಹೇಳಿರುತ್ತದೆ.

೧೫೧. ಈ ಪ್ರಕಾರವಾಗಿ ಶಿವಲಿಂಗದ ಅರ್ಚನೆ ಮತ್ತು ಉಪಚಾರಗಳಲ್ಲಿ ಒಟ್ಟನಲ್ಲಿ ಮೂವತ್ತಾರು ಬಗೆಯ ವಿವರಗಳಿವೆ. ಇವು ಈ ಪ್ರಪಂಚದಲ್ಲಿರುವ ಮೂವತ್ತಾರುತತ್ವ ಸ್ವರೂಪವಾಗಿವೆ. ಎಂದು ಶಿವಾಗಮ, ಧರ್ಮಶಾಸ್ತ್ರಗಳಲ್ಲಿ ಹೇಳಿದೆ.

೧೫೨. ಇನ್ನುಮುಂದೆ ಈ ಅರ್ಚನ ಮತ್ತು ಉಪಚಾರಗಳನ್ನು ವಿನಿಯೋಗಿಸುವ ಕ್ರಮವನ್ನು ಹೇಳಲಾಗುತ್ತದೆ. ಮೊದಲು ಶಿವಲಿಂಗಕ್ಕೆ ಭಸ್ಮಸ್ನಾನವನ್ನು ಮಾಡಿಸುವುದರಿಂದ ಪರಿಶುದ್ಧಿಯನ್ನುಂಟುಮಾಡಬೇಕು. ಆಮೇಲೆ,

ಸಂವಿತ್ಪಂಚಾಕ್ಷರೀಮಂತ್ರಾನುಷ್ಠಾನಂ ತತ ಆಸನಂ ।
ಕರಾಬ್ಜವೀರರರೂಪೇಣ ತತ ಆವಾಹನಂ ಪರಂ ॥೧೫೩॥

ಆನೀಯಾಂಗಸ್ತ್ಥಲಂ ಲಿಂಗಾತ್ತ್ರವೇಶಂ ತತ್ತ್ರವಾನಪಿ ।
(ಆನೀಯಾಂಗಸ್ಥಲಿಂಗೋಪವೇಶನಂ ತತ್ರ ಚಾಸನೇ । )
ವಿಭೂತ್ಯಭ್ಯುಕ್ಷಣಂ ನಿತ್ಯಂ ಸಮಂತ್ರಕಮನಂತರಂ ॥೧೫೪॥

ಅರ್ಘ್ಯಾದಿಶ್ಚೈ (ಚ್ಚೈ) ವ ಸಾಮಾನ್ಯಂ ತತಃ ಸ್ನಪನಕರ್ಮ ಚ ।
ಅಂಗಾರತಾಪನಾದೀನಿ ದಶ ಚೋಕ್ತಾನಿ ಪೂರ್ವವತ್ ॥೧೫೫॥

ತತೋ ಯಜ್ಞೋಪವೀತಾದಿ ವಿಜ್ಞಪ್ತ್ಯಂತಾ ಯಥಾ ತಥಾ ।
ವಿಸರ್ಜನಂ ಕರಸ್ಥಸ್ಯ ಲಿಂಗಸ್ಯಾಂಗೇ ನಿವೇಶನಂ ॥೧೫೬॥

---

೧೫೩. ಚೈತನ್ಯ ಪಂಚಾಕ್ಷರೀ ಮಂತ್ರದ ಜಪವನ್ನು ಮಾಡಬೇಕು ಅನಂತರದಲ್ಲಿ ಕೈ ಕಮಲದಲ್ಲಿ ಆಸನವನ್ನು ರಚಿಸಿ, ತರುವಾಯ ಅಲ್ಲಿ ಲಿಂಗವನ್ನಿಟ್ಟು ಆವಾಹನೆಯನ್ನು ಮಾಡಬೇಕು.

೧೫೪. ತನ್ನ ಎಡಗೈಯಿನ ಆಸನದಲ್ಲಿ ವಿಭೂತಿಯನ್ನು ಚಿಮುಕಿಸಿ, ತಾನು ಧರಿಸಿದ್ದ ಲಿಂಗವನ್ನು ಆ ಆಸನದಲ್ಲಿ ಇರಿಸಿ, ಮಂತ್ರ ಜಪ ಪೂರ್ವಕವಾಗಿ ವಿಭೂತಿಯನ್ನು ಆ ಲಿಂಗಕ್ಕೂ ಸಮರ್ಪಿಸಬೇಕು. ಆ ಬಳಿಕ

೧೫೫. ಅರ್ಘ್ಯ ಮುಂತಾದುವುಗಳನ್ನು ಸಮರ್ಪಿಸುವುದು ಸಮಾನವಾಗಿರುತ್ತದೆ. ಆಮೇಲೆ ಸ್ನಾನವನ್ನೂ ಮಾಡಿಸಿ, ಅಗ್ಗಿಷ್ಟಿಕೆಯಲ್ಲಿ ಕಾಯಿಸಿ ಶಾಖವನ್ನುಂಟುಮಾಡುವುದೇ ಮೊದಲಾದ ಹತ್ತು ಬಗೆಯ ಅರ್ಚನೆಯನ್ನು ಮೊದಲಿನಂತೆಯೇ ನೆರವೇರಿಸಬೇಕು.

೧೫೬. ತರುವಾಯ ಯಜ್ಞೋಪವೀತವನ್ನು ಧರಿಸುವುದೇ ಮೊದಲಾದ ವಿಜ್ಞಾಪನೆಯ ವರೆಗಿನ ಉಪಚಾರಗಳನ್ನೂ ಮೇಲೆ ಹೇಳಿದಂತೆಯೇ ನೆರವೇರಿಸಿದ ಮೇಲೆ, ವಿಸರ್ಜನವನ್ನು ಎಂದರೆ, ಕೈಯಲ್ಲಿ ಪೂಜಿಸಿದ್ದ ಲಿಂಗವನ್ನು ದೇಹದಲ್ಲಿ ಧರಿಸಿರುವಿಕೆಯನ್ನು, ಎಂದಿನಂತೆಯೇ ನೆರವೇರಿಸುತ್ತಿರಬೇಕು.

**ಏವಂ ಲಿಂಗಾರ್ಚನಂ ಯಸ್ತು ಕುರುತೇ ಭಕ್ತಿಪೂರ್ವಕಂ ।**
**ತಸ್ಯ ಪುಣ್ಯಫಲಂ ಸಮ್ಯಕ್ ವಕ್ತುಂ ನಾಲಂ ಚತುರ್ಮುಖಃ ॥೧೫೭॥**

**ಲಿಂಗಮಧ್ಯೇ ಮಹಾದೇವಃ ಸಾಕ್ಷಾನ್ನಿತ್ಯಂ ವ್ಯವಸ್ಥಿತಃ ।**
**ಅನುಗ್ರಹಾಯ ಲೋಕಾನಾಂ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥**

**ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸ ಚರಾಚರಂ ।**
**ಲಿಂಗವಾ (ಬಾ) ಹ್ಯಾತ್ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥**

**ಯೋ ಜಾತು ನಾರ್ಚಯೇಲ್ಲಿಂಗಂ ನ ಸ್ಮರೇನ್ನ ಚ ಪೂಜಯೇತ್ ।**
**ಕಿಂ ತೇನ ಜಾತಮಾತ್ರೇಣ ಭೂಭಾರೇಣಾನ್ನಶತ್ರುಣಾ ॥೧೬೦॥**

---

೧೫೭. ಈ ರೀತಿಯಲ್ಲಿ ಯಾರು ಭಕ್ತಿಯೊಡನೆ ಲಿಂಗಾರ್ಚನೆಯನ್ನು ಪ್ರತಿದಿನದಲ್ಲೂ ಮಾಡುತ್ತಾರೋ ಅವರಿಗೆ ಲಭಿಸುವ ಪುಣ್ಯಫಲಗಳನ್ನು ಸಂಪೂರ್ಣವಾಗಿ ತಿಳಿಯು ಹೇಳಲು ಚತುರ್ಮುಖ ಬ್ರಹ್ಮದೇವನೂ ಸಮರ್ಥನಾಗಿಲ್ಲವು.

೧೫೮. ಈ ಲಿಂಗದ ಮಧ್ಯದಲ್ಲಿ ಮಹಾದೇವನು ಈ ಪ್ರಪಂಚದಲ್ಲಿರುವ ಎಲ್ಲ ಭಕ್ತರನ್ನೂ ಅನುಗ್ರಹಿಸುವುದಕ್ಕಾಗಿಯೇ ಯಾವಾಗಲೂ ನೆಲೆಸಿರುತ್ತಾನೆ. ಆದುದರಿಂದ ಹೀಗೆ ಶಿವಲಿಂಗವನ್ನು ಅರ್ಚನೆ ಉಪಚಾರಗಳಿಂದ ಆರಾಧಿಸುತ್ತಿರಬೇಕು.

೧೫೯. ಅಲ್ಲದೆ ಈ ಶಿವಲಿಂಗದ ಮಧ್ಯದಲ್ಲಿ ಚರಾಚರ, ಜಂಗಮ ಸ್ಥಾವರ,ಪದಾರ್ಥಗಳಿಂದ ಕೂಡಿರುವ ಈ ಮೂರು ಲೋಕಗಳೂ, ಅಡಗಿರುತ್ತವೆ. ಈ ಲಿಂಗಕ್ಕಿಂತ ಹೊರಗೆ ಯಾವುದೂ ಇರಲಾರದು. ಆದುದರಿಂದ ಲಿಂಗಾರ್ಚನೆಯನ್ನು ಈ ದೃಷ್ಟಿಯಿಂದ ಮಾಡುತ್ತಿರಬೇಕು.

೧೬೦. ಹೀಗೆ ಯಾರು ಶಿವನನ್ನು ಲಿಂಗದಲ್ಲಿ ಅರ್ಚನೆಮಾಡದೆ, ಉಪಚರಿಸದೆ,ಸ್ಮರಿಸದೆಯೂ ಇರುತ್ತಾರೋ, ಅಂತಹ ಮಾನವನ ಕೇವಲವಾದ ಹುಟ್ಟುವಿಕೆಯಿಂದ ಯಾವ ಉತ್ತಮ ಫಲವೂ ಉಂಟಾಗಲಾರದು. ಅಷ್ಟೇ ಅಲ್ಲದೆ ಅಂಥವನು ಈ ಭೂಮಿಗೆ ಭಾರವಾಗಿಯೂ ತಾನು ತಿನ್ನು

ಜನ್ಮಕೋಟಿಸಹಸ್ರಾಣಿ ಸೂಕರಾಂತಾನಿ ಯಾನಿ ಚ ।
ಸಕೃದಭ್ಯರ್ಚನಾಲ್ಲಿಂಗೇ ಮುಕ್ತಸ್ಸಂಸಾರಬಂಧನಾತ್ ॥೧೬೧॥
ಸಕೃತ್ಪೂಜಯತೇ ಲಿಂಗಂ ಗರ್ಭಜನ್ಮ ನ ವಿದ್ಯತೇ ।
ಸತತಂ ಪೂಜಯೇದ್ಯಸ್ತು ಸ ಯಾತಿ ಪರಮಾಂ ಗತಿಂ ॥೧೬೨॥
ವರಂ ಪ್ರಾಣಪರಿತ್ಯಾಗಃ ಛೇದನಂ ಶಿರಸೋಽಪಿ ವಾ ।
ನ ತ್ವನಭ್ಯರ್ಚ್ಯ ಭುಂಜೀಯಾತ್ ಭಗವಂತಂ ಸದಾಶಿವಂ ॥೧೬೩॥

---

ತ್ತಿರುವ ಅನ್ನವಸ್ತುಗಳಿಗೂ ಶತ್ರುವಾಗಿಯೂ, ಸದ್ವಿನಿಯೋಗವಾಗದಿರುವುದರಿಂದ ಅಪಕಾರಿಯಾಗಿಯೂ ಇರುತ್ತಾನೆ.

೧೬೧. ಒಂದು ಸಾವಿರ ಕೋಟಿ ಜನ್ಮಗಳು ಮಾನವನಿಂದ ಸೂಕರ (ಹಂದಿ)ವೇ ಮುಂತಾದ ತಿರ್ಯಗ್ಜಂತುಗಳ ವರೆಗಿನ ಜನ್ಮಗಳು ಬಂದರೂ, ಒಂದಾವೃತ್ತಿ ಶಿವಲಿಂಗದಲ್ಲಿ ಅರ್ಚನೆಯನ್ನು ಮಾಡುವುದರಿಂದಲೇ ಮಾನವನು ಈ ಸಂಸಾರ ಸಂಬಂಧದಿಂದ ಎಂದರೆ, ಕರ್ತೃತ್ವ ಭೋಕ್ತೃತ್ವ ಜನನ ಮರಣ ಸುಖದುಃಖಾನುಭವ ರೂಪವಾದ ಪ್ರವಾಹದಲ್ಲಿ ನಿರ್ಬಂಧದಿಂದ ಸಿಕ್ಕಿ ಸುತ್ತುತ್ತಿರುವಿಕೆಯಿಂದ ಉಂಟಾಗುವ ದುಃಖದಿಂದ, ಬಿಡುಗಡೆಯನ್ನು ಪಡೆಯುವನು.

೧೬೨. ಒಂದಾವೃತ್ತಿ ಶಿವಲಿಂಗವನ್ನು ಪೂಜೆಮಾಡುವುದರಿಂದಲೇ ಪುನಃ ಗರ್ಭವಾಸ ಜನನಗಳ ದುಃಖದಿಂದ ಬಿಡುಗಡೆಯನ್ನು ಹೊಂದುತ್ತಾನೆ, ಎಂದರೆ ಅಂತಹ ಮಾನವನು ಪುನಃ ಹುಟ್ಟುವುದಿಲ್ಲವು, ಹೀಗಿರಲು ಯಾವ ಮಾನವನು ಶಿವನನ್ನು ಯಾವಾಗಲೂ ಪೂಜಿಸುತ್ತಿರುವನೋ ಅಂಥವನು ಉತ್ತಮವಾದ ನಿಶ್ರೇಯಸವನ್ನು ಪಡೆಯುವನೆಂಬುದರಲ್ಲಿ ಸಂದೇಹವೇ ಇಲ್ಲವು.

೧೬೩. ಪ್ರಾಣವನ್ನೇ ಬಿಡುವುದಾದರೂ, ತಲೆಯೇ ಕತ್ತರಿಸಿಬಿದ್ದು ಹೋಗುವುದಾದರೂ ಉತ್ತಮವೇ ಹೊರತು, ಮಹಾ ಮಹಿಮನಾದ ಸದಾಶಿವನನ್ನು ಅರ್ಚಿಸದೆ ಭೋಜನವನ್ನು ಮಾಡಬಾರದು.

**ಅಸಮರ್ಚ್ಯ ಶಿವಾಯಾಥ ಯೋ ಭುಙ್ಕ್ತೇ ಪಾಪಕೃತ್ತಮಃ ।**
**ಶ್ವಮಾಂಸಭಕ್ಷಣಂ ತಾವತ್ ಅನೇನ ರಚಿತಂ ಭವೇತ್ ॥೧೬೪॥**

**ಭುಂಜೀಯಾದ್ರುದ್ರಭುಕ್ತಂ ಚ ರುದ್ರವ್ರತಜಲಂ ಪಿಬೇತ್ ।**
**ರುದ್ರಾಘ್ರಾತಂ ಸದಾ ಜಿಘ್ರೇತ್ ಇತಿ ಜಾಬಾಲಿಕೀ ಶ್ರುತಿಃ ॥೧೬೫॥**

**ಪ್ರೋಕ್ತಂ ತ್ರಿಯಂಬಕೇನೈವ ಅಶ್ನೀಯಾದ್ವೇದವಿತ್ತಮಃ ।**
**ಯಾನಿಪಾಪಾನ್ನಿಶಿವಾಯಾಥ ಭುಂಕ್ತ್ವಾಽಸರ್ಪಿತನೇವತತ್ ॥೧೬೬॥**
**( ಯೋ ವಿಪಾಪಾ ಶಿವಾಯಾಥ ಭುಂಜ್ಯಾದರ್ಪಿತಮೇವ ತತ್ । )**
**ವಿನೇಭುಂಕ್ತ್ವೇ ಮಲೋಭುಂಕ್ತ್ವೇ ಕ್ರಿಮಿಂಭುಂಕ್ತ್ವೇತಿ ವೈದ್ವಿಜಾಃ।**
**(ವಿನಾ ಭುಂಜ್ಯಾತ್ ಮಲಂ ಭುಂಜ್ಯಾತ್ ಕ್ರಿಮಿಂ ಭುಂಜ್ಯಾದಿತಿ ದ್ವಿಜಾಃ । )**
**ಅಧೋ ಗಚ್ಛೇದಧೋ ಗಚ್ಛೇತ್ ಇತ್ಯಾಹ ಪರಮಾ ಶ್ರುತಿಃ ॥೧೬೭॥**

---

೧೬೪. ಶಿವಪೂಜೆಯನ್ನು ಮಾಡದೆ ಯಾರು ಊಟವನ್ನು ಮಾಡುತ್ತಾರೋ ಅವರು ಆ ಭೋಜನವು ನಾಯಿಯ ಮಾಂಸವನ್ನು ತಿಂದಂತಾಗಿ ಅಷ್ಟು ಪಾಪಕಾರಿಯಾಗುವುದು.

೧೬೫. ರುದ್ರದೇವನಿಗೆ ನಿವೇದನ ಮಾಡಿದಮೇಲೆ ಸಂಸ್ಕೃತವಾದ ಅನ್ನಾದಿಗಳನ್ನು ಊಟಮಾಡುತ್ತಿರಬೇಕು. ಹಾಗೆಯೇ ರುದ್ರದೇವನಿಗೆ ಸಮರ್ಪಿಸಿದ ಜಲವನ್ನು ಪಾನಮಾಡಬೇಕು. ಮತ್ತು ರುದ್ರನಿಗೆ ಪೂಜೆಯಲ್ಲಿ ವಿನಿಯೋಗಿಸಿ ಮಿಕ್ಕ ಪರಿಮಳವನ್ನೇ ಅರ್ಚಕನು ಸೇವಿಸಬೇಕು. ಎಂದು ಜಾಬಾಲಿಕೀಶ್ರುತಿಯಲ್ಲಿ ವಿಧಿಸಲಾಗಿದೆ.

೧೬೬. ವೇದಗಳನ್ನು ತಿಳಿದವರಲ್ಲಿ ಶ್ರೇಷ್ಠನಾದ ಭಕ್ತನು ಶಿವನಿಗೆ ನಿವೇದಿತವಾಗಿ ಪವಿತ್ರವಾಗಿರುವ ಆ ಪ್ರಸಾದವನ್ನು ಸ್ವೀಕರಿಸುವುದರಿಂದ ಪಾಪರಹಿತನಾಗುತ್ತಾನೆಂದು ಈಶ್ವರನಿಂದಲೇ ಹೇಳಲ್ಪಟ್ಟಿದೆ. (ತ್ರ್ಯಂಬಕ ಸ್ಮೃತಿಯಲ್ಲೂ ಹೇಳಿದೆ ).

೧೬೭. ಶಿವಾರ್ಚನೆಯಲ್ಲಿ ವಿನಿಯೋಗಿಸದಿರುವ, ನಿವೇದಿಸದಿರುವ, ತೀರ್ಥಪ್ರಸಾದಗಳನ್ನು ಯಾರು ಸ್ವೀಕರಿಸುತ್ತಾರೋ ಅಂಥವರು ಮಲ ಕ್ರಿಮಿಗಳನ್ನು ತಿಂದಂತಾಗಿ ಅಧೋಗತಿಯನ್ನು ಪಡೆಯುವುದು ಖಂಡಿತವು ಎಂದು ಉತ್ತಮವಾದ ವೇದಶಾಸ್ತ್ರಗಳು ಹೇಳುತ್ತಿವೆ.

ನಿರ್ಮಾಲ್ಯಧಾರಣಾಚ್ಛಂಭೋಃ ಸಾಲೋಕ್ಯಂ ಲಭತೇ ನರಃ ।
ಪಾದೋದಕಸ್ಯ ಪಾನೇನ ಸಾಮೀಪ್ಯಂ ಲಭತೇ ಸದಾ ॥೧೬೮॥

ತತ್ಪ್ರಸಾದೋಪಭೋಗೇನ ಸಾರೂಪ್ಯಂ ಪ್ರತಿಪದ್ಯತೇ ।
ಶುದ್ಧೇ ಶಿವಪ್ರಸಾದೇ ಚ ಶುಚಿತ್ವಂ ಯೋ ನ ಭಾವಯೇತ್ ॥೧೬೯॥

ಸೋಽಪಿ ಯಾತಿ ನರೋ ಘೋರಂ ನರಕಂ ಕಾಲಮಕ್ಷಯಂ ।
ಸುಪ್ರತಿಷ್ಠಿತಲಿಂಗೇ ಚ ನ ಯಥಾಪೂರ್ವಭಾವನಾ ॥೧೭೦॥

---

೧೬೮. ಶಿವನಿಗೆ ಪೂಜೆಯನ್ನು ಮಾಡಿ ವಿಸರ್ಜಿಸಿದ ಹೂವು ಮುಂತಾದ ನಿರ್ಮಾಲ್ಯವನ್ನು ಸ್ವೀಕರಿಸುವುದರಿಂದ ಕೈಲಾಸ ಲೋಕದಲ್ಲಿ ವಾಸವು ದೊರೆಯುವುದು. ಶಂಭುವಿಗೆ ಅಭಿಷೇಕವನ್ನು ಮಾಡಲು ವಿನಿಯೋಗಿಸಿದ ಪಾದೋದಕದ ತೀರ್ಥವನ್ನು ಯಾವ ಭಕ್ತನು ಪಾನ ಮಾಡುತ್ತಾನೋ ಅವನಿಗೆ ಶಂಕರನ ಸಮೀಪದಲ್ಲಿ ಯಾವಾಗಲೂ ಇರುವಿಕೆಯು, ಸಹವಾಸವು, ದೊರೆಯುವುದು.

೧೬೯. ಶಿವಲಿಂಗದಲ್ಲಿ ಪರಮೇಶ್ವರನಿಗೆ ನಿವೇದಿಸಿದ, ಸಂಸ್ಕೃತವೂ, ಪವಿತ್ರವೂ ಆಗಿರುವ, ಪ್ರಸಾದವನ್ನು ಯಾವ ಭಕ್ತನು ಸ್ವೀಕರಿಸುತ್ತಾನೋ, ಅಂಥವನು ಶಿವನ ಸಾರೂಪ್ಯವನ್ನು ಎಂದರೆ, ಶಿವನ ರೂಪದಂತಿರುವ ಸ್ವರೂಪವನ್ನೂ ಪಡೆಯುವನು. ಹಾಗೆ ಮಾಡದೆ, ಪರಿಶುದ್ಧವಾದ ಅಂಥಾ ಶಿವಪ್ರಸಾದದಲ್ಲಿ ಪವಿತ್ರವೆಂಬ ಬುದ್ಧಿಯನ್ನು ಯಾರು ಹೊಂದಿರುವುದಿಲ್ಲವೋ, ಅಂಥವನು ಭಯಂಕರವಾದ ನರಕದಲ್ಲಿ ಅನಂತ ಕಾಲದವರೆಗೆ ದುಃಖಾನುಭವವನ್ನು ಪಡೆಯುವನು.

೧೭೦. ಪ್ರಾಣ ಪ್ರತಿಷ್ಠಾಪನ, ಪೂಜಾ, ಉಪಚಾರಗಳಿಂದ ಸಂಸ್ಕೃತವಾಗಿರುವಶಿವಲಿಂಗದಲ್ಲಿ ಮುಂಚಿನದಾದ ಶಿಲಾಬುದ್ಧಿಯು ಭಕ್ತರಿಗೆ ಹೇಗೆ ಉಂಟಾಗುವುದಿಲ್ಲವೋ, ಉಂಟಾಗಲೂ ಬಾರದೋ, ಹಾಗೆ ಶಿವಪ್ರಸಾದದಲ್ಲೂ ಮುಂಚಿನದಾದ ಹೂವು, ಹಣ್ಣು ಅನ್ನ ಮುಂತಾದ ಭಾವನೆಯು ಭಕ್ತರಿಗೆ ಬರುವುದಿಲ್ಲ, ಬರಲೂ ಬಾರದು. ಮತ್ತೇನೆಂದರೆ ಅದನ್ನು

ತಥಾ ಶಿವಪ್ರಸಾದಸ್ಯ ಪೂರ್ವನಾಮ ಸ ಸಂಸ್ಮರೇತ್ ।
ಪ್ರಸಾದಂ ಪ್ರತ್ಯರೂಪೇಣ ಗುರೋರ್ವರ್ಮಾನುಷಭಾವನಾ ॥೧೭೧॥
ಶಿವಲಿಂಗೇ ಶಿಲಾಬುದ್ಧಿಃ ಸ ಖಲು ಬ್ರಹ್ಮಹಾ ಭವೇತ್ ।
ಏವಂ ದೀಕ್ಷಾ ಪ್ರಕರ್ತವ್ಯಾ ಯಾವಜ್ಜೀವಂ ಪ್ರತಿಜ್ಞಯಾ ॥೧೭೨॥
ತ್ರಿಕಾಲಮೇಕಕಾಲಂ ವಾ ಪೂಜಯೇತ್ಪರಮೇಶ್ವರಂ ।
ಅಗ್ನಿಹೋತ್ರಾಶ್ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ॥೧೭೩॥
ಶಿವಲಿಂಗಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ।
ಸದಾ ಯಜತಿ ಯಜ್ಞೇನ ಸದಾ ದಾನಂ ಪ್ರಯಚ್ಛತಿ ॥೧೭೪॥

---

ಕೇವಲ ಶಿವಪ್ರಸಾದವೆಂಬ ಗೌರವದ ಭಾವನೆಯಿಂದ ಸ್ವೀಕರಿಸಿದರೆ ಮೇಲೆ ಹೇಳಿದಂತೆ ನಾಲ್ಕು ಬಗೆಯ ಸದ್ಗತಿಯು ತಪ್ಪದೆ ದೊರೆಯುವುದು. ಎಂದು ಭಾವವು.

೧೭೧. ಹಾಗಲ್ಲದೆ ಪ್ರಸಾದದಲ್ಲಿ ಸಾಧಾರಣವಾದ ಪದಾರ್ಥ ಬುದ್ಧಿಯೂ, ಗುರುವಿನಲ್ಲಿ ಸಾಮಾನ್ಯ ಮನುಷ್ಯನೆಂಬ ಭಾವನೆಯೂ, ಹಾಗೆಯೇ ಶಿವಲಿಂಗದಲ್ಲಿ ಶಿಲೆ ಎಂಬ ಬುದ್ಧಿಯೂ. ಇರುವುದಾದರೆ ಅಂತಹ ಮಾನವನಿಗೆ ಬ್ರಹ್ಮಹತ್ಯೆಯ ದೋಷವು ಬಂದು ಸೇರುವುದು. ಎಂದರೆ ಅಷ್ಟು ಪಾಪಿಷ್ಠನಾದವನಿಗೆ ಅಂತಹ ಬುದ್ಧಿಯುಂಟಾಗುತ್ತದೆ. ಎಂದು ಭಾವವು.

೧೭೨–೧೭೩. ಈ ಪ್ರಕಾರವಾಗಿ ದೀಕ್ಷೆಯನ್ನು ನೆರವೇರಿಸಬೇಕು. ಬದುಕಿರುವವರೆಗೂ ಮಾನವನು ಪ್ರತಿದಿನವೂ ಮೂರು ಕಾಲ (ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ) ಗಳಲ್ಲಿಯೂ ಅಥವಾ ಒಂದುಕಾಲದಲ್ಲಿ ಯಾದರೂ ಪರಮೇಶ್ವರನನ್ನು ಪೂಜಿಸಬೇಕು. ಅಗ್ನಿಹೋತ್ರದ ಅನುಷ್ಠಾನವೂ, ವೇದಗಳ ಅಧ್ಯಯನವೂ, ತುಂಬ ದಕ್ಷಿಣೆಗಳಿಂದ ಕೂಡಿದ ಯಜ್ಞಗಳ ಆಚರಣೆಯೂ, ಇವೆಲ್ಲವೂ ಶಿವಲಿಂಗವನ್ನು ಪೂಜಿಸುವಿಕೆಯಲ್ಲಿ ಕೋಟಿಯ ಒಂದು ಭಾಗಕ್ಕೂ ಸಮಾನವಾಗಲಾರದು.

೧೭೪. ಒಂದಾವೃತ್ತಿ ಶಿವನನ್ನು ಲಿಂಗದಲ್ಲಿ ಪೂಜಿಸಿದವನು,

ಸದಾ ವೈ ವಾಯುಭಕ್ಷಶ್ಚ ಸಕೃದಭ್ಯರ್ಚಯೇಚ್ಛಿವಂ ।
ಏಕಕಾಲಂ ದ್ವಿಕಾಲಂ ವಾತ್ರಿಕಾಲಂ ನಿತ್ಯಮೇವ ವಾ ॥೧೭೫॥
ಯೇಽರ್ಚಯಂತಿ ಮಹಾದೇವಂ ತೇ ರುದ್ರಾ ನಾತ್ರ ಸಂಶಯಃ ।
ನಾರುದ್ರಸ್ತು ಸ್ಪೃಶೇದ್ರುದ್ರಂ ನಾರುದ್ರೋ ರುದ್ರಮರ್ಚಯೇತ್॥
ನಾರುದ್ರಃ ಕೀರ್ತಯೇದ್ರುದ್ರಂ ನಾರುದ್ರೋ ರುದ್ರಮಾಪ್ನುಯಾತ್ ।
ಲಿಂಗೇ ಯಸ್ಯ ಮನೋ ಲೀನಂ ಲಿಂಗಸ್ತುತಿಪರಾ ಚ ವಾಕ್॥೧೭೭॥
ಲಿಂಗಾರ್ಚನಪರೌ ಹಸ್ತೌ ಸ ರುದ್ರೋ ನಾತ್ರ ಸಂಶಯಃ ।
ಗವಾಂ ಕೋಟಿ ಪ್ರಯತ್ನೇನ ವಿಧಿದತ್ತೇನ ಯತ್ಫಲಂ ॥೧೭೮॥

---

ಸರ್ವದಾ ಯಾಗಗಳನ್ನು ಅನುಷ್ಠಾನಮಾಡುವವನೂ, ದಾನವನ್ನು ಕೊಡುತ್ತಿರುವವನೂ, ವಾಯು ಭಕ್ಷಣೆಯಿಂದ ಉಪವಾಸ ವ್ರತವನ್ನು ಮಾಡುವವನೂ, ಪಡೆಯುವ ಪುಣ್ಯವನ್ನು ಪಡೆಯುತ್ತಾನೆ.

೧೭೫. ಪ್ರತಿದಿನದಲ್ಲೂ ಒಂದುಸಲ, ಎರಡುಸಲ, ಮೂರುಸಲ, ಅಥವಾ ಯಾವಾಗಲೂ ಯಾರು ಮಹಾದೇವನನ್ನು ಪೂಜಿಸುತ್ತಿರುತ್ತಾರೋ ಅಂಥವರು ರುದ್ರದೇವನಿಗೆ ಸದೃಶರೇ ಆಗಿರುತ್ತಾರೆ. ಈ ವಿಷಯದಲ್ಲಿ ಸಂದೇಹವಿಲ್ಲವು.

೧೭೬. ರುದ್ರನಾಗದಿರುವವನು ರುದ್ರ (ಲಿಂಗವ) ನನ್ನು ಮುಟ್ಟಬಾರದು, ಪೂಜಿಸಬಾರದು, ಕೀರ್ತನವನ್ನೂ ಮಾಡಬಾರದು, ಪಡೆಯಲೂ ಬಾರದು; ಇವೆಲ್ಲವೂ ಶಿವಲಿಂಗಾರ್ಚನೆಯನ್ನು ಮಾಡಿದವರಿಗೆ ದೊರೆಯುತ್ತದೆಂದು ಭಾವವು.

೧೭೭. ಯಾರ ಮನಸ್ಸು ಶಿವಲಿಂಗದಲ್ಲಿ ಸೇರಿರುತ್ತದೋ, ಯಾರ ಮಾತು ಲಿಂಗವನ್ನೇ ಅವಲಂಬಿಸಿರುತ್ತದೋ, ಯಾರ ಕೈಗಳು ಲಿಂಗಾರ್ಚನೆಯಲ್ಲಿ ಆಸಕ್ತವಾಗಿರುತ್ತವೋ, ಅಂಥವನು ರುದ್ರನೇ ಆಗಿರುತ್ತಾನೆ. ಇದರಲ್ಲಿ ಸಂದೇಹವಿಲ್ಲವು.

೧೭೮. ಒಂದು ಕೋಟಿ ಹಸುಗಳನ್ನು ಶಾಸ್ತ್ರೋಕ್ತ ರೀತಿಯಿಂದ ದಾನಮಾಡುವುದರಿಂದ ದೊರೆಯುವ ಪುಣ್ಯಫಲವೂ ಶಿವಲಿಂಗದಲ್ಲಿ ಒಂದು

**ಲಿಂಗನ್ಯಸ್ತೈಕಪುಷ್ಪಸ್ಯ ಸಹಸ್ರಾಂಶಂ ನ ಪೂರಯೇತ್ ।**
**ಏವಂ ಸಂಕ್ಷೇಪತಃ ಪ್ರೋಕ್ತೋ ಹ್ಯಧಿಕಾರಿವಿಧಿಕ್ರಮಃ ॥೧೭೯॥**
**ಶಿವಾರ್ಚನಂ ಚ ಧರ್ಮಾರ್ಥಂ ಕಾಮಮೋಕ್ಷಫಲಪ್ರದಂ ॥೧೮೦॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದೀಕ್ಷಾದಿ ಕಥನಂ ನಾಮ ಏಕವಿಂಶತಿತಮೋಽಧ್ಯಾಯಃ**

---

ಹೂವನ್ನು ಸಮರ್ಪಿಸುವುದರಿಂದ ಬರುವ ಪುಣ್ಯದಲ್ಲಿ ಸಾವಿರದ ಒಂದನೆಯ ಭಾಗದಷ್ಟನ್ನೂ ಸರಿತೂಗಲಾರದು.

೧೭೯–೧೮೦. ಈ ರೀತಿಯಲ್ಲಿ ಸಂಗ್ರಹವಾಗಿ ದೀಕ್ಷೆಯ. ಅಧಿಕಾರಿ ವಿಧಿಯ ಕ್ರಮವನ್ನೂ ಶಿವಾರ್ಚನಕ್ರಮವನ್ನೂ ಧರ್ಮಾಚರಣೆಗೆ ಅನುಕೂಲ್ಯವುಂಟಾಗಲೆಂದು ಹೇಳಿದ್ದಾಗಿದೆ. ಇದು ಇಷ್ಟಾರ್ಥಗಳನ್ನೂ ಕಡೆಗೆ ಮೋಕ್ಷವನ್ನೂ ಉಂಟಾಗುವಂತೆ ಮಾಡುತ್ತದೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಶಿವದೀಕ್ಷೆ ಮುಂತಾದವುಗಳನ್ನು ವಿವರಿಸಿರುವ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

ಅಷ್ಟಾವಕ್ರಗೀತೆ, ದೇವೀಮಾಹಾತ್ಮ್ಯ, ಪಂಚೋಪನಿಷತ್ತುಗಳು, ದೇವೀ ಭಾಗವತ ಮಹಾಪುರಾಣ, ಲಿಂಗಮಹಾಪುರಾಣ, ಸೂತಸಂಹಿತಾ, ತ್ರಿಪುರಾರಹಸ್ಯ, ಕಲ್ಕಿಪುರಾಣ, ಆದಿಪುರಾಣ, ಶ್ರೀವಿದ್ಯಾಮಂತ್ರ ಭಾಷ್ಯ, ಅರ್ಕೇಶ್ವರಕ್ಷೇತ್ರಮಹಿಮೆ, ಇತ್ಯಾದಿ ಸಂಸ್ಕೃತ ಗ್ರಂಥಗಳ ಅರ್ಥಾನುವಾದಗಳನ್ನು ಕನ್ನಡದಲ್ಲಿ ಬರೆದಿರುವ ಚಂದ್ರಶೇಖರಶಾಸ್ತ್ರಿಯ ಗ್ರಂಥಗಳಲ್ಲಿ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮೊದಲನೆಯ ಸಂಪುಟವು ಇಲ್ಲಿಗೆ ಮುಗಿಯಿತು.



**ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ**
**ಸುತಾನ್ ದುಹಿತೃ ತತ್ಸುತಾನ್ ಸುಕೃತಯುಶ್ಚ ಕಾಶ್ಚಿತ್ ಕೃತಾಃ।**
**ಅಲಂಮತಿ ರಿಹಾಸ್ತು ಮೇ ಮಮ ಕದಾಽಂತ ಮಾಶಾ ವ್ರಜೇತ್**
**ಪ್ರಭೋಧ ಸುಖಮರ್ಥಯೇ ಪರವಿರಕ್ತಿ ಮುಕ್ತೀ ಮುದಾ ॥**

---

ಮಂಗಳಕರಳಾದ ಓ ತಾಯಿಯೇ, ನಿನ್ನ ಕರುಣೆಯು ನನಗೆ ಮನೆ, ಹೆಂಡಿತಿ, ಐಶ್ವರ್ಯ, ಅಧಿಕಾರ, ಮಕ್ಕಳು, ಮೊಮ್ಮಕ್ಕಳು, ಈ ಮುಂತಾದ ಐಹಿಕವಾದ ಸುಖಸಾಧನಗಳನ್ನು ನನ್ನ ಯೋಗ್ಯತೆಗೆ ತಕ್ಕಮಟ್ಟಿಗೆ ಅನುಗ್ರಹಿಸಿರುತ್ತದೆ ಯಶಸ್ಕರವಾದ ಧಾರ್ಮಿಕ ಗ್ರಂಥರಚನೆಗಳಿಂದ ಪ್ರಭುಸೇವೆ, ಜನಸೇವೆ, ಭಾಷಾಸೇವೆ, ಇವುಗಳನ್ನೂ ನನ್ನ ಬುದ್ಧಿ ಶಕ್ತಿ ಸನ್ನಿವೇಶಗಳಿಗೆ ತಕ್ಕಂತೆ ನೆರವೇರಿಸಿ ಈ ಜನ್ಮವನ್ನು ಅಲ್ಪವಾಗಿಯಾದರೂ ಸಾರ್ಥಕವನ್ನಾಗಿ ಮಾಡಿಕೊಂಡುದೂ ಆಗಿದೆ. ಇಂತಹ ಸುಖ ಸಾಧನಗಳು ಎಷ್ಟು ಹೆಚ್ಚಿನವಾಗಿದ್ದರೂ ಅವಿಶುದ್ಧಿ. ಕ್ಷಯ, ಅತಿಶಯ, ಗಳೆಂಬ ಸಾರ್ವತ್ರಿಕವೂ ಅನಿವಾರ್ಯವೂ ಆಗಿರುವ ದೋಷಗಳಿಂದ ಕೂಡಿಯೇ ಇರುತ್ತಾ ಅವು ಸುಖಾಭಾಸಗಳೇ ಆಗಿರುತ್ತವೆ. ಎಂಬ ಅಂಶವನ್ನು ಮನಗಂಡುದೂ ಆಗಿದೆ. ಆದುದರಿಂದ ಇಂಥವುಗಳಲ್ಲಿ ಆಶೆಯು ಇನ್ನೂ ಹೆಚ್ಚಾಗುತ್ತಾ ಮುಂದುವರಿಯದೆ, ಅಲಂಬುದ್ಧಿಯು ಎಂದರೆ, ಇಷ್ಟುಸಾಕು, ಇನ್ನೂ ಬೇಡ, ಎಂಬ ತೃಪ್ತಿ ಮನೋಭಾವವು ನನ್ನ ಹೃದಯದಲ್ಲಿ ಬಲಗೊಳ್ಳುವಂತಾಗಲಿ. ಏಕೆಂದರೆ ಈ ಆಶೆಗಳಿಗೆ ಪರ್ಯವಸಾನವೇ ಉಂಟಾಗದೇ, ಶಾಂತಿಸುಖಗಳು ಎಂದಿಗೂ ದೊರೆಯದೇ ಹೋಗಿ, ನಿಶ್ರ್ಶೇಯಸ ಪ್ರಾಪ್ತಿಗೆ ಇವು ಅಡ್ಡಿಗಳಾಗಿಯೇ ಪರಿಣಮಿಸುತ್ತವೆ. ಆದುದರಿಂದ ನಾನು ಯಾವಾಗಲೂ ಪರತತ್ವಜ್ಞಾನದ ಸುಖವನ್ನೂ, ಮೇಲಾದ ವೈರಾಗ್ಯವನ್ನೂ, ಮೋಕ್ಷದ,ನಿತ್ಯಾನಂದದ ಅಪರೋಕ್ಷಾನುಭವವನ್ನೂ ಸಂತೋಷದಿಂದ ಪಡೆಯುವಂತಾಗಲೆಂದು ಪರಮೇಶ್ವರನಲ್ಲಿ ಕೃತಜ್ಞತೆಯಿಂದ ವಿಜ್ಞಾಪಿಸುತ್ತಾ ಪ್ರಾರ್ಥಿಸುತ್ತಿದೇನೆ.

ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ಮಹಾಪುರಾಣಂ ಲೈಂಗಾಖ್ಯಂ ವರ ಕನ್ನಡ ಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ಪರ್ಯವರ್ತಯದಾದರಾತ್ ॥
ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥

ಓಂತತ್ಸತ್ ಬ್ರಹ್ಮಾರ್ಪಣಮಸ್ತು.

